



# ತುಮಕೂರಿನ ರವೀಂದ್ರ ಕಲಾನಿಕೇತನ



ಚಿತ್ರ-ಲೇಖನ : ಪರಂಜ್ಯೋತಿ

(ಲೇಖನ ಪುಟ ೩೮ರಲ್ಲಿ)











# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಆಚಾರ್ಯ, ರಾಂಚಂದ್ರ ಕೊಪ್ಪಲು, ಜಿ. ಎಂ. ಬೊಮ್ನಳ್ಳಿ,
ಮೈಕೆಲ್ ಮೆಕಾರ್ಡಿ, ಶ್ರೀಹರಿ

ಮುಖಪುಟ : ಮೈಸೂರಿನ ರಂಗಾಯಣ ಪ್ರಸ್ತುತ ಪಡಿಸಿದ ಕುವೆಂಪು ಅವರ
'ಮಲೆಗಳಲ್ಲಿ ಮದುಮಗಳು' ನಾಟಕದ ದೃಶ್ಯ; ನಿರ್ದೇಶನ : ಸಿ. ಬಸವಲಿಂಗಯ್ಯ

ವಿನ್ಯಾಸ : ನವಕರ್ನಾಟಕ ವಿನ್ಯಾಸ — ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ಪ್ರತಿ ತಿಂಗಳೂ ದಂತೇವಾಡದ ಯಾವುದಾದರೊಂದು ಭೀಕರ ದುರಂತದ ಪ್ರಸ್ತಾಪದಿಂದ ಆರಂಭಿಸಬೇಕಾಗಿ ಬಂದಿರುವುದು ಶೋಚನೀಯ. ಈ ಬಾರಿ ಒಂದು ಬಸ್ಸು ಬಾಂಬಿನ ಸ್ಫೋಟದಿಂದ ಉಡಾಯಿಸಲ್ಪಟ್ಟಿದೆ, ಹಲವರು ಮೃತರಾಗಿದ್ದಾರೆ, ಇನ್ನುಳಿದವರು ತೀವ್ರವಾಗಿ ಗಾಯಗೊಂಡಿದ್ದಾರೆ. ಇದಕ್ಕೆ 'ಹೊಸತು' ಕಂಬನಿಗರೆಯುತ್ತದೆ. ಸನ್ನಿವೇಶವು ತಿಳಿಯಾಗಲು ಯಾವ ಕ್ರಮಗಳು ಸೂಕ್ತವೆಂದು ಪಟ್ಟಿಮಾಡುವುದು ಸುಲಭ ಆದರೆ ಅದನ್ನು ಕಾರ್ಯಗತಗೊಳಿಸಲು ಪ್ರಭುತ್ವವು ಸಿದ್ಧವಿಲ್ಲ. ಕನಿಷ್ಠ ಇಂತಿಷ್ಟು ಸಮಸ್ಯೆಗಳು ಬಗೆಹರಿದರೆ ತಾವು ಸುಮ್ಮನಾಗುವುದಾಗಿ ನಕ್ಸಲರು ಎಂದೂ ಹೇಳಿಲ್ಲ, ಬಹುಶಃ ಹೇಳುವುದೂ ಇಲ್ಲ; ಏಕೆಂದರೆ ಅವರದು ಬೇಡಿಕೆ-ಕೇಂದ್ರಿತ ಹೋರಾಟವಲ್ಲ, ವ್ಯವಸ್ಥೆಯ ಆಮೂಲಾಗ್ರ ಬದಲಾವಣೆಗಾಗಿ ಸಂಘರ್ಷ. ವರ್ಗ ಸಂಘರ್ಷವು ಇದೇ ಸ್ವರೂಪದ್ದಾಗಿರಬೇಕೆ ಎನ್ನುವುದು ಪ್ರಶ್ನೆ. ಅದಕ್ಕೆ ಸಮಗ್ರವಾದ ಉತ್ತರ ಸುಲಭವಲ್ಲ. ಎತ್ತ ಹೆಜ್ಜೆ ಹಾಕಬೇಕೆಂಬ ಸೂಚನೆ ಸಾಧ್ಯ, ಅದನ್ನು ಈ ಸಂಚಿಕೆಯ ಸಂಪಾದಕೀಯದಲ್ಲಿ ಸ್ಥೂಲವಾಗಿ ಸೂಚಿಸಲಾಗಿದೆ.

ಚಾರ್ಲ್ಸ್ ಡಿಕಿನ್ಸ್ ಇಂಗ್ಲೆಂಡಿನ ಚರಿತ್ರೆ ಬರೆಯುವಾಗ ಆರನೆಯ ಹೆನ್ರಿಯ ಆಡಳಿತದ ದೌರ್ಜನ್ಯಗಳನ್ನು ವಿಸ್ತಾರವಾಗಿ ನಿರೂಪಿಸಿದ್ದಾನೆ. ಶೇಕ್ಸ್‌ಪಿಯರನ ಮೂರು ನಾಟಕಗಳಿಗೆ ವಸ್ತುವಾಗುವಷ್ಟು ಸಾಂದ್ರವಾದ ದುರುಳ ಈ ಹೆನ್ರಿ. ದಾರ್ಶನಿಕನಂತೆ ವಿಶ್ಲೇಷಿಸುತ್ತಾ ಡಿಕಿನ್ಸ್ ಹೇಳುವುದಿದು : ''ತಮ್ಮ ಸ್ವಂತ ದೇಶದ ಜನರ ವಿರುದ್ಧವೇ ಅಸ್ವಾಭಾವಿಕವಾಗಿ ಕಾದಾಡುವಾಗ ಕಾಣಬರುವ ವಿಶೇಷವೇನೆಂದರೆ ಅಲ್ಲಿ ಅತ್ಯಂತ ಅಸ್ವಾಭಾವಿಕವಾದ ಕ್ರೌರ್ಯವಿರುತ್ತದೆ. ಅದೆಷ್ಟು ಕೋಪ ತುಂಬಿರುತ್ತದೆ! ಬೇರೆ ದೇಶದ ಶತ್ರುವಿನ ವಿರುದ್ಧ ಸೆಣಸುವಾಗ ಕೂಡ ಅಷ್ಟು ಭಯಂಕರ ಕೋಪ, ಕ್ರೌರ್ಯಗಳಿರಲಾರವೇನೋ!''

ನಕ್ಸಲರ ಮತ್ತು ಪ್ರಭುತ್ವದ ನಡುವಿನ ಘರ್ಷಣೆಯಲ್ಲಿ ನಾವಿದನ್ನು ಕಾಣುತ್ತಿದ್ದೇವೆ. ಅಸ್ವಾಭಾವಿಕವು ಹೋಗಿ ಸರಳ ಸ್ವಭಾವಕ್ಕೆ ಅನುವಾಗುವಂತಹ ವಾತಾವರಣವನ್ನು ನಿರೀಕ್ಷಿಸೋಣ.

* * *

ಸರ್ವೋಚ್ಚ ನ್ಯಾಯಾಲಯದ ಪ್ರಮುಖ ನ್ಯಾಯಾಧೀಶ ಶ್ರೀ. ಬಾಲಕೃಷ್ಣನ್ ನಿವೃತ್ತರಾಗುವ ಮೂರು ದಿನದ ಮೊದಲು ಬಳ್ಳಾರಿಯ ಗಣಿ ಮಾಲಿಕ ಮತ್ತು ರಾಜ್ಯ ಸಂಪುಟ ಸಚಿವ ರೆಡ್ಡಿ ಸಂಬಂಧಿತ ಮೊಕದ್ದಮೆಯ ತೀರ್ಪು ಪ್ರಕಟವಾಯಿತು. ಅಕ್ರಮ ಗಣಿಗಾರಿಕೆಯ ಪರವಾದ ತೀರ್ಪಿದೆಂದು ಕೆಲವರು ವ್ಯಾಖ್ಯಾನಿಸಿದ್ದಾರೆ. ವಿವಾದವಿಲ್ಲದೆಡೆ ಗಣಿಗಾರಿಕೆ ಮಾಡಿಕೊಳ್ಳ ಲಡ್ಡಿಯಿಲ್ಲವೆಂಬುದು ತೀರ್ಪು. ಆದರೆ ''ವಿವಾದವಿಲ್ಲದ ಪ್ರದೇಶ'' ಯಾವುದೆಂಬುದೇ ವಿವಾದದ ವಿಷಯ! ಆದ್ದರಿಂದ ಇದು ಘನಂದಾರಿ ತೀರ್ಪೇ ಇರಬೇಕೆಂದೆನಿಸುತ್ತದೆ. ಮುಖ್ಯ ನ್ಯಾಯಾಧೀಶರ ನಿವೃತ್ತಿಗೆ ಕೇವಲ ಮೂರು ದಿನ ಮುಂಚೆ ತೀರ್ಪು ಬಂದಿದ್ದಕ್ಕೆ ಹಲವು ಗುಮಾನಿಗಳಿವೆ. ಒಂದು ಕಡೆ ಖನಿಜಗಳನ್ನು ತುಂಬಿಕೊಳ್ಳುವ ಚೀಲ, ಇನ್ನೊಂದೆಡೆ ಚೀಲವಿದೆಯೋ ಇಲ್ಲವೋ ಹೇಳುವಂತಿಲ್ಲ. ನ್ಯಾಯಾಲಯಗಳಲ್ಲಿ ಕಾಕತಾಳೀಯ ನ್ಯಾಯಕ್ಕೆ ಅವಕಾಶವಿಲ್ಲವೆಂದೇನೂ ಇಲ್ಲ. ಕಾರ್ಯ-ಕಾರಣ ಸಂಬಂಧವಿರದಂತಹ ಎರಡು ಘಟನೆಗಳು ಅಂತಹ ಸಂಬಂಧ ಹೊಂದಿರುವಂತೆ ತೋರುವುದನ್ನು ತರ್ಕಶಾಸ್ತ್ರದಲ್ಲಿ ಕಾಕತಾಳೀಯ ನ್ಯಾಯವೆನ್ನಲಾಗುತ್ತದೆ. ಈಚಲು ಗಿಡದ ಗರಿ ಒಣಗಿ ಕೂತಿದೆ, ಈಗಲೋ ಆಗಲೋ ಉದುರಬೇಕು, ಹೇಗೂ ಉದುರುತ್ತದೆ ಎಂಬುದು ಖಚಿತ. ಆಕಸ್ಮಿಕವಾಗಿ ಅದೇ ವೇಳೆಗೆ ಕಾಗೆಯೊಂದು ಬಂದು ಆ ಗಿರಿಯ ಮೇಲೆ ವಿರಮಿಸುತ್ತದೆ. ಅಲ್ಲಿಗೇ ವಿರಾಮ ಕಟ್ ! ಏಕೆಂದರೆ, ಅದರ ಭಾರಕ್ಕೆ ಗರಿ ಬಿದ್ದುಹೋಯಿತು ! ಗರಿ ಬಿದ್ದದ್ದು ಕಾಗೆಯ ಭಾರದಿಂದಲ್ಲ, ಆದರೆ ಹಾಗೆ ತೋರುತ್ತದೆ, ಅಷ್ಟೆ. ಹೇಗೂ ನಿವೃತ್ತರಾಗುತ್ತಿದ್ದರು, ಅದಕ್ಕೆ ಮುನ್ನ ತೀರ್ಪು ಹೊರಬಿದ್ದಿತು, ಅಷ್ಟೆ. ನ್ಯಾಯಾಲಯದಲ್ಲಿ ಊಹಾಪೋಹಗಳಿಗೆ ಅವಕಾಶವಿಲ್ಲ; ಅವರವರಿಗೆ ತೋಚಿದ್ದನ್ನು ಅವರವರು ಹೇಳಿಕೊಳ್ಳಬಹುದು. ಸದ್ಯಕ್ಕಂತೂ ಅಕ್ರಮವು ಸಕ್ರಮವೆಂಬಂತೆ ಭಾಸವಾಗುವ ತೀರ್ಪು ಬಂದಿದೆ. ''ಸರ್ವೆ ಟೀಮ್'' ಏನು ಹೇಳುತ್ತದೋ ಕಾದುನೋಡಬೇಕು. ಅಲ್ಲಿ ಇನ್ನೊಂದು ರೀತಿಯ ಕಾಕತಾಳೀಯವೇನಾದರೂ ಘಟಿಸಿದರೆ ವಿಸ್ಮಯಕ್ಕೆ ನಮೋನ್ನಮಃ !! ಅಂದ ಹಾಗೆ, ನಮ್ಮ ಬೆಂಗಳೂರಿನ ಅರ್ಕಾವತಿ ಲೇಔಟ್ ಕುರಿತ ತೀರ್ಪೂ ತುರ್ತಾಗಿ ಹೊರಬಿದ್ದಿತಂತೆ, ಹೌದೆ ?

* * *

ಯಾವುದಾದರೂ ಯೋಜನೆ ಕಾರ್ಯಗತವಾಗುವಾಗ ಅಕಸ್ಮಾತ್ ಸಾರ್ವಜನಿಕರಿಗೆ ತೊಂದರೆಯುಂಟಾಗುವ ಸಂಭವವಿದ್ದರೆ ಆಗ ಯೋಜನೆಯನ್ನು ಅಂಗೀಕರಿಸುವ ಮೊದಲು ''ಸಾರ್ವಜನಿಕ ವಿಚಾರಣೆ'' ನಡೆಯುತ್ತದೆ. ಅದರಲ್ಲಿ ಭರತನ ನಾಟ್ಯಶಾಸ್ತ್ರವು ಪ್ರತಿಪಾದಿಸುವ ಎಲ್ಲ ರಸಗಳೂ ಇರಲು ಶಕ್ಯ. ಅಂದರೆ, ಒಬ್ಬೊಬ್ಬ ಪಾತ್ರಧಾರಿಗೂ ವಿಭಿನ್ನ ರಸಗಳ ಅನುಭವ

(೬ನೇ ಪುಟಕ್ಕೆ)




ಸಂಪುಟ-೧೧ ಸಂಚಿಕೆ - ೧೧ ಜೂನ್ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com

# ನಕ್ಸಲೀಯರ ನಿಗ್ರಹ

**ಸಂಪಾದಕೀಯ**

ದಂತೇವಾಡದಲ್ಲಿ ಶಾಂತಿ ನೆಲೆಸುವ ಸೂಚನೆಯೇನೂ ಇಲ್ಲ. ಪರಸ್ಪರ ವಿರೋಧಿಗಳೆಂದು ಗುರುತಿಸಿಕೊಂಡವರು ಏನಾದರೂ ಮುಖಾಮುಖಿ ಚರ್ಚೆ ನಡೆಸಿದರಲ್ಲವೆ ಶಾಂತಿಯ ಬೀಜ ಬಿತ್ತಬಹುದು! ಒಂದೇ ದೇಶದ ಎರಡು ಬಣಗಳು ಬದ್ಧವೈರಿಗಳಂತೆ ನಡೆದುಕೊಳ್ಳುತ್ತಿರುವುದರಲ್ಲಿ ಅಚ್ಚರಿಯೇನೂ ಇಲ್ಲ, ಏಕೆಂದರೆ ಅವರು ಎರಡು ಬೇರೆಬೇರೆ ವರ್ಗದವರು ಮತ್ತು ಇಬ್ಬರಿಗೂ ವರ್ಗ ಸಂಘರ್ಷದಲ್ಲಿ ನಂಬಿಕೆ ಇದೆಯೇ ಹೊರತು ಸಮಾಧಾನದಿಂದ ಒಬ್ಬರು ಇನ್ನೊಬ್ಬರ ಅಭಿಪ್ರಾಯವನ್ನು ಆಲಿಸಿ ತೀರ್ಮಾನ ಕೈಗೊಳ್ಳುವ ಸ್ಥಿತಿಯಲ್ಲಿಲ್ಲ. ಒಂದು ಕಡೆ ಜೀವ ಮತ್ತು ಜೀವನದ ಹಕ್ಕು, ಇನ್ನೊಂದು ಕಡೆ ದೇಶದ ಸಂಪತ್ತನ್ನು ಖಾಲಿ ಮಾಡುವ ಹುಚ್ಚು, ಅದನ್ನು ವಿದೇಶಗಳಿಗೆ ರವಾನಿಸಿ ಮೋಜು ಮಾಡಬಹುದೆಂಬ ಮೂರ್ಖತನ. ಛತ್ತೀಸಗಢದ ಗುಡ್ಡಗಾಡು ಜನರು ದೆಹಲಿಯ ಆಳ್ವಿಕೆ ತಮ್ಮದಾಗಬೇಕೆಂದೇನೂ ಬಯಸಿಲ್ಲ, ಅವರಿಗೆ ಬೇಕಾದ್ದು ಉಪಟಳಗಳಿಲ್ಲದೆ ಹಿಂದಿನಂತೆ ನಿಸೂರಾಗಿ ಬಾಳುವ ಅವಕಾಶ. ಅವರ ಮೇಲೆ ಸಾಲ್ವಾ ಜುಡುಂ ಶ್ವಾನದಳ ಎರಗುವುದು ಸಮಸ್ಯೆಯನ್ನು ಹೆಚ್ಚು ಮಾಡುತ್ತದೆ, ನಿವಾರಿಸುವುದಿಲ್ಲ. ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ಬಂದು ಅರವತ್ತಮೂರು ವರ್ಷಗಳಾದರೂ ಕನಿಷ್ಠ ನಾಗರಿಕ ಸೌಲಭ್ಯ ಅವರಿಗೆ ಕಲ್ಪಿಸಿಕೊಟ್ಟಿಲ್ಲದ ಸರ್ಕಾರಗಳಿಗೆ ಅವರು ಧಿಕ್ಕಾರ ಹೇಳುವುದು ತಪ್ಪೆ? ತಪ್ಪೇನಾದರೂ ಇದ್ದರೆ ಅದು ಧಿಕ್ಕಾರ ಹೇಳುವುದು ಹೇಗೆಂಬುದರ ಬಗ್ಗೆ. ಹೇಗೆ ಹೇಳಬೇಕೆಂದು ಅವರಿಗೆ ಯಾರು ಹೇಳಬೇಕು ? ಅದೇ ಗೊಂದಲದ ವಿಷಯ. ಧಿಕ್ಕರಿಸುವವರು ಹೇಗೆ ಅದನ್ನು ಮಾಡಬೇಕೆಂದು ಸ್ವತಃ ತೀರ್ಮಾನಿಸುತ್ತಾರೆ, ಅದರಲ್ಲಿ ನಿಮ್ಮದೇನು ಉಸಾಬರಿ, ಎಂಬುದು ಒಂದು ಅಭಿಪ್ರಾಯ; ಎಲ್ಲಾದರೂ ಉಂಟೆ, ನಮ್ಮ ಮಹಾಜನರು ಸಂವಿಧಾನ ರಚಿಸಿಕೊಟ್ಟಿದ್ದಾರಲ್ಲ, ಅದಕ್ಕಿಂತಲೂ ಅವರಿಗಿನ್ನೇನು ಬೇಕು, ಅದನ್ನೇ ಆಯುಧವನ್ನಾಗಿ ಮಾಡಿಕೊಂಡು ಅದೇನೇನು ಬೇಕೋ ಎಲ್ಲಾ ಪಡೆದುಕೊಳ್ಳಲಿ, ಎಂಬುದು ಇನ್ನೊಂದು ಅಭಿಪ್ರಾಯ. ಇದೆಲ್ಲಾ ಸುಮ್ಮನೆ ಹಿಂಸೆ - ಅಹಿಂಸೆಗಳ ಸರಳ ಪ್ರಶ್ನೆಯಲ್ಲ, ಏಕೆಂದರೆ ಎರಡು ಕಡೆಯವರೂ ಅನುಸರಿಸುತ್ತಿರುವುದು ತಥಾಕಥಿತ ಹಿಂಸಾ ಮಾರ್ಗವನ್ನೆ. ತುಳಿತಕ್ಕೊಳಗಾದವರು ಸುಮ್ಮನೆ ಎಲ್ಲವನ್ನೂ ಸಹಿಸುತ್ತಾ ಬಂದಿರುವುದೂ ಹಿಂಸೆಯನ್ನೇ.

ಅದೇಕೋ ನಕ್ಸಲೀಯರು ತಮ್ಮನ್ನು ತಾವು ಮಾವೋವಾದಿಗಳೆಂದು ಕರೆದುಕೊಳ್ಳುತ್ತಿದ್ದಾರೆ. ಚೀಣಾದಲ್ಲಿ ಮಾವೋವಾದಕ್ಕೆ ಒದಗಿರುವ ದುರ್ಗತಿಯನ್ನವರು ಕಂಡಿಲ್ಲದಿರಬಹುದು. ಕಾಡಿನಲ್ಲಿರುವವರಿಗೆ ಬೀಜಿಂಗ್ ಗೋಚರಿಸಲಾರದೋ ಏನೋ, ಅಥವಾ ತಮ್ಮ ಕ್ರಾಂತಿಯ ಅಂತರರಾಷ್ಟ್ರೀಯ ಲಕ್ಷಣವು ಸ್ಫುಟವಾಗಿ ತೋರಬೇಕಾದರೆ 'ಮಾವೋವಾದ' ಎಂಬ ಫಲಕದ ಅಗತ್ಯವಿರಬಹುದು. ''ನಕ್ಸಲೀಯ'' ಎಂದರೆ ಬಹುಶಃ ಅಪ್ಪಟ ದೇಸಿ ಆಗಿಬಿಡುತ್ತದೆಂಬ ಸಂಕೋಚವಿರಬಹುದು. ಹೆಸರಿನಲ್ಲಿ ಗೊಂದಲವಿರುವಂತೆ ನಕ್ಸಲೀಯರನ್ನು ಅರ್ಥಮಾಡಿಕೊಳ್ಳುವಲ್ಲಿ, ಅವರನ್ನು ಹಿಮ್ಮೆಟ್ಟಿಸಲು ಅನುಸರಿಸಬೇಕಾದ ವಿಧಾನದಲ್ಲಿ, ಸಹ ಗೊಂದಲವಿದೆ. ಆಳುವ ವರ್ಗದ ಅನೇಕ ಗೊಂದಲಗಳಲ್ಲಿ ಇದೂ ಒಂದೆಂದು ಅದನ್ನು ತೇಲಿಸಲಾಗುವುದಿಲ್ಲ. ನಕ್ಸಲೀಯರನ್ನು ಸಂಭಾಳಿಸಬೇಕೆ, ಸಂಭಾಷಣೆಗೆ ಕರೆಯಬೇಕೆ, ಅಥವಾ ಸಂಹರಿಸಬೇಕೆ ? ಇದಕ್ಕೆ ಸೋನಿಯಾ ಗಾಂಧಿ ಮತ್ತು ಚಿದಂಬರಂ ಬೇರೆ ಬೇರೆ ಉತ್ತರಗಳನ್ನು ಕೊಡುತ್ತಾರೆ. ಕಾಂಗ್ರೆಸ್ ಅಧ್ಯಕ್ಷೆ ತನ್ನ ಪಕ್ಷದ ಮುಖ್ಯಮಂತ್ರಿಗಳಿಗೆಲ್ಲಾ ಪತ್ರ ಬರೆದು ''ಅಭಿವೃದ್ಧಿ ಕಾರ್ಯಕ್ರಮ''ಗಳನ್ನು ವಿಸ್ತರಿಸಿ, ನೇಮದಿಂದ ಅನುಷ್ಠಾನಕ್ಕೆ ತಂದು, ಲಂಚ-ರುಷುವತ್ತುಗಳನ್ನು ಕಿತ್ತುಹಾಕಿ, ಜನರ ಜೀವನಕ್ಕೆ ಉತ್ತಮ ಸಾಧನಗಳನ್ನು ಒದಗಿಸುವುದು ನಕ್ಸಲೀಯರನ್ನು ಅಪ್ರಸ್ತುತಗೊಳಿಸಲು ಇರುವ ಮಾರ್ಗವೆಂದು ತಿಳಿಸಿ, ಆ ದಿಕ್ಕಿನಲ್ಲಿ ಕೆಲಸ ಮಾಡಬೇಕೆಂದು ಸೂಚಿಸಿದ್ದಾರೆಂದು ವರದಿಯಾಗಿದೆ. ಚಿದಂಬರಂ ಸ್ವರ ಇದಕ್ಕೆ ಭಿನ್ನವಾದ್ದು. ಅವರ ಗಾರ್ದಭ ಗಾನಕ್ಕೆ ಸಪ್ತ ಸ್ವರಗಳಲ್ಲ, ಸಹಸ್ರ ಸ್ವರಗಳಿವೆ. ಇಂದು ಹ್ರಸ್ವ, ನಾಳೆ ತಾರಕ, ಮತ್ತೆ ಮಂದ್ರ. ಯಾರು ಯಾವ ಕಡೆಗೆಳೆದರೆ ಆ ಕಡೆಗೆ ಅವರ ಸಂಚಾರ. ಸ್ಥಾಯಿ ಎಂಬುದೇನೂ ಅವರಿಗಿಲ್ಲ. ಆದ್ದರಿಂದ ಒಮ್ಮೆ ಹೇಳುತ್ತಾರೆ, ನಕ್ಸಲರು ನಮ್ಮವರೇ ಆದ್ದರಿಂದ ಅವರ ಮೇಲೆ ಸೈನ್ಯ ಬಳಸುವುದಿಲ್ಲ, ಎಂದು; ಇನ್ನೊಮ್ಮೆ ಹೇಳುತ್ತಾರೆ, ಹಿಂಸೆಯನ್ನು ನಿಲ್ಲಿಸಿ ಬಂದರೆ ಅವರೊಡನೆ ಸಂಧಾನಕ್ಕೆ ಸಿದ್ಧ, ಎಂದು. ಇತ್ತೀಚೆಗೆ (ಮೇ ೧೭) ಹೇಳಿದ್ದಾರೆ, ಪಶ್ಚಿಮ ಬಂಗಾಳದ ಮುಖ್ಯಮಂತ್ರಿಯೂ ಸೇರಿದಂತೆ ಹಲವು ಮುಖ್ಯಮಂತ್ರಿಗಳು ನಕ್ಸಲರನ್ನು ಸದೆಬಡಿಯಲು ವಿಮಾನ – ಹೆಲಿಕಾಪ್ಟರ್‌ಗಳನ್ನು ಬಳಸಬೇಕೆಂದು ಒತ್ತಾಯಿಸಿದ್ದಾರಾದ್ದರಿಂದ ಅದನ್ನು ಮಾಡಬೇಕೆ ಅಥವಾ ಬೇಡವೆ ಎಂದು ನಿರ್ಧರಿಸಲಾಗುವುದು, ಎಂದು. ಅವರು ನಾಗರಿಕ ಸೌಲಭ್ಯ, ಜೀವನದ ಹಕ್ಕು, ಸಂಪತ್ತಿನ ಲೂಟಿ, ಸಾಲ್ವಾ ಜುಡುಂನ ದೌರ್ಜನ್ಯ, ಇವುಗಳ ಬಗ್ಗೆ ಚಿಂತನೆ ನಡೆಸುವುದಿಲ್ಲ. ಆ ಕೆಲಸವನ್ನು ಮಾಡಲು ಅವರ ಕಾರ್ಯದರ್ಶಿ ಜಿ. ಕೆ. ಪಿಳ್ಳೈ ಹೇಗೂ ಇದ್ದಾರಲ್ಲ! ಆ ಪಿಳ್ಳೆ ಏನುಮಾಡುತ್ತಾರೆಂದರೆ ಮಾಧ್ಯಮಗಳಿಗೆ ಸಂದರ್ಶನ ನೀಡಿ ತುಟಿ ಮುಚ್ಚಿಕೊಳ್ಳುತ್ತಾರೆ!

ನಕ್ಸಲರಿಂದಾಗಿ ಸಿಂಹಾಸನ ಕಳೆದುಕೊಳ್ಳಬೇಕಾದೀತೆಂಬ ಭೀತಿ ಇನ್ನೂ ಇಲ್ಲ, ಆದ್ದರಿಂದ ಮನಮೋಹನ ಸಿಂಗ್ ಮತ್ತು ಸುಷ್ಮಾ ಸ್ವರಾಜ್ ನೆಮ್ಮದಿ ಕಳೆದುಕೊಂಡಿಲ್ಲ. ಅವರಿಬ್ಬರಿಗೂ ಇರುವ ಯಜಮಾನ ಒಬ್ಬನೇ : ಸದ್ಯಕ್ಕೆ ಅವನನ್ನು ಬಹುರಾಷ್ಟ್ರೀಯ ಕಂಪನಿಯೆಂದು ಕರೆದರೆ ಆದೀತು; ಆಮೇಲೆ ಪಾಸ್ಕೊ, ವೇದಾಂತ, ಟಾಟಾ, ಮುಂತಾದ ಅಂಕಿತ ನಾಮಗಳನ್ನು ಹೇಳಬಹುದು. ತೆಲುಗಿನಲ್ಲಿ ಯಾರನ್ನಾದರೂ ಶಪಿಸಬೇಕಾದರೆ, ''ಅಯ್ಯೋ, ನೀ ಪಾಸು ಕೂಲ'' ಎನ್ನುತ್ತಾರೆ. ಅಂದರೆ, ನೀನು ಸಾಯಬಾರದೆ, ಎಂದು. ದಕ್ಷಿಣ ಕೊರಿಯಾದ ಕಂಪನಿ ಪಾಸ್ಕೊ ಒರಿಸ್ಸಾದ ರೈತರಿಗೆ ಮುಖ್ಯಮಂತ್ರಿ ನವೀನ್ ಪಟ್ನಾಯಕ್ ಮುಖೇನ ಹೇಳುತ್ತಿರುವುದು ಅದನ್ನೇ. ಅದನ್ನು ಕೇಳಿ ಜನ ಸಿಟ್ಟಿಗೇಳಕೂಡದೆಂದು ಮನಮೋಹನ ಸಿಂಗ್ – ಪ್ರಣವ ಮುಖರ್ಜಿ – ಅಹ್ಲುವಾಲಿಯ ತಾಕೀತು ಮಾಡುತ್ತಾರೆ. ಹೀಗಿರುವಾಗ ''ಪ್ರಜಾಪ್ರಭುತ್ವ ಮಾರ್ಗದಲ್ಲಿ ಅಹಿಂಸಾತ್ಮಕವಾಗಿ'' ಜನ ಏನು ಮಾಡಬೇಕು ? ಇದು ಕೇವಲ ಸೈದ್ಧಾಂತಿಕ ಚರ್ಚೆಯ ವಸ್ತುವಲ್ಲ, ಪ್ರಾಯೋಗಿಕವಾಗಿ ಉತ್ತರಿಸಬೇಕಾದ ಪ್ರಸಂಗ. ಮೇ ೧೫ರಂದು ಒರಿಸ್ಸಾದ ಜಗತ್ಸಿಂಗ್‌ಪುರ ಜಿಲ್ಲೆಯ ಬಾಲಿತೂಠದಲ್ಲಿ ಪಟ್ನಾಯಕ್ ಸರ್ಕಾರ ತೀರ ಅಸಹನೆಯಿಂದ (ಅಥವಾ ಪಾಸ್ಕೋವನ್ನು ಬಲವಾಗಿ ಆಲಂಗಿಸಿಕೊಳ್ಳಲು) ರೈತರನ್ನು ಹಿಗ್ಗಾಮುಗ್ಗ ಥಳಿಸಿತು, ಕೈ-ಕಾಲು-ತಲೆ ಮುರಿಯಿತು, ರಕ್ತ ಹರಿಸಿತು. ರೈತರು ಯಾವ ಹಿಂಸೆಯಲ್ಲೂ ತೊಡಗಿರಲಿಲ್ಲ, ಆದರೆ ಪಟ್ನಾಯಕ್ ಪ್ರಜಾಪ್ರಭುತ್ವ ಮದ್ದಾನೆಯಂತೆ ಎರಗಿಬಂದು ಎಲ್ಲರನ್ನೂ ತುಳಿದುಹಾಕಿತು. ಢಿಂಕಿಯ ಮತ್ತು ಇತರ ಹಳ್ಳಿಗಳ ಜನ ಪಾಸ್ಕೋಗೆ ತಮ್ಮ ಭೂಮಿ ಕೊಡುವುದಿಲ್ಲವೆಂದು ಹಠ ಹಿಡಿದು ಜನವರಿ ೨೬ರಿಂದ (ಅದು ನಮ್ಮ ಸಂವಿಧಾನದ ದಿನ, ನೆನಪಿರಲಿ) ಪ್ರತಿಭಟಿಸುತ್ತಿದ್ದಾರೆ, ರಸ್ತೆಗೆ ಅಡ್ಡ ಮಲಗಿದ್ದಾರೆ. ಆ ರಸ್ತೆಯಲ್ಲಿ ಹೋಗದಿದ್ದರೆ ಪಾಸ್ಕೋಗೆ ಚಿನ್ನದ ಗಂಟು ಸಿಗುವುದಿಲ್ಲ ಮತ್ತು

ಚಿನ್ನ ಕೊಡಿಸುವುದುದಾಗಿ ಒರಿಯಾ ಮಾತನಾಡದ ಒರಿಸ್ಸಾ ಮುಖ್ಯಮಂತ್ರಿ ಭರವಸೆ ನೀಡಿದ್ದಾರೆ. ಪಾಸ್ಕೋಗೆ ಕಬ್ಬಿಣದ ಅದುರಿನ ರೂಪದ ಚಿನ್ನವನ್ನು ಬೇಕಾಬಿಟ್ಟಿ ದಾನಮಾಡುವುದೇ ನವೀನ್ ಪಟ್ನಾಯಕರ ನವೀನ ಮಾದರಿಯ ಒರಿಸ್ಸಾ ಅಭಿವೃದ್ಧಿ. ಭಾರತ ಕಮ್ಯುನಿಸ್ಟ್ ಪಕ್ಷವು ಈ ರೀತಿಯ ''ಅಭಿವೃದ್ಧಿ''ಯನ್ನು ನಿರಾಕರಿಸಿ ಪಾಸ್ಕೊ-ವಿರೋಧಿ ಸಂಘಟನೆಗಳ ನೇತೃತ್ವ ವಹಿಸಿದೆ. ಪರದೀಪ್ ಬಂದರಿಗೆ ಪರ್ಯಾಯವಾಗಿ ಪಟ್ನಾಯಕ್ ಪಾಸ್ಕೋಗೆ ಬೇರೊಂದು ಬಂದರು ನೀಡಲಿದ್ದಾರೆ, ಕೃಷಿ ನೀರಾವರಿಗೆ ಬೇಕಾದ ಮಹಾನದಿಯ ನೀರನ್ನು ಪಾಸ್ಕೋಗೆ ಸುರಿಯುತ್ತಾರೆ. ಇದಕ್ಕೆ ಜನರ ಸಮ್ಮತಿ ಇಲ್ಲ. ಎಲ್ಲ ಎಡಪಕ್ಷಗಳು ಪಾಸ್ಕೊ ಪ್ರತಿರೋಧ ಸಂಗ್ರಾಮ ಸಮಿತಿಯಲ್ಲಿವೆ, ಜೊತೆಗೆ ಸಹಸ್ರಾರು ಪಕ್ಷೇತರರೂ ಇದ್ದಾರೆ; ಅವರಲ್ಲಿ ಯಾರೂ ನಕ್ಸಲರಲ್ಲ. ಈ ಸಮಿತಿಯು ಸೋತರೆ ಜಯ ಯಾರಿಗೆ ? ಪಾಸ್ಕೋಗೆ ಮತ್ತು ನಕ್ಸಲೀಯರಿಗೆ, ಅಷ್ಟೆ. ಅಂದರೆ, ಪ್ರಜಾಪ್ರಭುತ್ವವಾದಿ ಸಂಘಟನೆಗಳ ಕಾರ್ಯಾಚರಣೆಯನ್ನು ಆಳುವ ವರ್ಗದ ಸರ್ಕಾರವು ಹಿಂಸಾತ್ಮಕವಾಗಿ ಹತ್ತಿಕ್ಕುವುದನ್ನು ನಿರಂತರವಾಗಿ ಮುಂದುವರಿಸಿದಾಗ ಕೆಲವರಾದರೂ ಇಂದಿನ ರಾಜಕೀಯ-ಆರ್ಥಿಕ ವ್ಯವಸ್ಥೆಯನ್ನು ಮೂದಲಿಸಿ ಎಲ್ಲ ಪಕ್ಷಗಳಿಂದಲೂ ವಿಮುಖರಾಗುತ್ತಾರೆ, ನಕ್ಸಲ್‌ವಾದಕ್ಕೆ ಆಕರ್ಷಿತರಾಗುತ್ತಾರೆ. ಬಂಡವಾಳಶಾಹಿಯ ಎಗ್ಗಿಲ್ಲದ ಲೂಟಿ, ವಿದೇಶಿ ಬಂಡವಾಳದೊಡನೆ ಕೈಜೋಡಿಸುವುದು, ರಾಷ್ಟ್ರೀಯ ಮಾನವಿಕ ಮತ್ತು ನೈಸರ್ಗಿಕ ಸಂಪತ್ತನ್ನು ಪರಭಾರೆ ಮಾಡುವುದು, ಅದನ್ನು ವಿರೋಧಿಸಿದವರೆಲ್ಲಾ ತೀವ್ರಗಾಮಿಗಳು ಇಲ್ಲವೆ ಆತಂಕವಾದಿಗಳು ಎಂಬ ಹೆಸರು ಪಡೆಯುವುದು, ಸಾಮಾನ್ಯ ಜನರ ಜೀವನವು ಭ್ರಷ್ಟಾಚಾರಗಳಿಂದಾಗಿ ಸೊರಗಿಹೋಗುವುದು, ಸಂಸ್ಕೃತಿಯ ಜಪ ಮಾಡುತ್ತಲೇ ಸಾರ್ವಜನಿಕ ಸಂಪತ್ತನ್ನು ದೋಚುವುದು, ಇತಿಹಾಸಕ್ಕೆ ಇಲ್ಲದ-ಸಲ್ಲದ ವೈಭವವನ್ನು ಆರೋಪಿಸುತ್ತಾ ವರ್ತಮಾನ - ಭವಿಷ್ಯಗಳಿಗೆ ಬೆಂಕಿ ಇಕ್ಕುವುದು, ಇವುಗಳಲ್ಲಿ ಯಾವುದನ್ನು ''ಪ್ರಜಾಪ್ರಭುತ್ವರೀತ್ಯಾ ಅಹಿಂಸಾತ್ಮಕವಾಗಿ'' ಸಹಿಸಬಹುದೆಂದು ನಕ್ಸಲರು ಕೇಳುತ್ತಾರೆ. ಪ್ರಭುತ್ವದ ಉತ್ತರ : ಸಾಲ್ವಾ ಜುಡುಂ, ಚಿದಂಬರಂ ಗುಂಡು, ಗ್ರೇಹೌಂಡ್ಸ್, ಹೆಲಿಕಾಪ್ಟರ್. ಅದರಿಂದ ನಕ್ಸಲರ ನಿಗ್ರಹವಾಗುವುದಿಲ್ಲ, ಅವರಿನ್ನಷ್ಟು ವ್ಯಗ್ರರಾಗುತ್ತಾರೆ, ಅಷ್ಟೆ. ಇದು ನಕ್ಸಲೀಯರ ಸಮರ್ಥನೆಯಲ್ಲ, ಅವರ ಹುಟ್ಟು-ವಿಕಾಸಗಳ ಸಾಮಾಜಿಕ-ಆರ್ಥಿಕ ವಸ್ತುಸ್ಥಿತಿ. ಅದನ್ನು ಒಪ್ಪದ ಮನಸ್ಸುಗಳು ಮೈಪರಚಿಕೊಳ್ಳುತ್ತವೆ, ನಕ್ಸಲರನ್ನು ಹೀಯಾಳಿಸುತ್ತವೆ, ಅವರನ್ನು ಬೇಟೆಯಾಡಬೇಕೆನ್ನುತ್ತವೆ. ಆ ಮನಸ್ಸುಗಳಲ್ಲಿ ಪಶ್ಚಿಮ ಬಂಗಾಳದ ಬಸುದೇವ ಭಟ್ಟಾಚಾರ್ಯರದ್ದೂ ಲೀನವಾಗಿರುವುದು ಒಂದು ಸೋಜಿಗ. ದೇಶದ ಸೈನ್ಯವನ್ನು ನಕ್ಸಲರ ದಮನಕ್ಕೆ ಕಳಿಸಿದರೆ ನಕ್ಸಲರು ಗೆಲ್ಲುವುದಿಲ್ಲವೆಂಬುದು ಶತಸ್ಸಿದ್ಧ; ನರ್ಮದೆಯು ಕೆಂಪಾಗುತ್ತಾಳೆ, ಮಹಾನದಿಯಲ್ಲಿ ರಕ್ತದ ಕೋಡಿ ಹರಿಯುತ್ತದೆ. ಶ್ರೀಲಂಕಾದಲ್ಲಿ ಪ್ರಭಾಕರನ್ ಬಣವೇ ಸ್ಥಿರವಾಗಿ ನಿಲ್ಲಲಿಲ್ಲ, ನಮ್ಮ ದೇಶದ ನಕ್ಸಲೀಯರು ಉಳಿಯುವರೆ ! ಆದರೆ ಪ್ರಶ್ನೆ ಇದು : ನಕ್ಸಲರು ರಕ್ತ ಹರಿಸುವುದು ಖಂಡನಾರ್ಹ, ಆದರೆ ಅವರನ್ನು ಕೊಂದು ನಾವು ರಕ್ತ ಹರಿಸುವುದು ಪ್ರಜಾಪ್ರಭುತ್ವ, ಎಂಬ ಸೂತ್ರವನ್ನು ಅಂಗೀಕರಿಸಬೇಕೆ, ಗೌರವಿಸಬೇಕೆ ?

ಮತ್ತೆ ನಾವು ವರ್ಗ ಸಂಘರ್ಷದ ಮಾತಿಗೇ ಹಿಂದಿರುಗಿದಂತಾಯಿತು. ಹಾಗಾದರೆ ಪರಿಹಾರವೆಲ್ಲಿ? ದೇಶದ ಸಂವಿಧಾನವನ್ನು ಇನ್ನು ಸಾವಿರ ವರ್ಷ ಬದಲಾಯಿಸಕೂಡದೆಂದು ಏಳೋ, ಒಂಭತ್ತೋ, ಹದಿಮೂರೋ ಸರ್ವೋಚ್ಚ ನ್ಯಾಯಾಲಯದ ಸರ್ವಜ್ಞರು ಹೇಳುವುದನ್ನು ತುಟಿಪಿಟಕ್ಕೆನ್ನದೆ ಅಂಗೀಕರಿಸಿ ಕೂತರೆ ಎಲ್ಲಾ ಸುಸೂತ್ರವಾಗಿ ನಡೆಯುತ್ತದೆಂಬ ಭರವಸೆಯೇನೂ ಇಲ್ಲ. ಬಂದೂಕು ಹಿಡಿದ ಪೊಲೀಸಿನವರನ್ನು ಕೊಲ್ಲುವ ನಕ್ಸಲರು, ಗೌನು ಧರಿಸಿದ ನ್ಯಾಯಮೂರ್ತಿಗಳ ಮುಂದೆ ಮಂಡಿಯೂರುತ್ತಾರೆಂದು ನಿರೀಕ್ಷಿಸುವುದು ಒಂದು ವಿಡಂಬನಾ ನಾಟಕದಲ್ಲಿ ಮಾತ್ರ ಸಾಧ್ಯ. ನಿಜ ಜೀವನದಲ್ಲಿ ನ್ಯಾಯಮೂರ್ತಿ ಮುಖ್ಯವಲ್ಲ, ನ್ಯಾಯ ಮುಖ್ಯ. ಅದಕ್ಕೆ ನ್ಯಾಯಾಲಯವೂ ತನ್ನ ಐತಿಹಾಸಿಕ ಕರ್ತವ್ಯವನ್ನು ಜನರ ಪರವಾಗಿ ನಿರ್ವಹಿಸಬೇಕು, ವಿದೇಶಿ ಕಂಪನಿಗಳ ಅಥವಾ ಸ್ವದೇಶಿ ಬಂಡವಳಿಗರ ಲೂಟಿಯ ಪರವಾಗಿ ಅಲ್ಲ. ಇದು ಶಾಸಕಾಂಗ ಮತ್ತು ಕಾರ್ಯಾಂಗಗಳಿಗೂ ಅನ್ವಯವಾಗುತ್ತದೆ. ಸರ್ವೋಚ್ಚ ನ್ಯಾಯಾಲಯದ ಈಚಿನ ಒಂದು ನಿಲುವು ಈ ಹಿನ್ನೆಲೆಯಲ್ಲಿ ಸ್ವಲ್ಪ ಸಮಾಧಾನಕರವಾಗಿದೆ, ಉಸಿರಾಡಲು ಜೀವದಾನ ಮಾಡಿದೆ. ಮನು ಪ್ರಣೀತ ಸಂವಿಧಾನವು ನಮ್ಮನ್ನು ಎರಡು ಸಾವಿರ ವರ್ಷ ಆಳಿದೆ, ಆದರೆ ೧೯೫೦ರಲ್ಲಿ ಸಂವಿಧಾನ ರಚನಾ ಸಭೆ ನೀಡಿದ ಸಂವಿಧಾನಕ್ಕೆ ಅಷ್ಟು ದೀರ್ಘಾವಧಿಯ ಆಯಸ್ಸು ಇರಲಾರದು. ಅದರ ಸತ್ವವು ಉಳಿಯಬೇಕಾದರೆ ನ್ಯಾಯಾಲಯವು ಸ್ವಯಂ-ಸಾಮ್ರಾಟನಾಗಬಾರದು, ಅಷ್ಟೆ. ತಮ್ಮನ್ನು ತಾವೇ ನೇಮಕ ಮಾಡಿಕೊಂಡು, ತಮಗೆ ಯಾವ ನೀತಿಸಂಹಿತೆಯೂ ಹೊರಗಿನಿಂದ ನಿಗದಿಯಾಗಕೂಡದೆಂದು ಆಗ್ರಹಿಸಿ, ತಮ್ಮ ಸೇವಾ ನಿಯಮಗಳನ್ನು ತಾವೇ ರೂಪಿಸಿಕೊಂಡು, ತಾವು ಸಾರ್ವಜನಿಕ ಖಜಾನೆಯಿಂದ ಪಡೆದ ಹಣ ಹೇಗೆ ಖರ್ಚುಮಾಡಬೇಕೆಂದು ಯಾರೂ ಹೇಳುವಂತಿಲ್ಲವೆಂದು ಭಾವಿಸಿಕೊಂಡು, ಜನಸಾಮಾನ್ಯರ ವಿರುದ್ಧ ತೀರ್ಪುಗಳನ್ನು ಕೊಡುತ್ತಾ, ನ್ಯಾಯಾಲಯಗಳೂ ಎಷ್ಟು ಕಾಲ ಮಾನ್ಯತೆ ಉಳಿಸಿಕೊಂಡಾವು !

ಅಂಬಾನಿ ಸೋದರರು ಸಾರ್ವಜನಿಕ ಆಸ್ತಿಯಾದ ಅನಿಲವನ್ನು ಸರ್ಕಾರಿ ಯಂತ್ರದ ಭ್ರಷ್ಟತೆಯ ಸಹಾಯದಿಂದ ತಮ್ಮದಾಗಿಸಿಕೊಂಡಿರುವುದನ್ನು ತಿಳಿದೂ ರೊಚ್ಚಿಗೇಳದ ಮಹಾಮಹಿಮರು ಭಾರತೀಯರು. ಹಾಗೆ ಸೂರೆಗೊಳ್ಳಲಾಗಿರುವ ಅನಿಲದ ಬೆಲೆ ಹಲವು ಲಕ್ಷ ಕೋಟಿ ರೂಪಾಯಿಗಳು, ಗೊತ್ತೆ? ಅಂಬಾನಿ ಫೋರ್ಬ್ಸ್ ಶ್ರೀಮಂತರ ಪಟ್ಟಿಗೆ ಸೇರುವುದರಲ್ಲೇನು ಅಚ್ಚರಿ ! ಗೋದಾವರಿ ಜಲಾನಯನ ಪ್ರದೇಶದಲ್ಲಿ ದೊರೆತಿರುವ ನೈಸರ್ಗಿಕ ಅನಿಲವನ್ನು ಅಪಾಮಾರ್ಗದಿಂದ ತಮ್ಮತಮ್ಮಲ್ಲೇ ಹಂಚಿಕೊಂಡಿರುವ ಈ ಅಂಬಾನಿಗಳು ಮಹಾ ಬಾನಿಗಳು, ಎಲ್ಲವನ್ನೂ ತುಂಬಿಕೊಳ್ಳುವ ಸರ್ವಭಕ್ಷಕರು. ಸಾರ್ವಜನಿಕ ಆಸ್ತಿಯನ್ನು ಬಹುಮಟ್ಟಿಗೆ ಬಿಟ್ಟಿಯಾಗಿ ಪಡೆದಿರುವ ಈ (ಅಂ)ಬಾನಿಗಳು ಅವರವರಲ್ಲಿ ವ್ಯವಹಾರ ನಡೆಸಿಕೊಳ್ಳುವಾಗ ಅದರ ಬೆಲೆಯ ಬಗ್ಗೆ ತಕರಾರು ಎಬ್ಬಿಸಿಕೊಂಡಿದ್ದಾರೆ. ದೇಶದ ಆಸ್ತಿ ಹೋಯಿತೆಂದು ಮನಮೋಹನ್ ಸಿಂಗ್ ತಕರಾರೆತ್ತಬೇಕಾಗಿತ್ತು, ಎತ್ತಲಿಲ್ಲ. ಆದರೆ ಅಂಬಾನಿ ಸೋದರರು ಸರ್ವೋಚ್ಚ ನ್ಯಾಯಾಲಯಕ್ಕೆ ಹೋದರು. ಸಮಸ್ಯೆಯನ್ನು ತಾವೇ ಬಗೆಹರಿಸಿಕೊಳ್ಳಬೇಕೆಂದು ಸೂಚಿಸಿದ ನ್ಯಾಯಾಲಯ ಒಂದು ಸರಿಯಾದ ಮಾತು ಹೇಳಿತು : ಸಾರ್ವಜನಿಕ ಸಂಪತ್ತು ಸಾರ್ವಜನಿಕರ ಪ್ರತಿನಿಧಿಯಾದ ಸರ್ಕಾರದ ವಶದಲ್ಲೇ ಇರಬೇಕಾದ್ದು ನ್ಯಾಯಸಮ್ಮತ, ಎಂದು. ಸುಮಾರು ಇಪ್ಪತ್ತು ವರ್ಷಗಳಿಂದ ನ್ಯಾಯಾಲಯದಲ್ಲಿ ಇಂತಹ ಪ್ರಾಜ್ಞ ಹೇಳಿಕೆ ಬಂದಿರಲಿಲ್ಲ. ಒರಿಸ್ಸಾದಲ್ಲಿ ಪಾಸ್ಕೋ, ಛತ್ತೀಸಗಢದಲ್ಲಿ ವೇದಾಂತ – ಟಾಟಾಗಳಿಗೆ ಅಮೂಲ್ಯ

*(೭ನೇ ಪುಟಕ್ಕೆ)*


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೯೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨

*ಈ ತಿಂಗಳು (೩ನೇ ಪುಟದಿಂದ)*

ದೌತಣ. ಅಂತೆಯೇ ಅದು ವಿವಿಧ ನಾಟಕ ವಿಧಾನಗಳಲ್ಲೂ ಇರುತ್ತದೆ: ಒಮ್ಮೆ ಹಾಸ್ಯ, ಒಮ್ಮೆ ಕರುಣೆ, ಒಮ್ಮೆ ವೀರ, ಇತ್ಯಾದಿ ಇರುವಂತೆ ನಾಟಕವು ಪ್ರಹಸನ, ಸಟ್ಟಕ, ದುರಂತ, ಏಕಾಂಕ, ಯಾವುದೂ ಆಗಬಹುದು. ನೈಸ್ ರಸ್ತೆಯ ಖೇಣಿ ಜೊತೆ ಬೆಂಗಳೂರಿನಲ್ಲಿ ಇಂತಹ ಸಂವಾದವಾಗಿದ್ದಾಗ ನಾಟಕ ಏಕಾಏಕಿ ಮುಕ್ತಾಯವಾಗಿ ಪರದೆ ಬಿದ್ದಿತ್ತು, ಏಕೆಂದರೆ ಆತನಿಗೆ ಕೋಪ ಬಂದು ಉತ್ತರಹೀನನಾಗಿಬಿಟ್ಟಿದ್ದ. ಮಂಗಳೂರು ಕೊಜೆಂಟ್ರಿಕ್ಸ್ ಯೋಜನೆಯಾದಾಗ ಮಾರಾಮಾರಿ ಆಗುವಷ್ಟರಲ್ಲಿ ಸಭೆ ಮುಗಿಯಿತು; ಆದರೆ ವಿಶ್ವವಿದ್ಯಾಲಯದ ಕೆಲವು ಅಧ್ಯಾಪಕರನ್ನು ಮುಂದುವರಿದ ಇನ್ನೊಂದು ನಾಟಕದಲ್ಲಿ ಪಾತ್ರವಹಿಸುವಂತೆ ಮೂರ್ಖ ಅಧಿಕಾರಿಗಳು ಮಾಡಿದ್ದರು. ಇತ್ತೀಚೆಗೆ ಮಹಾರಾಷ್ಟ್ರದ ಕೊಂಕಣ ಪ್ರದೇಶದ ರತ್ನಾಗಿರಿಯ ಬಳಿ ಮಧವನ್‌ನಲ್ಲಿ ಯಥಾಪ್ರಕಾರ ಅದೇ ಪ್ರಹಸನ. ನಾಟಕವು ಅಧಿಕಾರಿಗಳಿಗೆ ಪ್ರಹಸನ, ಆದರೆ ಭೂಮಿ ಕಳೆದುಕೊಳ್ಳಬೇಕಾಗಿಬರುವ ರೈತರಿಗೆ ದುರಂತ. ಆದ್ದರಿಂದ ಮಧವನ್ ರೈತರು ''ವಿಚಾರಣೆ''ಯ ನಾಟಕ ಪ್ರದರ್ಶಿಸಲು ಬಂದ ಅಧಿಕಾರಿಗಳನ್ನು ಊರಿನಿಂದ ಅಟ್ಟಿಬಿಟ್ಟರು, ರಂಗಮಂಚಕ್ಕೆ ಪಾತ್ರಗಳು ಕಾಲಿಡಲಾಗಲಿಲ್ಲ. ''ಪ್ರಜಾಪ್ರಭುತ್ವಕ್ಕೆ ಅಡ್ಡಿಯುಂಟುಮಾಡಿದವರಿಗೆ ಬುದ್ಧಿ ಕಲಿಸಬೇಕು'' ಎಂದು ಯಾವ ಬುದ್ಧಿಜೀವಿಯೂ ''ಲೋಕಸತ್ತಾ'' ಪತ್ರಿಕೆಗೆ ಪತ್ರ ಬರೆಯಲಿಲ್ಲ. ನಮ್ಮ ದೇಶಕ್ಕೆ ವಿದೇಶಿ ವಿಶ್ವವಿದ್ಯಾನಿಲಯಗಳು ಬಂದರೆ ಮಾತ್ರ ನಾವು ಜ್ಞಾನಸ್ವರ್ಗಕ್ಕೇರಲು ಸಾಧ್ಯವಂತೆ. ಹಾಗೆಂದು ಅಮೇರಿಕಾ ದೂತ ಕಪಿಲ್ ಸಿಬಲ್ ಭಾವಿಸಿದ್ದಾರೆ. ಅವು ಬಂದಾಗ ಮತ್ತೆ ಭೂಮಿಯ ಆಕ್ರಮಣ, ರೈತರ ನಿರ್ವಸತಿ, ಎಲ್ಲಾ ಇರುತ್ತದೆ. ಅದಕ್ಕೂ ''ಸಾರ್ವಜನಿಕ ವಿಚಾರಣೆ'' ಏರ್ಪಡಿಸಲು ಆಗ್ರಹಿಸಿ ವಿಚಾರಣೆಯು ಮಧವನ್ ಮಾದರಿಯಲ್ಲಿಯೇ ನಡೆಯುವಂತಾದರೆ ಎಂಥಾ ಸೊಗಸು !

* * *

'ಪ್ರಜಾವಾಣಿ' ವರದಿಗಾರ ಶ್ರೀ. ರಾಹುಲ್ ಬೆಳಗಲಿ ಮತ್ತು ಸಂಪಾದಕ ಶ್ರೀ. ಪದ್ಮರಾಜ ದಂಡಾವತಿ ಶಿವಮೊಗ್ಗೆಯ ಪೊಲೀಸ್ ಅಧಿಕಾರಿಯೊಬ್ಬರ ಕೆಂಗಣ್ಣಿಗೆ ಬಿದ್ದು ಆ ಅಧಿಕಾರಿಯ ಮಂಗಳಾರತಿಗೆ ಕಾರಣರಾದರು. ನಕ್ಸಲರನ್ನು ಬೇಟೆಯಾಡಲು ಎಂಥ ಕ್ರಮ ಕೈಗೊಂಡರೂ ಅದಕ್ಕೆ ಬೆಂಬಲವಿರುತ್ತದೆಂದು ಪೊಲೀಸರು ಮತ್ತು ಕೆಲವು 'ಬುದ್ಧಿಜೀವಿ'ಗಳು ನಂಬಿದ್ದಾರೆ. ಎಲ್ಲೋ ಒಬ್ಬ ನಕ್ಸಲ್ ಧೀರ ಆಕಸ್ಮಾತ್ತಾಗಿ ಯಾರನ್ನಾದರೂ ಭೇಟಿಯಾದರೆ ಅವನು(ಳು) ನಕ್ಸಲ್‌ವಾದಿಯೆಂದು ಹೇಗೆ ತಿಳಿಯುತ್ತದೆ ? ತಿಳಿದರೂ ನಾಗರಿಕನೊಬ್ಬ ಅವರನ್ನು ಬಂಧಿಸಲು ಸಾಧ್ಯವೆ ? ಪತ್ರಕರ್ತರು ಯಾವಾಗಲೂ ಸಾನಿಯಾ ಹಿಂದೆ ಓಡುತ್ತಿರಬೇಕೋ ಅಥವಾ ಅವಕಾಶ ದೊರೆತರೆ ನಕ್ಸಲನನ್ನೂ ಮಾತನಾಡಿಸಬೇಕೋ ? ಹಾಗೆ ಮಾತನಾಡಿಸಿದವರೆಲ್ಲಾ ನಕ್ಸಲರಾಗಿಬಿಡುವುದಿಲ್ಲ ಮತ್ತು ಮಾತಿನಲ್ಲಿ ನಕ್ಸಲರು ಅವರ ತಂಗುದಾಣ, ಚಲನವಲನಗಳ ಬಗ್ಗೆ ಮಾಹಿತಿ ನೀಡಿ ಬಿಡುವುದಿಲ್ಲವೆಂದು ತೋರುತ್ತದೆ. ಇದು ಪೊಲೀಸರಿಗೂ ಗೊತ್ತು. ಆದರೂ ರಾಹುಲ್ ಅವರನ್ನು ಹೀಗೆ ಬೆದರಿಸಿದ್ದೇಕೆ ? ನಿಜಕ್ಕೂ ಅವರಿಂದ ಎಂಥದೋ ಗುಟ್ಟು ಹೊರಬೀಳಬಹುದೆಂದೆ ಅಥವಾ ಬೇರೆ ಪತ್ರಕರ್ತರಿಗೆ ಮುನ್ನೆಚ್ಚರ ನೀಡಲೆಂದೆ ? ಅಂತೂ ರಾಹುಲ್ ರಾಷ್ಟ್ರೀಯ ಸಮಾಚಾರ ಕೇಂದ್ರವಾದರು. ಕರ್ನಾಟಕದ ಖ್ಯಾತಿ ಹೀಗೆ ಮಾತ್ರ ಹರಡಲು ಸಾಧ್ಯವೆಂದು ಯಡಿಯೂರಪ್ಪನವರ ಸರ್ಕಾರ ತಿಳಿದಿದೆ. ಪತ್ರಕರ್ತರ ಸ್ವಾತಂತ್ರ್ಯ, ನಾಗರಿಕರ ಬಗ್ಗೆ ಸೌಜನ್ಯ, ಕಾನೂನಿಗೆ ಗೌರವ, ಮೌಲ್ಯಗಳ ಆದರ, ಇವೆಲ್ಲಾ ಯಡಿಯೂರಪ್ಪನವರ ವಾಗ್ಝರಿಯಲ್ಲಿ ಹಿಂದೆಲ್ಲಾ ವ್ಯಕ್ತವಾಗುತ್ತಿತ್ತು. ಮುಖ್ಯಮಂತ್ರಿಯಾದ ಮೇಲೂ ಅವೆಲ್ಲಾ ಪ್ರಸ್ತುತವೆಂಬ ತಿಳುವಳಿಕೆಯನ್ನು ಅವರ ಸ್ವಾಮಿಸಮೂಹ, ದೇವತಾಜಂಗುಳಿ, ಈವರೆಗೆ ನೀಡಿಲ್ಲ, ನೀಡುವುದಿಲ್ಲ. ಅವರೇ ಸ್ವತಃ ಅವನ್ನು ತಿಳಿಯಬೇಕು.

* * *

ಸದ್ಯಕ್ಕೆ ಕ್ರಿಕೆಟ್ ಜಾತ್ರೆ ಮುಗಿದಿದೆ. ಅದು ಸಾಂಕ್ರಾಮಿಕ ಜಾಡ್ಯವಾದ್ದರಿಂದ ಬೇಗನೆ ಪುನರ್ದರ್ಶನ ಮಾಡಿಸುತ್ತದೆ. ಮೋದಿ, ಮನೋಹರ, ಶ್ರೀನಿವಾಸ, ಅವರನ್ನೆಲ್ಲಾ ನೆನಪಿಸಿಕೊಳ್ಳುವುದು ಆರೋಗ್ಯಕರವಲ್ಲ. ಅಲ್ಲದೆ, ನಮ್ಮ ಆಟಗಾರರು 'ಸೆಂಚುರಿ' ವೀರರಾದ್ದರಿಂದ ಶತಾಯುಷಿಗಳಾಗುವವರೆಗೂ ಆಡುತ್ತಲೇ ಇರುತ್ತಾರೆ, ಹಣ ತುಂಬಿಕೊಳ್ಳುತ್ತಲೇ ಇರುತ್ತಾರೆ. ಅದೆಲ್ಲದರ ಬಗ್ಗೆ ಪ್ರತಿಕ್ರಿಯಿಸುವುದು ಅನಗತ್ಯ. ಆದರೆ ಕ್ರಿಕೆಟ್ ರೋಗ ಎಷ್ಟು ಅನ್ಯಾದೃಶವಾಗಿದೆಯೆಂಬುದಕ್ಕೆ ಒಂದು ಉದಾಹರಣೆ ನೀಡಬೇಕೆನಿಸುತ್ತದೆ. ಆಕಾಶವಾಣಿ ಬೆಂಗಳೂರು ಕೇಂದ್ರವು ಪ್ರತಿದಿನ ''ಪ್ರಾದೇಶಿಕ ವಾರ್ತೆ'' ಪ್ರಸಾರ ಮಾಡುತ್ತದೆ. 'ಪ್ರಾದೇಶಿಕ' ಎಂದರೇನೆಂಬುದನ್ನು ಆಕಾಶವಾಣಿ ವ್ಯಾಖ್ಯಾನಿಸಿಕೊಳ್ಳುವುದು ಅಸಾಮಾನ್ಯ ರೀತಿಯಲ್ಲಿ. ಮೇ ೧೭ರಂದು 'ಪ್ರಾದೇಶಿಕ'ವಾಗಿ ಅದು ವೆಸ್ಟ್ ಇಂಡೀಸ್‌ನಲ್ಲಿ ಜರುಗಿದ ವಿಶ್ವಕಪ್ ಕ್ರಿಕೆಟ್‌ನ ಅಂತಿಮ ಪಂದ್ಯದ ಫಲಿತಾಂಶ ಬಿತ್ತರಿಸಿತು. ಆ ವೇಳೆಗಾಗಲೆ ಆಕಾಶವಾಣಿ ಅದನ್ನು ಹತ್ತು ಬಾರಿ ಹೇಳಿಯಾಗಿತ್ತು. ಆಸ್ಟ್ರೇಲಿಯಾ, ಇಂಗ್ಲೆಂಡ್, ವೆಸ್ಟ್ ಇಂಡೀಸ್, ಎಲ್ಲಾ ನಮ್ಮ 'ಪ್ರದೇಶ'ದಲ್ಲಿ ಅಂತರ್ಗತವಾಗಿವೆ !

* * *

ಮನೀಶ್ ತಿವಾರಿ ಎಂಬಾತ ಈಗ ಕಾಂಗ್ರೆಸ್ ಪಕ್ಷದ ವಕ್ತಾರನಂತೆ. ಹಿಂದೊಬ್ಬ ಪ್ರೊಫೆಸರ್ ತಿವಾರಿಯೆಂಬ ಕಾಂಗ್ರೆಸ್ಸಿಗನಿದ್ದ. ಮನೀಶ್ ಅವನ ವಂಶಸ್ಥನೇ ಇರಬೇಕು, ಏಕೆಂದರೆ ಆ ಪ್ರೊಫೆಸರಿಗಿದ್ದಂತೆ ಈತನಿಗೂ ಉದ್ದನೆಯ ನಾಲಿಗೆ ಮತ್ತು ಕುಬ್ಜವಾದ ಮಿದುಳಿದೆ. ಕಾಂಗ್ರೆಸ್ ನೇತೃತ್ವದ ಕೇಂದ್ರ ಸರ್ಕಾರಕ್ಕೆ ಒಂದು ವರ್ಷದ ಅದ್ಭುತ ಸಾಧನೆ ಇದೆಯಂತೆ ಮತ್ತು ಅದು ಎಷ್ಟು ಸೂಕ್ಷ್ಮವೆಂದರೆ ಸಾಧನೆ ಯಾರಿಗೂ ಕಾಣುವುದಿಲ್ಲವಾದ್ದರಿಂದ ಅದನ್ನು ಪ್ರಚಾರ ಮಾಡಿ ಈತ ತಿಳಿಯಪಡಿಸುತ್ತಾನಂತೆ. ಪ್ರಮೋದ ಮುತಾಲಿಕ್ ದಾಂಧಲೆಯೆಬ್ಬಿಸಲು ಹಣ ಪಡೆಯುವುದು ಖಚಿತವಾಗಿರುವ ಹಿನ್ನೆಲೆಯಲ್ಲಿ ಎಡಪಕ್ಷಗಳು ಬಹಿರಂಗವಾಗಿ ಘೋಷಿಸಬೇಕಂತೆ. ಏನೆಂದು ಗೊತ್ತೆ ? ಅವು ಕಾಂಗ್ರೆಸ್‌ನೊಟ್ಟಿಗೋ ಭಾರತೀಯ ಜನತಾ ಪಕ್ಷದೊಂದಿಗೋ ಎಂದು ! ಈ ಎರಡು ದೆವ್ವಗಳನ್ನು ಬಿಟ್ಟು ಸ್ವತಂತ್ರವಾಗಿರಲು ಎಡಪಕ್ಷಗಳಿಗೆ ಹಕ್ಕಿಲ್ಲವೆಂದು ಈ ಮೇಧಾವಿಯ ಅಲ್ಪ ತಿಳುವಳಿಕೆ. ಕಾಂಗ್ರೆಸ್ ಬಿಟ್ಟು ಬೇರಾವ ಪಕ್ಷವೂ ಮುತಾಲಿಕನನ್ನು ಘೋರವಾಗಿ ಖಂಡಿಸಿಲ್ಲವೆಂದು ಈತನ ಆಕ್ಷೇಪ. (ಮುತಾಲಿಕ್‌ನಂಥವರು ''ಪ್ರಕಾಶಮಾನ''ಕ್ಕೆ ಬರಲು ತಿವಾರಿ ಪಕ್ಷ ಏನೇನು ಮಾಡಿತ್ತೆಂದು ತಿಳಿಯಲು ತಿವಾರಿ ಇನ್ನೂ 'ಬಚ್ಚಾ' ಇರಬಹುದು, ಹಿರಿಯರಿಂದ ಕೇಳಿ ತಿಳಿದುಕೊಳ್ಳುವ ಸಾಹಸ ಮಾಡಲು ಇನ್ನೂ ಸಮಯವಿದೆ.) ಮುತಾಲಿಕ್ ಪಾತಕಿಯಾದ್ದರಿಂದ ಎಡಪಕ್ಷಗಳು ಕಾಂಗ್ರೆಸ್‌ನ ಆರ್ಥಿಕ ನೀತಿಗಳಿಗೆ ಸಮರ್ಥನೆ ನೀಡದಿರುವುದು ಸಹ ಪಾತಕವೆಂದು ತಿವಾರಿಯ ಸಂಶೋಧನೆ. ಹಾಗೆ ಸಮರ್ಥನೆ ನೀಡದಿದ್ದರೆ ಮತೀಯ ಪಿಡುಗು ಬೆಳೆಯುತ್ತದೆ, ಕಾಂಗ್ರೆಸ್ ಏಕಾಕಿಯಾಗಿ ಅದರ ವಿರುದ್ಧ ಹೋರಾಡಲು ತಿಣುಕಬೇಕಾಗುತ್ತದೆ, ಎಂದು ಏನೇನೋ ಈ ಬಾಲ ಬಾಲಿಶವಾಗಿ ಬಡಬಡಿಸಿದ್ದಾನೆ. ಕಾಂಗ್ರೆಸ್‌ನ ಭವಿಷ್ಯವು ಇಂತಹ ಪ್ರಲಾಪಗಳಿಂದ ಚೆನ್ನಾಗಿ ತಿಳಿಯುತ್ತದೆ. ಮತೀಯತೆಯ ವಿರುದ್ಧ ಹೋರಾಡುವ ಪಾಠವನ್ನು ಎಡಪಕ್ಷಗಳು ತಿವಾರಿ ಮಹಾಶಯನಿಂದ ಕಲಿತರೆ ನಿತಿನ್ ಗಡ್ಕರಿಗೆ ಆಪ್ಯಾಯಮಾನವಾಗಿರುತ್ತದೆ, ಪ್ರಮೋದ ಮುತಾಲಿಕ್‌ನ ಮೋದ ತುಂಬಿಹರಿಯುತ್ತದೆ !

* * *

ಅಮೇರಿಕಾ ಎಂದರೆ ಕಂಗಾಲಾಗಿ ಬಾಯಿಬಿಡುವ ಮನಮೋಹನ ಸಿಂಗ್ ಅವರು ಕಾರ್ವೆತ್ ವೆಲ್ಸ್ ಬರೆದಿರುವ ''ಪನಾಮ : ಗೆಟ್ ರಿಡ್ ಆಫ್ ಹೌಸ್‌ಫ್ಲೈಸ್ ಅಂಡ್ ಮಸ್ಕಿಟೋಸ್'' ಎಂಬ ಪುಸ್ತಕವನ್ನೋದುವುದು ಬೌದ್ಧಿಕ ಮತ್ತು ನೈತಿಕ ಆರೋಗ್ಯಕ್ಕೆ ಒಳ್ಳೆಯದು. ಪನಾಮದ ನಾಡಿಗರಾದ ಸ್ಯಾನ್ ಬ್ಲಾಸ್ ಇಂಡಿಯನ್ಸ್ ಪ್ರತಿನಿಧಿಗಳೊಂದಿಗೆ ವೆಲ್ಸ್ ಒಮ್ಮೆ ಮಾತನಾಡುವಾಗ ಅವರೇಕೆ ಸ್ಪೇನಿನ ಮೂಲದವರಾದ ಪನಾಮ ಜನಗಳನ್ನು ಹಾರ್ದಿಕವಾಗಿ ಸ್ವಾಗತಿಸಿ ತಮ್ಮೊಡನೆ ವಾಸಿಸಲು ಬಿಡುವುದಿಲ್ಲವೆಂದು ಕೇಳಿದನಂತೆ. ಅದಕ್ಕವರು ಕೊಟ್ಟ ಉತ್ತರ ಇದು : ''ನಮಗೆ ನಾಗರಿಕತೆಗೆ ಕಟ್ಟುಬೀಳುವುದು ಇಷ್ಟವಿಲ್ಲ, ನಾವು ಅಮೇರಿಕಾದವರಂತೆ ಇರಲು ಇಚ್ಛಿಸುತ್ತೇವೆ.'' ಆ ಬುಡಕಟ್ಟು ಜನರ ಸಹಜ ತಿಳುವಳಿಕೆ ಶ್ಲಾಘನೀಯವಾದ್ದು. ಅಮೇರಿಕಾವನ್ನು ಒಂದೇ ವಾಕ್ಯದಲ್ಲಿ ಇಷ್ಟು ಅರ್ಥವತ್ತಾಗಿ ಬೇರೆ ಯಾರು ತಾನೆ ವಿವರಿಸಬಲ್ಲರು ! ಈಗಿನ ಅಮೇರಿಕಾದ ಅಧ್ಯಕ್ಷ ಒಬಾಮ ಇತ್ತೀಚೆಗೆ ಹೇಳಲಿಲ್ಲವೆ, ಇರಾನ್ ಮತ್ತು ಕೊರಿಯಾ ಮೇಲೆ ಅಣುಬಾಂಬ್ ಹಾಕುವುದಿಲ್ಲವೆಂದು ಹೇಳಲಾಗುವುದಿಲ್ಲವೆಂದು ? ಇಂತಹ ಧೂರ್ತ ಆಶಯವನ್ನು ಭಾರತ ಸರ್ಕಾರವು ಖಂಡಿಸದಿರುವಷ್ಟು ಹೇಸಿಗೆಯಲ್ಲಿ ಮುಳುಗಿದೆ. ಒಬಾಮಾಗೆ ಇದರಲ್ಲಿ ಪೇಟೆಂಟ್ ಏನೂ ಇಲ್ಲ, ಏಕೆಂದರೆ ಆತನ 'ಪೂರ್ವಜ' ಥಾಮಸ್ ಪವರ್ ಅಣುಬಾಂಬಿನ ಪ್ರಯೋಗ ಮಾಡುವುದು ಅಮೇರಿಕಾದ ಉದ್ದೇಶವೆಂದು ೧೯೬೦ರಲ್ಲೇ ಹೇಳಿಬಿಟ್ಟಿದ್ದ. ಅವನು ಮಿಲಿಟರಿ ಅಧಿಕಾರಿ. ಆತ ಹೇಳಿದ್ದ: ''ಆ ಸೂಳೆಮಕ್ಕಳಿದ್ದಾರಲ್ಲ, ಅವರನ್ನು ಸಾಯಿಸುವುದೇ ನಮ್ಮ ಉದ್ದೇಶ. ಯುದ್ಧ ಮುಗಿದ ನಂತರ ಇಬ್ಬರು ಅಮೇರಿಕನ್ನರು ಮತ್ತು ಒಬ್ಬ ರಷ್ಯನ್ ಮಾತ್ರ ಉಳಿದರೂ ಸರಿಯೆ, ನಾವೇ ವಿಜಯಿಗಳು.'' ಅದಕ್ಕೊಬ್ಬ ಉದ್ಗರಿಸಿದನಂತೆ, ''ಅದೇನೋ ಸರಿಯೆ, ಆದರೆ ಇಬ್ಬರು ಅಮೇರಿಕನ್ನರಲ್ಲಿ ಒಬ್ಬ ಹೆಂಗಸು ಮತ್ತು ಒಬ್ಬ ಗಂಡಸು ಇರುವಂತೆ ನೋಡಿಕೊಳ್ಳಿ'', ಎಂದು. ಅಂದು ರಷ್ಯ ಮತ್ತು ಕಮ್ಯುನಿಸ್ಟರ ವಿರುದ್ಧ ವಿಷ ಕಾರುತ್ತಿದ್ದ ಅಮೇರಿಕಾ ಇಂದು ಇರಾನ್ ಮತ್ತು ಕೊರಿಯ ಹಾಗೂ ಕಮ್ಯುನಿಸ್ಟರ ವಿರುದ್ಧ ಅರ್ಭಟಿಸುತ್ತದೆ. ಎರಡು ಪಟ್ಟಿಗಳಲ್ಲೂ ಉಳಿದಿರುವುದು ಕಮ್ಯುನಿಸ್ಟರ ಶ್ರೇಯಸ್ಸು. ಚೀಣಾ ಆ ಪೈಕಿ ಇಲ್ಲ, ಏಕೆಂದರೆ ಇರಾನ್ ಮೇಲೆ ಪ್ರತಿಬಂಧಕ ಹೇರಲು ಅದು ಅಮೇರಿಕಾ ಜೊತೆ ಇರುತ್ತದಂತೆ. ಕಮ್ಯುನಿಸ್ಟರೆಂದರೆ ಮನುಷ್ಯರಲ್ಲವೆಂಬ ಗಟ್ಟಿ ಪೂರ್ವಗ್ರಹವನ್ನು ಅಮೇರಿಕಾದ ಜನರ ಮನಸ್ಸಿನಲ್ಲಿ ಬಿತ್ತುವುದು ಮೊದಲಿನಿಂದಲೂ ಆಗಿಬಂದಿರುವ ಸಂಪ್ರದಾಯ.

೧೯೬೮ರಲ್ಲಿ ವಿಯೆಟ್ನಾಂನ ಮೈ ಲೈ ಎಂಬ ಹಳ್ಳಿಯನ್ನು ಧ್ವಂಸ ಮಾಡುವುದರಲ್ಲಿ ಪಾಲ್ಗೊಂಡಿದ್ದ ಅಮೆರಿಕಾದ ಸೇನಾಧಿಕಾರಿ ವಿಲಿಯಂ ಕ್ಯಾಲೆ ಹೇಳಿದ್ದಿದು : ''ನೂರಕ್ಕೂ ಹೆಚ್ಚು ನಾಗರಿಕರನ್ನು ನಾವಲ್ಲಿ ಒಮ್ಮೆಗೇ ಕೊಂದೆವು. ನಾನು ಸೈನ್ಯದಲ್ಲಿದ್ದಷ್ಟು ಕಾಲ ನನಗೆಂದೂ ಕಮ್ಯುನಿಸ್ಟರು ಮನುಷ್ಯರೆಂದು ಹೇಳಿಕೊಡಲಿಲ್ಲ. ನಾವಲ್ಲಿದ್ದುದು 'ಸಿದ್ಧಾಂತ'ವೊಂದನ್ನು ಹೊಸಕಿಹಾಕಲು ಎಂದು ಹೇಳುತ್ತಿದ್ದರು. ಆದರೆ ಈ 'ಸಿದ್ಧಾಂತ'ವನ್ನು ಹೊತ್ತಿದ್ದವರು ಯಾರು ? ಮನುಷ್ಯರೊ ಅಥವಾ ಬೊಂಬೆಗಳೊ ? ಅಥವಾ ಕೇವಲ ಮಾಂಸದ ಮುದ್ದೆಗಳೊ ? ನಾವು ಕಮ್ಯುನಿಸ್ಟರನ್ನು ನಿರ್ನಾಮ ಮಾಡಲು ಅಲ್ಲಿದ್ದೆವಂತೆ. ನಮಗೆಂದೂ ಯೋಚನೆಯೇ ಬರಲಿಲ್ಲ, ಆ ಊರುಗಳಲ್ಲಿ ಮುದುಕರು, ಜೀವಂತ ಯುವಕರು, ಮಹಿಳೆಯರು, ಮಕ್ಕಳು, ಎಳೆಯ ಕಂದಮ್ಮಗಳು ಇದ್ದುವೆಂದು.''

ಅಂದರೆ, ಮಾನವತೆಯ ಮೌಲ್ಯದ ಗಂಧವೇ ಇಲ್ಲದ ಅಮೆರಿಕಾದ ಪ್ರಜಾಪ್ರಭುತ್ವ ಒಂದು ಅಮಾನವೀಯವಾದ ವ್ಯವಸ್ಥೆ ಎಂದರ್ಥ.

ಅಮೆರಿಕಾದ ಆಳುವ ವರ್ಗದ ಸಂಸ್ಕೃತಿಯಲ್ಲಿ ಮಾನವ ಸಹಜವಾದ ಚಿಂತನೆ ಮತ್ತು ಮೌಲ್ಯಗಳ ಅಭಾವ ಎದ್ದು ಕಾಣುತ್ತದೆ. ಮನಮೋಹನ ಸಿಂಗ್ ಅವರಿಗೆ ಅದು ತಿಳಿಯದಿರುವುದು ನಮ್ಮ ದೇಶದ ದುರಂತ. ಅಮೆರಿಕಾ ಸರ್ಕಾರಕ್ಕೆ ಉನ್ಮಾದದ ಎಲ್ಲೆಯೆಂಬುದೇನೂ ಇಲ್ಲ. ಇತ್ತೀಚೆಗೆ ಹಿಲರಿ ಕ್ಲಿಂಟನ್ ಹೇಳಿದಳು, ''ನಮ್ಮ ಆಶಯದಂತೆ ಆತಂಕವಾದಿಗಳನ್ನು ನೀವು ಕೊಚ್ಚಿಹಾಕದಿದ್ದರೆ ನಿಮ್ಮ ಭವಿಷ್ಯ ನೆಟ್ಟಗಾಗುವುದಿಲ್ಲ ತಿಳಿಯಿರಿ'' ಎಂದು. ಯಾರಿಗೆ ಗೊತ್ತೆ? ಅರವತ್ತು ವರ್ಷಗಳಿಂದ ಆಶ್ರಿತ ಭಂಟನಂತೆ ನಡೆದುಕೊಳ್ಳುತ್ತಿರುವ ಪಾಕಿಸ್ತಾನಕ್ಕೆ ! ಅಂದರೆ, ಅಫ್ಘಾನಿಸ್ತಾನಕ್ಕೆ ನುಗ್ಗಿಸಿರುವಂತೆ ಪಾಕಿಸ್ತಾನಕ್ಕೂ ಅಮೆರಿಕಾ ತನ್ನ ಸೈನ್ಯವನ್ನು ನುಗ್ಗಿಸಬಹುದು. ಇಂತಹ ಅನೈತಿಕ ಸಾಮ್ರಾಟನೊಂದಿಗೆ ಬಾಂಧವ್ಯವನ್ನು ನಮ್ಮ ದೇಶ ಅತಾರ್ಕಿಕ ಮಟ್ಟಕ್ಕೆ ಒಯ್ದಿದೆ, ಕಬಂಧಬಾಹುಗಳಲ್ಲಿ ಸಿಲುಕಿಕೊಳ್ಳಲು ಹಾತೊರೆಯುತ್ತಿದೆ. ಸ್ನೇಹ, ಸಹಕಾರ, ರಾಜತಾಂತ್ರಿಕ ಸಂಬಂಧ ಎಲ್ಲ ದೇಶಗಳೊಡನೆಯೂ ಬೇಕು, ಆದರೆ ಅತಾರ್ಕಿಕ ಮಟ್ಟದಲ್ಲಿ ಯಾವ ದೇಶದೊಡನೆಯೂ ಕೂಡದು. ಅಮೆರಿಕಾದ ಮಾನಸಿಕ ಲಕ್ಷಣಕ್ಕೆ ೧೯೮೪ರಲ್ಲಿ ಅಧ್ಯಕ್ಷ ರೀಗನ್ ಹೇಳಿದ್ದುದು ದೊಡ್ಡ ಕುರುಹಾಗಿದೆ. ಪ್ರತಿ ವಾರ ಆತ ದೇಶವನ್ನುದ್ದೇಶಿಸಿ ರೇಡಿಯೋ - ಟಿ.ವಿ. ಭಾಷಣ ಮಾಡುತ್ತಿದ್ದ. ಭಾಷಣಕ್ಕೆ ಮುಂಚೆ ಭಾಷಣಕಾರನ ಧ್ವನಿಯನ್ನು ತಾಂತ್ರಿಕ ಕಾರಣಕ್ಕೆ ಪರೀಕ್ಷಿಸುವುದು ರೂಢಿ. ಆದ್ದರಿಂದ ಭಾಷಣಕ್ಕೆ ಮುಂಚೆ ನಾಲ್ಕು ಮಾತು ಹೇಳಿ, ಎನ್ನುತ್ತಾರೆ. ೧೯೮೪ರಲ್ಲಿ ರೀಗನ್ ಹೇಳಿದ ಭಾಷಣ ಪೂರ್ವ ಮಾತುಗಳಿವು: ''ಅಮೆರಿಕಾದ ಸಹ-ನಾಗರಿಕರೆ, ರಷ್ಯವನ್ನು ಸದಾಕಾಲಕ್ಕೂ ಅಳಿಸಿಹಾಕಬೇಕೆಂಬ ಶಾಸನಕ್ಕೆ ಈಗ ತಾನೆ ಸಹಿ ಹಾಕಿ ಬಂದಿದ್ದೇನೆ. ಇನ್ನೈದು ನಿಮಿಷಗಳಲ್ಲಿ ಆ ದೇಶದ ಮೇಲೆ ಬಾಂಬುಗಳು ಸಿಡಿಯುತ್ತವೆ.'' ಇದು ರೀಗನ್ ಒಬ್ಬನ ಮಾನಸಿಕ ವ್ಯಾಧಿಯಲ್ಲ, ವಿಶ್ವದ ಸಂಪತ್ತೆಲ್ಲಾ ತನ್ನದು, ಅದನ್ನು ದೋಚುವ ಹಕ್ಕು ತನಗಿದೆ, ಎಂದು ಭಾವಿಸುವ ಅಮೆರಿಕಾದ ಆಳುವ ವರ್ಗಕ್ಕೆ ಹಿಡಿದಿರುವ ಜಾಡ್ಯ ಇದು. ರೀಗನ್ ಹೇಳಿದ್ದುದನ್ನು ಒಂದೆರಡು ರೇಡಿಯೋ ಚಾನಲ್‌ಗಳು ರಿಕಾರ್ಡ್ ಮಾಡಿಕೊಂಡುಬಿಟ್ಟಿದ್ದುವು ಎಂಬುದು ರೀಗನ್‌ಗೆ ತಿಳಿದಿರಲಿಲ್ಲ, ಆದರೆ ಅದು ಈಗ ವಿಶ್ವಕ್ಕೇ ತಿಳಿದಿದೆ.

* * *

''ಪೆರಿಯಾರ್ ಇಯರ'' ಎಂಬ ಮಾಸಪತ್ರಿಕೆಯೊಂದಿದೆ. ಸಮಾಜಶಾಸ್ತ್ರೀಯ ಅಂಶಗಳನ್ನು ವ್ಯಾಖ್ಯಾನಿಸುತ್ತಿದ್ದ ಪೆರಿಯಾರ್ ಅವರ ವಿಚಾರಗಳನ್ನು ಅದರಲ್ಲಿ ಪ್ರಕಟಿಸುತ್ತಿರುತ್ತಾರೆ. ಪೆರಿಯಾರ್ ಅಭಿಮಾನಿಗಳಾಗಿದ್ದ ದ್ರಾವಿಡ ಪಕ್ಷಗಳು ಈಗ ಮೂಕಾಂಬಿಕೆ ಪಕ್ಷಗಳಾಗಿವೆ ಇಲ್ಲವೆ ಬಹುಹೆಂಡಿರ ಯಜಮಾನರ ಸಾಮ್ರಾಜ್ಯಗಳಾಗಿವೆ. ಅದನ್ನಿಲ್ಲಿ ಲಂಬಿಸುವುದು ಅಪ್ರಸ್ತುತ. ''ಇಯರ''ದ ಮೇ ೨೦೧೦ರ ಸಂಚಿಕೆಯಲ್ಲಿ ''ಹಿರಣ್ಯ ನಮ್ಮ ನಾಯಕ'' ಎಂಬ ಪೆರಿಯಾರ್ ಅವರ ಚಿಂತನೆ ಪ್ರಕಟವಾಗಿದೆ. ಅದರ ಪ್ರಕಾರ ಹಿರಣ್ಯದಾಸ ಮತ್ತು ಹಿರಣ್ಯಕಶಿಪು ಇಬ್ಬರೂ ಆರ್ಯರ ದ್ವೇಷಿಗಳು, ಆದ್ದರಿಂದ ಆರ್ಯರು ಅವರನ್ನು ಕೊಂದರು. ಅದಕ್ಕೆ ಆಧಾರವಾಗಿ ವಿಷ್ಣು ಪುರಾಣವನ್ನು ಉಲ್ಲೇಖಿಸಲಾಗಿದೆ. ಹಿರಣ್ಯದಾಸನು ಭೂಮಿಯನ್ನು ಸುತ್ತಿ ಕಂಕುಳಲ್ಲಿಟ್ಟುಕೊಂಡು ಪಾತಾಳಕ್ಕೆ ಹೊರಟುಹೋದ. (ಅಲ್ಲಿಯ ಭೂಮಿ ಪಾವನವಿರಬೇಕು, ಆದ್ದರಿಂದ ಹಿರಣ್ಯಾಕ್ಷ ಅದನ್ನು ಚಾಪೆಯಂತೆ ಸುತ್ತಿ ಕಂಕುಳಲ್ಲಿ ಇಟ್ಟುಕೊಳ್ಳಲಿಲ್ಲ ಎಂದು ತೋರುತ್ತದೆ.) ಭೂಮಿಯನ್ನು ಕಿತ್ತುಕೊಂಡು ಬರಲು ವಿಷ್ಣುವು ಹಂದಿ ರೂಪ ಧರಿಸಿಹೋದ, ಹಿರಣ್ಯದಾಸನನ್ನು ಕೊಂದ, ಭೂಮಿಯನ್ನು ತಂದ. ಹಿರಣ್ಯಕಶಿಪು - ಪ್ರಹ್ಲಾದ - ನರಸಿಂಹ - ಕಂಭದಿಂದ ಹೊರಬರುವುದು, ಇದೆಲ್ಲಾ ಪ್ರಸಿದ್ಧವಾದ ಪುರಾಣ, ಆದ್ದರಿಂದ ಕತೆ ಹೇಳುವುದು ಬೇಡ. ಅದು ಭಾಗವತ ಪುರಾಣದಲ್ಲಿ ಉಕ್ತವಾಗಿದೆ. ಪೆರಿಯಾರರ ಪ್ರಕಾರ ಹಿರಣ್ಯದಾಸ (ಅವನು ಹಿರಣ್ಯಾಕ್ಷನೆಂದು ಹೆಚ್ಚು ಪ್ರಸಿದ್ಧ) ಮತ್ತು ಹಿರಣ್ಯಕಶಿಪು ಇಬ್ಬರನ್ನೂ ಕೊಂದವರು ಬ್ರಾಹ್ಮಣರು; ಭಾರತಿದಾಸನ್ ಇದನ್ನು ತಮ್ಮ ನಾಟಕವೊಂದರಲ್ಲಿ ಪ್ರಸಿದ್ಧಪಡಿಸಿದ್ದಾರೆಂದು ಪೆರಿಯಾರ್ ಹೇಳಿದ್ದಾರೆ. ಹಿರಣ್ಯದಾಸನು ವರ್ಣಾಶ್ರಮ ಧರ್ಮದ ವಿರೋಧಿಯಾಗಿದ್ದುದರಿಂದ ಅವನನ್ನು ಕೊಲ್ಲಲಾಯಿತು. ಅವನು ಆತ್ಮಗೌರವ ಚಳುವಳಿಯ ಆದ್ಯ ಪ್ರವರ್ತಕ, ಎಂದು ಪೆರಿಯಾರ್ ಸಾರಿದ್ದಾರೆ.

ವಿಷ್ಣು ಮತ್ತು ಭಾಗವತ ಪುರಾಣಗಳಲ್ಲಿ ಚಾತುರ್ವರ್ಣ್ಯ ವ್ಯವಸ್ಥೆಯ ಕಟ್ಟುಪಾಡುಗಳನ್ನು ಪ್ರಬಲವಾಗಿ ಸಮರ್ಥಿಸಲಾಗಿದೆಯೆಂಬುದು ನಿಜ. ಅದನ್ನು ವಿರೋಧಿಸುತ್ತಿದ್ದವರು ಹಲವರಿದ್ದರೆಂದು ಎರಡು ಪುರಾಣಗಳೂ ಹೇಳುತ್ತವೆ. ವಿಷ್ಣು ಪುರಾಣವು ಅದನ್ನು ಹೆಚ್ಚು ಒತ್ತುಕೊಟ್ಟು ಹೇಳುವುದೊಂದು ವಿಶೇಷ. ನಾಸ್ತಿಕರು, ವೇದವಿರೋಧಿಗಳು, ಅತ್ಯಂತ ಹೇಯವಾದವರೆಂದು ಮೂದಲಿಸಲು ಈ ಪುರಾಣವು ಹತ್ತಾರು ಕತೆಗಳನ್ನು ಕಟ್ಟುತ್ತದೆ. ನಾರಾಯಣನಿಗೆ ವಿಧೇಯನಾದವನು ಅಜಾಮಿಳ, ಆದರೆ ಬದ್ಧವೈರಿ ಹಿರಣ್ಯಕಶಿಪು. ''ವೇದ ನಿಂದಕ''ರನ್ನು ವಿಷ್ಣು ಪುರಾಣವು ಎಷ್ಟು ತೀವ್ರವಾಗಿ ಖಂಡಿಸುತ್ತದೋ ಅಷ್ಟೇ ತೀವ್ರವಾಗಿ ವೇದದ ಹೆಸರಲ್ಲಿ ಸಾಮಾಜಿಕ ಮೌಢ್ಯವನ್ನು ಬೆಳೆಸುತ್ತಿದ್ದವರನ್ನು ನಾಸ್ತಿಕರು ಖಂಡಿಸುತ್ತಿದ್ದರು ಎಂಬುವುದರಲ್ಲಿ ಅನುಮಾನವಿಲ್ಲ. ಇಲ್ಲದಿದ್ದರೆ ವಿಷ್ಣುಪುರಾಣವು ಅಷ್ಟು ಕಠೋರ ಭಾಷೆಯನ್ನು ಬಳಸುವ ಪ್ರಮೇಯವಿರುತ್ತಿರಲಿಲ್ಲ. ಆದರೆ ನಾಸ್ತಿಕರ ಅಂದಿನ ಸಾಮಾಜಿಕ ಪ್ರಜ್ಞೆಯು ಇಪ್ಪತ್ತನೆಯ ಶತಮಾನದ ಆತ್ಮಗೌರವ ಚಳುವಳಿಗೆ ಸಮನಾದ್ದೆಂದು ಹೇಳುವುದು ಅಚಾರಿತ್ರಿಕ. ಗೌರವಾಕಾಂಕ್ಷಿಗಳನ್ನು ಚಿವುಟಿಹಾಕಲೆಂದೇ ಪುರಾಣವು ಎಂತೆಂಥದೋ ಐತಿಹ್ಯಗಳನ್ನು ನಿರ್ಮಿಸಿದ್ದು, ಪ್ರಚಾರ ಮಾಡಿದ್ದು. ಸಮಕಾಲೀನರಲ್ಲೂ ಗೌರವವನ್ನು ಕೆಲವರಿಗೆ ಸೀಮಿತಗೊಳಿಸಬಯಸುವವರಿದ್ದಾರೆ. ಆದರೆ ಅವರ ವಿರುದ್ಧದ ಅಲೆ ಪ್ರಕರ್ಷಯುತವಾದ್ದು. ವಿಷ್ಣುಪುರಾಣದಂತಹ ಕಟ್ಟುಕತೆಯನ್ನು ಮುಂದಿಟ್ಟು ಸಾಮಾಜಿಕ ಏರುಪೇರುಗಳನ್ನು ಸಮರ್ಥಿಸುವುದು ಇಂದು ಅಷ್ಟು ಸುಲಭವಲ್ಲ. ಅದಕ್ಕೇ ಇರಬೇಕು, ''ಸಾಧುಸಂತರ ನಿಗರ್ವಿ ಹಿಂಬಾಲಕ'' ಯಡಿಯೂರಪ್ಪನವರು ಸಿಕ್ಕಸಿಕ್ಕ ಮಠಗಳಿಗೆಲ್ಲಾ ಸಾರ್ವಜನಿಕ ಬೊಕ್ಕಸದಿಂದ ಹಣವನ್ನು ಟನ್‌ಗಟ್ಟಲೆ ಅಳೆದಳೆದು ದಾನ ಮಾಡುವುದು !

*ಸಂಪಾದಕೀಯ (೫ನೇ ಪುಟದಿಂದ)*

ಖನಿಜವನ್ನು ಸಮುದ್ರದ ನೀರೋ ಎಂಬಂತೆ ಕೊಡಹೊರಟಿರುವ ಕೇಂದ್ರ ಸರ್ಕಾರಕ್ಕೆ ನ್ಯಾಯಾಲಯದ ಮಾತು ಕೇಳಿಸಬೇಕು, ಇಲ್ಲದಿದ್ದರೆ ಜನರು ಕೇಳಿಸುವಂತೆ ಮಾಡಬೇಕು. ಸಿಂಗ್ ಸಾಹೇಬರು ಜಾಣ ಕಿವುಡರಾದರೆ ಕೆಲವರಾದರೂ ಫ್ರಾನ್ಸಿನ ವೆಯ್ಯಾಂತ್‌ನಂತೆ ''ಕಿವುಡರಿಗೂ ಕೇಳಿಸುವಂತೆ'' ಹೇಗೆ ಹೇಳುವುದೆಂಬುದನ್ನು ಕಲಿಯುತ್ತಾರೆ. (ಭಗತ್ ಸಿಂಗ್ ನ್ಯಾಯಾಲಯದಲ್ಲಿ ವೆಯ್ಯಾಂತ್ ಬಗ್ಗೆ ಪ್ರಸ್ತಾಪ ಮಾಡಿದ್ದುದು ಮನಮೋಹನ ಸಿಂಗ್‌ಗೆ ತಿಳಿದಿರಬಹುದು). ಅದನ್ನು ತಪ್ಪಿಸಬೇಕಾದ್ದು ಆಳುವ ವರ್ಗದ ಜವಾಬ್ದಾರಿ ಮತ್ತು ದೇಶಹಿತ. ಇದೇ ಅಂಬಾನಿ ಮೊಕದ್ದಮೆಯ ತೀರ್ಪಿನ ಸಂಬಂಧದಲ್ಲಿ ಒಬ್ಬ ನ್ಯಾಯಮೂರ್ತಿ ಪ್ರತ್ಯೇಕ ತೀರ್ಪು ನೀಡಿ ಸಾರ್ವಜನಿಕ ಸಂಪತ್ತಿನ ವಹಿವಾಟಿನ ಬಗ್ಗೆ ಸುದೀರ್ಘ ವ್ಯಾಖ್ಯಾನ ನೀಡಿದ್ದಾರೆ. ಮುಂದಿನ ಒಂದು ಸಂಚಿಕೆಯಲ್ಲಿ 'ಹೊಸತು' ಅದನ್ನು ಸಂಗ್ರಹವಾಗಿ ಪ್ರಕಟಿಸುತ್ತದೆ.

ನಮ್ಮ ಇಂದಿನ ಸನ್ನಿವೇಶ ವಿಕೃತವಾಗಿದೆ : ನಕ್ಸಲೀಯರ ಜೊತೆ ಸೇರಿ ಮಮತಾ ಬ್ಯಾನರ್ಜಿ ''ಪ್ರಜಾಪ್ರಭುತ್ವ''ವನ್ನು ಪೋಷಿಸುತ್ತಾರೆ, ಕೇಂದ್ರದ ರಾಜ್ಯಯಂತ್ರವು ನಕ್ಸಲೀಯರನ್ನು ಬಡಿದುಹಾಕಬೇಕೆಂದು ಹೇಳಿ ಬುದ್ಧದೇವರೂ ''ಪ್ರಜಾಪ್ರಭುತ್ವ''ವನ್ನು ರಕ್ಷಿಸುತ್ತಾರೆ. ಅಮೆರಿಕಾದ ಅಧ್ಯಕ್ಷ ಒಬಾಮನಿಂದ ಅರ್ಹತಾ ಪತ್ರ ಪಡೆಯುವುದೇ ಪ್ರಜಾಪ್ರಭುತ್ವವೆಂದು ಮನಮೋಹನ ಸಿಂಗ್ ಒಬಾಮನನ್ನು ತಣಿಸಲು ಸರ್ವಪ್ರಯತ್ನ ಮಾಡುತ್ತಾರೆ. ಇವಾವುವೂ ನಕ್ಸಲೀಯರನ್ನು ನಿಗ್ರಹಿಸಿ ಪ್ರಜಾಪ್ರಭುತ್ವವನ್ನು ಗಟ್ಟಿಗೊಳಿಸುವ ಕ್ರಮಗಳಲ್ಲ. ಸೋವಿಯೆತ್ ಒಕ್ಕೂಟವು ಛಿದ್ರಗೊಂಡದ್ದು ಜನರ ವಿವೇಕದಿಂದ ಮತ್ತು ಕಮ್ಯುನಿಸ್ಟ್ ಪಕ್ಷದ ಅವಿವೇಕದಿಂದ. ನಕ್ಸಲರನ್ನು ನಿಗ್ರಹಿಸಲು ಸಿಂಗ್ - ಚಿದಂಬರಂ ಮಾರ್ಗವು ಅವಿವೇಕದ ಮಾರ್ಗ. ಹಾಗೆಂದರೆ ಅದು ನಕ್ಸಲರ ಸಮರ್ಥನೆಯಾಗುವುದಿಲ್ಲ. ದೇಶವಿರೋಧಿ, ಜನವಿರೋಧಿ, ಸರ್ಕಾರದ ಪತನವಾದರೆ ಕಣ್ಣೀರು ಸುರಿಸಲು ಜನ ಬಕೆಟುಗಳನ್ನು ಹುಡುಕಿಕೊಂಡು ಅಲೆದಾಡುವುದಿಲ್ಲ. ನಕ್ಸಲರನ್ನು ನಿಗ್ರಹಿಸುವುದೆಂದರೆ ಅವರನ್ನು ಅಪ್ರಸ್ತುತರನ್ನಾಗಿಸುವುದು ಎಂದರ್ಥ. ಅದಕ್ಕೆ ದೇಶಪರ, ಜನಪರ, ನೀತಿಗಳು ಬೇಕು ಮತ್ತು ಸಾಕು. ಬೆಂಗಳೂರಿನ ಸುತ್ತಮುತ್ತ ರೈತರ ಭೂಮಿಯನ್ನು ಕಿತ್ತುಕೊಳ್ಳಲು ಹಾತೊರೆಯುತ್ತಿರುವ ಯಡಿಯೂರಪ್ಪನವರ ಸರ್ಕಾರಕ್ಕೂ ಅದೇ ಸಂದೇಶ. ಆರೆಸ್ಸೆಸ್ ನಾಯಕ ಜಯದೇವ ಅವರು ಆ ಸಂದೇಶ ಕೊಟ್ಟಿದ್ದಾರೋ ಇಲ್ಲವೋ ತಿಳಿಯದು !




### ನ್ಯಾಯಮೂರ್ತಿಗಳ ನ್ಯಾಯಪಾಲನೆ

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪ್ರಭುವಾದರು ಸಹ ಅವ್ಯವಸ್ಥೆಗಳಿಂದಾಗಿ ಊಳಿಗಮಾನ್ಯರಾಗಿರುವ ಪ್ರಜೆಗಳ ರಕ್ಷಕರಾಗಿರುವ ನ್ಯಾಯಾಂಗದ ಬುಡದಲ್ಲಿನ ಕತ್ತಲೆಯ ವಿಚಾರವಾಗಿ ನ್ಯಾಯಮೂರ್ತಿ ಡಿ. ವಿ. ಶೈಲೇಂದ್ರ ಕುಮಾರರ ಜನತೆಯೊಡನೆ ಸಂವಾದ (ಏಪ್ರಿಲ್ ಸಂಚಿಕೆ) ಅಪರೂಪದ ಮಾಹಿತಿಪೂರ್ಣ ಲೇಖನ. ಸತ್ಯವನ್ನು ನುಡಿ, ಪ್ರಿಯವಾದುದನ್ನು ನುಡಿ ಎನ್ನುವುದು ಸಾರ್ವಕಾಲಿಕ ಸಾರ್ವಜನಿಕ ಲೋಕೋಕ್ತಿಯಾದರೂ ನ್ಯಾಯ ಪರಿಪಾಲನೆ ಮಾಡುವವರು ಸತ್ಯವನ್ನು ಧರ್ಮವಾಗಿ ಪಾಲಿಸಬೇಕಾಗಿದೆ. ಭಾರತದಲ್ಲಿ ರಾಜಕಾರಣವನ್ನು ಗುಡಿ ಕೈಗಾರಿಕೆಯಂತೆ ಪೋಷಿಸುವುದರಿಂದಾಗಿ ಅದು ತನ್ನ ಪ್ರಭಾವವನ್ನು ಎಲ್ಲಾ ಕ್ಷೇತ್ರಗಳಿಗೂ ವಿಸ್ತರಿಸಿಕೊಂಡಿದೆ. ರಾಜಕಾರಣ ತನ್ನ ಮೂಲದ್ರವ್ಯವನ್ನು ಕಳೆದುಕೊಂಡು ಭ್ರಷ್ಟಾಚಾರದ ಮತ್ತೊಂದು ಮುಖವಾಗಿ ಪರಿವರ್ತನೆ ಹೊಂದಿರುವ ಕಾರಣಗಳಿಂದಾಗಿ ಪ್ರಜಾತಂತ್ರದ ಎಲ್ಲಾ ಅಂಗಗಳು ರೋಗಗ್ರಸ್ತವಾಗಿವೆ. ರೋಗ ನಿರ್ಮೂಲನ ಅತ್ಯಂತ ಪರಿಣಾಮಕಾರಿಯಾಗಿರುವ ನ್ಯಾಯಾಂಗದ ಪ್ರಮುಖ ಆಧಾರಸ್ತಂಭಗಳು ಭ್ರಷ್ಟಾಚಾರದ ಸೋಂಕಿನಿಂದಾಗಿ ಶಿಥಿಲವಾಗುತ್ತಿರುವುದು ಅತ್ಯಂತ ಕಳವಳಕಾರಿಯಾಗಿದೆ. ನ್ಯಾಯಾಲಯದ ಘನತೆ ಮತ್ತು ಗೌರವಗಳಿಗೆ ಹಾನಿಮಾಡುವಂತಹ ನ್ಯಾಯಮೂರ್ತಿಗಳನ್ನು ರಕ್ಷಿಸುವ ವಿದ್ಯಮಾನಗಳಿಂದಾಗಿ ಸಕಲ ಭಾರತೀಯ ನಾಗರಿಕರ ನಂಬಿಕೆಗಳಿಗೆ ಪಾತ್ರವಾಗಿರುವ ನ್ಯಾಯಾಂಗವು ತನ್ನ ಗೌರವವನ್ನು ಕಳೆದುಕೊಂಡುಬಿಡಬಹುದಾದ ಪರಿಸ್ಥಿತಿಯಿಂದ ಪಾರುಮಾಡುವುದು ಜವಾಬ್ದಾರಿಯುತ ನ್ಯಾಯಪಾಲಕರ ಕರ್ತವ್ಯವಾಗಿರುತ್ತದೆ.

ಮೈಸೂರು — *ನರೇಂದ್ರ ಸಿರಕಜೆ*

### ಚೆಕಾಫನ ಕತೆ

ಮೇ ಸಂಚಿಕೆಯಲ್ಲಿ ಪ್ರಕಟವಾದ ಚೆಕಾಫನ ಕತೆಯನ್ನು ಓದಿ ಬರೆಯುತ್ತಿದ್ದೇನೆ. ಪುಸ್ತಕದ ಅಂಗಡಿಯನ್ನು ತೆರೆದ ವ್ಯಕ್ತಿ ಕ್ರಮೇಣ ಗ್ರಾಹಕರ ಬೇಡಿಕೆಯನ್ನು ಪೂರೈಸಲು ಇತರ ವಸ್ತುಗಳನ್ನೂ ಮಾರಾಟ ಮಾಡಲು ಪ್ರಾರಂಭಿಸಿ, ಕೊನೆಗೆ ಆತ ಪುಸ್ತಕಗಳಲ್ಲಿ ಆಸಕ್ತಿ ಕಳೆದುಕೊಂಡು ಇತರ ವಸ್ತುಗಳ ದೊಡ್ಡ ವ್ಯಾಪಾರಿಯಾಗಿ ಬೆಳೆದದ್ದು ಕತೆಯ ವಸ್ತು. ಚೆಕಾಫನ ಸೂಕ್ಷ್ಮದೃಷ್ಟಿ, ವ್ಯಂಗ್ಯದ ಮೊನಚು ಕತೆಯಲ್ಲಿ ಕಾಣಸಿಗುವ ವಿಶಿಷ್ಟಾಂಶಗಳು. ರಶಿಯಾದಲ್ಲಿ ವ್ಯಕ್ತವಾದದ್ದು ಕನ್ನಡದಲ್ಲೂ ನಿಜವಾಗಿರುವುದು ಕತೆಯ ಸಾರ್ವಕಾಲಿಕತೆಗೆ ಸಾಕ್ಷಿ. ಚೆಕಾಫ್ ಜಗತ್ತಿನ ಅಮರ ಕತೆಗಾರ. ಅನುವಾದಕರಿಗೆ ಅಭಿನಂದನೆಗಳು

ಸುಳ್ಯ — *ಕುತ್ಯಾಳ ನಾಗಪ್ಪಗೌಡ (ಕಿರಣ)*

### ಶಿಕ್ಷಣಕ್ರಾಂತಿಯ ಸವಾಲುಗಳು

ಉಚಿತ ಹಾಗೂ ಕಡ್ಡಾಯ ಶಿಕ್ಷಣ ಮಕ್ಕಳ ಹಕ್ಕು (ಆರ್.ಟಿ.ಇ.) – ಹೀಗೆ ೨೦೦೨ರ ಸಂವಿಧಾನದ ೮೬ನೇ ತಿದ್ದುಪಡಿ ಮಸೂದೆಯಾಗಿ ಏಪ್ರಿಲ್ ೧ರಂದು ಕಡ್ಡಾಯ ಶಿಕ್ಷಣದ ಹಕ್ಕು ಜಾರಿಯಾಗಿದೆ. ಇದರ ಪ್ರಕಾರ ಶಿಕ್ಷಣವು ದೇಶದ ೬ರಿಂದ ೧೪ನೆಯ ವರ್ಷದೊಳಗಿನ ಎಲ್ಲ ಮಕ್ಕಳ ಮೂಲಭೂತ ಹಕ್ಕು. ಯಾವುದೇ ಕಾರಣಕ್ಕೂ ಶಿಕ್ಷಣವನ್ನು ಮಗುವಿಗೆ ನಿರಾಕರಿಸುವಂತಿಲ್ಲ.

ದೇಶಕ್ಕೆ ಸ್ವಾತಂತ್ರ್ಯ ಬಂದು ೬೨ ವರ್ಷಗಳಷ್ಟು ದೀರ್ಘ ಕಾಲ ತಡವಾಗಿಯಾದರೂ ಶಿಕ್ಷಣದಂತಹ ಮಹತ್ವಪೂರ್ಣ ಕ್ಷೇತ್ರಕ್ಕೆ ಈ ಹಕ್ಕನ್ನು ಸಂವಿಧಾನಬದ್ಧವಾಗಿ ನೀಡಲಾಗಿದೆ. ಅಂದರೆ ಆರು ದಶಕಗಳ ಕಾಲ ಶಿಕ್ಷಣವನ್ನು ಕೇವಲ 'ಉತ್ಪಾದನಾ ರಹಿತ ಕ್ಷೇತ್ರ'ವೆಂದು ಪರಿಗಣಿಸಲಾಗಿತ್ತು. ಸಮಾಜದ ಸರ್ವಾಂಗೀಣ ವಿಕಾಸಕ್ಕೆ ಶಿಕ್ಷಣವೇ ಬುನಾದಿ ಎಂಬ ಸತ್ಯ ಗೌಣವಾಗಿತ್ತು. ಇಂದು ದೇಶದ ಒಂದು ಕೋಟಿ ಮಕ್ಕಳು ಪ್ರಾಥಮಿಕ ಶಿಕ್ಷಣದಿಂದ ಹೊರಗುಳಿದಿದ್ದಾರೆ ಎಂಬುದು ನಿಚ್ಚಳವಾದ ಸತ್ಯ.




"ಉಜ್ವಲ ಭವಿಷ್ಯದ ನಾಳೆಗಳಿಗಾಗಿ ದೊಡ್ಡ ಕನಸು ಕಾಣಿರಿ" ಎಂದು ದೇಶದ ಪ್ರಧಾನಿ ಈ ಸಂದರ್ಭದಲ್ಲಿ ಭಾವುಕತೆಯಿಂದ ಕರೆ ನೀಡಿದ್ದಾರೆ. ಕಾಯ್ದೆಯ ಆಶಯಗಳು ಆಕರ್ಷಕವಾಗಿ ಕಂಡರೂ ಸರ್ಕಾರಗಳು ಬಹಳ ದೊಡ್ಡಸವಾಲುಗಳನ್ನು ಎದುರಿಸಬೇಕಾಗಬಹುದು.

ಕಾಯ್ದೆಯ ಅತ್ಯಂತ ಪ್ರಮುಖವಾದ ಅಂಶವೆಂದರೆ, ಕೇಂದ್ರ, ರಾಜ್ಯ ಹಾಗೂ ಸ್ಥಳೀಯ ಸರ್ಕಾರಗಳು ೬ರಿಂದ ೧೪ ವರ್ಷದ ಎಲ್ಲ ಮಕ್ಕಳಿಗೂ ಕಡ್ಡಾಯ ಹಾಗೂ ಉಚಿತ ಶಿಕ್ಷಣ ನೀಡಲು ಬದ್ಧವಾಗಿರಬೇಕು. ಹಕ್ಕು ಜಾರಿಯಾದ ಮೂರು ವರ್ಷಗಳೊಳಗೆ ಮೂಲಭೂತ ಸೌಕರ್ಯಗಳನ್ನೊಳಗೊಂಡ ಶಾಲೆಗಳು ನಿರ್ಮಾಣವಾಗಬೇಕು; ಪ್ರತಿ ಕಿಲೋಮೀಟರಿಗೆ ಒಂದು ಶಾಲೆಯಂತೆ. ತಾತ್ವಿಕವಾಗಿ ಆಕರ್ಷಕವಾಗಿ ಕಾಣುವ ಈ ಅಂಶಗಳು ಗ್ರಾಮೀಣ ಭಾರತವನ್ನು ನೆನಪಿನಲ್ಲಿಟ್ಟು ನೋಡಿದಾಗ ಈ ಅಂಶಗಳಿಗೆ ವಾಸ್ತವದ ಸವಾಲುಗಳು ಎದುರಾಗುತ್ತವೆ.

ಮಕ್ಕಳ – ಶಿಕ್ಷಕರ ಅನುಪಾತ ೩೦:೧ ಇರಬೇಕು. ಈ ಹಂತದಲ್ಲಿ ಅನುತ್ತೀರ್ಣತೆ ಇರಬಾರದು; ಕೇಂದ್ರ ಪಠ್ಯಕ್ರಮ, ಅಂತರರಾಷ್ಟ್ರೀಯ ಪಠ್ಯಕ್ರಮಗಳೂ ಸೇರಿದಂತೆ ಎಲ್ಲ ಖಾಸಗಿ ಶಾಲೆಗಳಲ್ಲೂ ಶೇಕಡ ೨೫ರಷ್ಟು ಮೀಸಲಾತಿಯನ್ನು ಬಡಮಕ್ಕಳಿಗೆ ಉಚಿತವಾಗಿ ಕಲ್ಪಿಸಬೇಕು; ಮುಂದಿನ ಐದು ವರ್ಷಗಳಲ್ಲಿ ಉತ್ತಮ ಶಿಕ್ಷಕರಾಗಲು ತರಬೇತಿ ನೀಡಬೇಕು. ರಾಷ್ಟ್ರೀಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗ ಈ ಹಕ್ಕು ಪರಿಣಾಮಕಾರಿಯಾಗಿ ಜಾರಿಯಾಗಿರುವುದನ್ನು ಕುರಿತು ಪರಿಶೀಲನೆ ನಡೆಸುತ್ತದೆ. ಇವೇ ಮುಂತಾದ ಇತರ ಅಂಶಗಳನ್ನು ಈ ಕಾಯ್ದೆ ಒಳಗೊಂಡಿದೆ. ಇದಕ್ಕೆ ಬೇಕಾದ ಸಂಪನ್ಮೂಲಗಳನ್ನು ೫೫:೪೫ರ ಅನುಪಾತದಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಭರಿಸಬೇಕು ಎನ್ನುವುದು ಮತ್ತೊಂದು ಸವಾಲಾಗಬಹುದಾದ ಅಂಶ. ಈ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರಗಳು ಅಪಶ್ರುತಿ ಎತ್ತಿರುವುದೂ, ಖಾಸಗಿ ಶಾಲೆಗಳು ಈಗಾಗಲೇ ನ್ಯಾಯಾಲಯದ ಕಟ್ಟೆಯನ್ನು ಹತ್ತಿರುವುದೂ ವಾಸ್ತವಾಂಶಗಳು.

ಪ್ರಾಥಮಿಕ ಶಿಕ್ಷಣವನ್ನು ತಡವಾಗಿಯಾದರೂ ಸಂವಿಧಾನಬದ್ಧ ಹಕ್ಕನ್ನಾಗಿಸಿರುವುದು ಒಂದು ಮಹತ್ವಪೂರ್ಣ ನಿರ್ಧಾರ. ಇದರ ದೀರ್ಘಾವಧಿಯ ಪರಿಣಾಮಗಳು ನಿಚ್ಚಳ. ಇದನ್ನು ಕೂಡಲೆ ಅಥವಾ ಕೇವಲ ೩ ವರ್ಷಗಳಲ್ಲಿ ಭೌತಿಕ ಸೌಲಭ್ಯಗಳಿಂದ, ೫-೬ ವರ್ಷಗಳ ಶಿಕ್ಷಕರ ತರಬೇತಿಯಿಂದ ಸಾಧಿಸಬಹುದೆಂದು ನಿರ್ಧರಿಸುವುದು ದೊಡ್ಡಸವಾಲೇ ಸರಿ. ಮೂಲಭೂತವಾದ ಕೆಲವು ಬದಲಾವಣೆಗಳನ್ನು ಈ ಹಂತದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಕೈಗೊಳ್ಳಬೇಕಿದೆ. ಅವುಗಳನ್ನು ಸ್ವಲ್ಪಮಟ್ಟಿಗೆ ವಿಶ್ಲೇಷಣೆ ಮಾಡಬಹುದು.

ಹಂತಹಂತವಾಗಿ ಏಕರೂಪದ ಪ್ರಾಥಮಿಕ ಶಿಕ್ಷಣವನ್ನು ರಾಷ್ಟ್ರೀಕರಣಗೊಳಿಸುವುದು. ಹೀಗೆಂದೊಡನೆ ಆರ್ಥಿಕ ತಜ್ಞರೂ, ಶಿಕ್ಷಣ ತಜ್ಞರೂ ಬೊಬ್ಬೆ ಹಾಕಬಹುದು. ಏಕೆಂದರೆ ಭಾರತ ಒಂದು ಸಂಕೀರ್ಣವಾದ ದೇಶ. ಭಾಷೆ, ಸಂಸ್ಕೃತಿ, ಭೌಗೋಳಿಕ ಪರಿವೇಷಗಳಲ್ಲಿ ಎಲ್ಲಿಯೂ ಎರಡು ರಾಜ್ಯಗಳಲ್ಲಿ ಸಾಮ್ಯವಿಲ್ಲದ ದೇಶ. ಹಾಗಾಗಿ ಇಲ್ಲಿ ಏಕರೂಪದ ಶಿಕ್ಷಣ ಸಾಧ್ಯವಿಲ್ಲ ಎನ್ನುವ ಅಭಿಪ್ರಾಯವಿದೆ. ಸ್ವಲ್ಪಮಟ್ಟಿಗೆ ಯೋಚಿಸಿ ನೋಡಿ, ಸ್ವಾತಂತ್ರ್ಯ ಬಂದು ಆರು ದಶಕಗಳಾದರೂ ನಮ್ಮದೇ ಆದ ಮೌಲ್ಯಾಧಾರಿತ ಶಿಕ್ಷಣಕ್ರಮದ ಬಗ್ಗೆ ಸರಿಯಾದ ಅಧ್ಯಯನ ನಡೆದೇ ಇಲ್ಲ. ಒಂದು ಕ್ಷಣ ನಮ್ಮ ಪ್ರಾಥಮಿಕ ಶಿಕ್ಷಣ ಹೀಗಿರಲೆಂದು ಯೋಚಿಸಿರಿ.

* ನಮ್ಮ ನಮ್ಮ ರಾಜ್ಯದ ಭಾಷೆಯನ್ನು ಒಂದು ಪ್ರಧಾನ ಭಾಷೆಯಾಗಿ ಮತ್ತು ಮಾಧ್ಯಮವಾಗಿಯೂ ಕಲಿಯುವ ಅವಕಾಶವಿರಲಿ.
* ಇಂಗ್ಲಿಷನ್ನು ಸಂಪರ್ಕ ಭಾಷೆಯಾಗಿ, ಬೇಕೆಂದರೆ ಮಾಧ್ಯಮವಾಗಿಯೂ ಪ್ರಾಥಮಿಕ ಹಂತದಲ್ಲಿಯೇ ಕಲಿಸುವ ವ್ಯವಸ್ಥೆ ಇರಲಿ.
* ಮಾಧ್ಯಮಿಕ ಹಂತದಿಂದ ಬಹುಆಯ್ಕೆಯ ಏಕರೂಪದ ತೃತೀಯ ಭಾಷೆ ಇರಲಿ.

**ಕಳೆದ ಸಂಚಿಕೆಯಲ್ಲಿ ಪ್ರಕಟವಾಗಿದ್ದ 'ನೆಲೆ' ಕಥೆಯ ಲೇಖಕ ಶ್ರೀ ಅಲಕಾ ಜೋಶಿ ಅವರ ವಿಳಾಸವನ್ನು ತಪ್ಪಾಗಿ ಕೊಟ್ಟಿದ್ದಕ್ಕೆ ವಿಷಾದಿಸುತ್ತೇವೆ. ಅವರು ಸದ್ಯ ಅಮೆರಿಕಾದಲ್ಲಿದ್ದಾರೆ. ಅವರ ಇ-ಮೇಲ್ :**
alkujoshi@gmail.com

**ಕವಯಿತ್ರಿ ವಿಭಾ ಅವರ ನೆನಪಿನಲ್ಲಿ ಒಂದು ಸಾಹಿತ್ಯ ಪ್ರಶಸ್ತಿಯನ್ನು ನೀಡಲು ಆಯೋಜಿಸ ಲಾಗಿದೆ ಮತ್ತು ಆಯ್ಕೆಯಾದ ಕವಿತೆಗಳನ್ನು ಲಡಾಯಿ ಪ್ರಕಾಶನವು ಹೊರತರುತ್ತದೆ. ಆಸಕ್ತರು ತಮ್ಮ ಕವಿತೆಗಳ ಮೂವತ್ತಕ್ಕಿಂತ ಹೆಚ್ಚು ಕವಿತೆಗಳ ಗುಚ್ಛವನ್ನು ಇದೇ ಜುಲೈ ೧೫ರ ಒಳಗಾಗಿ ಕಳಿಸಬಹುದು.**

ವಿಳಾಸ
**ಪ್ರಕಾಶ ಮತ್ತು ಸುನಂದಾ ಕಡಮೆ**
ನಂ. ೯೦, ಕಾಳಿದಾಸನಗರ
ವಿದ್ಯಾನಗರ ವಿಸ್ತರಣೆ, ಹುಬ್ಬಳ್ಳಿ - ೫೮೦ ೦೩೧

* ನಮ್ಮ ನಮ್ಮ ರಾಜ್ಯದ ಭೌಗೋಳಿಕ ಸನ್ನಿವೇಶಕ್ಕೆ ಅನುಗುಣವಾದ ಸಮಾಜ ವಿಜ್ಞಾನವಿರಲಿ.

* ಗಣಿತ, ವಿಜ್ಞಾನ, ಗಣಕ ವಿಜ್ಞಾನ – ಈ ವಿಷಯಗಳು ಏಕರೂಪದಲ್ಲಿರಲಿ.

ಸಿಬಿಎಸ್‌ಸಿ, ಐಸಿಎಸ್‌ಸಿ, ಅಂತರರಾಷ್ಟ್ರೀಯ ಶಿಕ್ಷಣ ಕ್ರಮ ಮುಂತಾದೆಲ್ಲ ಕ್ರಮಗಳೂ ದೇಶದಲ್ಲಿ ರದ್ದಾಗಬೇಕು. ಇವು ಸಮಾಜವನ್ನು ಮಾನಸಿಕವಾಗಿ ವಿಭಜನೆ ಮಾಡುವ ಗೋಡೆಗಳಾಗಿವೆ. ಶಿಶುಕೇಂದ್ರಿತ, ಅದರಲ್ಲೂ ಗ್ರಾಮೀಣ ಭಾರತವನ್ನು ಕೇಂದ್ರವಾಗಿಡುವ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯನ್ನು ಈಗಿನಿಂದಲೇ ರೂಪಿಸಬೇಕು. ಮುಂದಿನ ಹತ್ತು ವರ್ಷಗಳಲ್ಲಿ, ಭಾವುಕತೆಗೆ ಎಡೆಯಿಲ್ಲದೆ, ಏಕರೂಪದ ಸಾರ್ವತ್ರಿಕ ಶಿಕ್ಷಣ ವ್ಯವಸ್ಥೆ ಜಾರಿಗೆ ಬರಲಿ. ಈ ಹಂತದಲ್ಲಿಯೇ ಪ್ರಾಥಮಿಕ ಶಿಕ್ಷಣದಲ್ಲಿ ವೃತ್ತಿ ಶಿಕ್ಷಣದ ತರಬೇತಿಯೂ ಆಯಾ ಪ್ರಾಂತ್ಯಕ್ಕೆ ಅನುಸಾರವಾಗಿ ನಡೆಯಲಿ. ಈ ವ್ಯವಸ್ಥೆ ಉಚಿತವಾದ್ದರಿಂದ ಮಕ್ಕಳು ಶಾಲೆಯಿಂದ ಹೊರಗೆ ಉಳಿಯುವ ಪರಿಸ್ಥಿತಿ ಇರುವುದಿಲ್ಲ. ನಿರಂತರ ಮೌಲ್ಯಮಾಪನ, ಅನುತ್ತೀರ್ಣತೆ ಇಲ್ಲದಿರುವುದರಿಂದ ಮಕ್ಕಳಲ್ಲಿ ಕಲಿಯುವ ಇತ್ಯಾತ್ಮಕ ಮನೋಧರ್ಮ ಹೆಚ್ಚಾಗುವುದು. ದಲಿತರ, ಕೂಲಿ ಕಾರ್ಮಿಕರ, ಗುಳೇ ಹೊರಟವರ ಗುಡ್ಡಗಾಡಿನ ಎಲ್ಲ ಮಕ್ಕಳಿಗೂ ಏಕರೂಪದ ಶಿಕ್ಷಣ ಒಂದು ಸವಾಲೇ ಸರಿ.

ಇಂದು ಶಿಕ್ಷಣದ ಖಾಸಗೀಕರಣದಿಂದ ದೇಶದಲ್ಲಿ ಆಗುತ್ತಿರುವ ವರ್ಗೀಕರಣದ ಸಮಸ್ಯೆಗಳನ್ನು ನೋಡಿದರೆ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯನ್ನು ಹಂತಹಂತವಾಗಿ ರಾಷ್ಟ್ರೀಕರಣಗೊಳಿಸುವುದು ಸಮಸ್ಯೆಯಾಗಲಾರದು. ಪ್ರಾಥಮಿಕ ಶಿಕ್ಷಣವು ಒಂದು ಹಕ್ಕು ಎಂದು ಸಂವಿಧಾನಗೊಳಿಸುವಲ್ಲಿ ತೆಗೆದುಕೊಂಡ ನಿರ್ಧಾರ, ದೂರಗಾಮಿಯಾಗಿ ಜಾರಿಯಾದಾಗಲೇ ಶಿಕ್ಷಣ ವ್ಯವಸ್ಥೆ ಸದಾಶಯದಿಂದ ರೂಪಿತವಾದ ವ್ಯವಸ್ಥೆ ಆಗುವುದು. ಈ ನಿಟ್ಟಿನಲ್ಲಿ ದೇಶದ ಎಲ್ಲ ಶಿಕ್ಷಣ ತಜ್ಞರೂ ಗಮನ ಹರಿಸುವುದು ಸೂಕ್ತವಾಗಿದೆ.

*ಬೆಂಗಳೂರು* — *ಟಿ. ಎ. ಲಲಿತಾ*

### ಸಂನ್ಯಾಸ ದೀಕ್ಷೆ

ಸಂನ್ಯಾಸಿಗಳೆಂದರೆ ಸರ್ವಸಂಗ ಪರಿತ್ಯಾಗಿಗಳೆಂದೂ, ಅರಿಷಡ್ವರ್ಗಗಳನ್ನು ಜಯಿಸಿದವರೆಂದೂ ಹೇಳುತ್ತಾರೆ ಮತ್ತು ಮಠಾಧಿಪತಿಗಳಿಂದ ತಮ್ಮ ದೈನಂದಿನ ಬದುಕಿನ ಒತ್ತಡಗಳಿಗೆ ಪರಿಹಾರವನ್ನು ನಿರೀಕ್ಷಿಸುತ್ತಾರೆ. ಆದರೆ, ಕಾವಿ ವಸ್ತ್ರ ಧರಿಸಿದ ತಕ್ಷಣ ಮನುಷ್ಯ ಸಹಜ ಗುಣಗಳಿಂದ ಸಂನ್ಯಾಸಿಗಳು ಮುಕ್ತರಾಗುವುದಿಲ್ಲ.

ಇತ್ತೀಚೆಗೆ ಬಯಲಾದ ಸ್ವಾಮಿ ನಿತ್ಯಾನಂದ ರಾಸಲೀಲೆಯ ಪ್ರಕರಣ ಮಠದ ಆವರಣಗಳಲ್ಲಿ ನಡೆಯುವ ಅವ್ಯವಹಾರವನ್ನು ಬಹಿರಂಗಗೊಳಿಸಿದೆ. ಬಹುತೇಕ ಕಾವಿ ವಸ್ತ್ರಧಾರಿಗಳು ಮನುಷ್ಯ ಸಹಜ ಬಯಕೆ ಮತ್ತು ಆಕಾಂಕ್ಷೆಗಳ ಒತ್ತಡವನ್ನು ಹತ್ತಿಕ್ಕಲಾರದೆ ಜನಸಾಮಾನ್ಯರ ನಿರೀಕ್ಷೆಯ ಮಟ್ಟಕ್ಕೆ ಕಠಿಣ ನಿಯಮಗಳನ್ನು ಪಾಲಿಸಲಾಗದೆ ಗುಪ್ತವಾಗಿ ತಮ್ಮ ವಾಂಛೆಗಳನ್ನು ತೀರಿಸಿಕೊಳ್ಳುತ್ತಿದ್ದಾರೆ. ಉಪದೇಶ ಮತ್ತು ಆಚರಣೆಗಳ ನಡುವಿನ ವೈರುಧ್ಯಗಳು ಮಠಾಧೀಶರನ್ನು ಕಪಟ ಜೀವನದತ್ತ ಒಯ್ಯುತ್ತವೆ. ನಿತ್ಯಾನಂದ, ಪ್ರೇಮಾನಂದ, ಮುಕ್ತಾನಂದ, ಭುಕ್ತಾನಂದ ಇವರೆಲ್ಲ ಸಮಾಜದ ಅಸ್ವಸ್ಥತೆಯ ಪ್ರತಿಫಲನಗಳಾಗಿ ಗೋಚರಿಸುತ್ತಾರೆ. ಪ್ರಸ್ತುತ ಸಮಾಜದಲ್ಲಿ ಕೆಲವು ಜನ ತಮ್ಮ ಸಾಮಾಜಿಕ, ಆರ್ಥಿಕ ಹಾಗೂ ವೈಯಕ್ತಿಕ ಸಮಸ್ಯೆಗಳಿಗೆ ತಕ್ಷಣದ ಪರಿಹಾರಗಳನ್ನು ಬಯಸುತ್ತಾರೆ. ಸಮಸ್ಯೆಗಳ ಪರಿಹಾರಕ್ಕಾಗಿ ಆಶ್ರಮಗಳತ್ತ ಧಾವಿಸುವ ಈ ಜನಗಳ ದೌರ್ಬಲ್ಯ ಮತ್ತು ಮೌಢ್ಯಗಳ ದುರುಪಯೋಗ ಮಾಡಿ 'ಆನಂದ' ಕಪಟಿಗಳು ಸಾಮ್ರಾಜ್ಯಗಳನ್ನು ಸ್ಥಾಪಿಸಿದ್ದಾರೆ. ಸ್ವಾಮಿಗಳಲ್ಲಿ 'ಸ್ವಾಮಿ ಮಿತಸಂತಾನಾನಂದ' ಎಂಬ ನಾಮಧೇಯದ ಒಬ್ಬ ಸ್ವಾಮಿಯು ಇರುವುದು ರೋಚಕ ಸಂಗತಿ.

ಯೋಗ ಮತ್ತಿತರ ಒತ್ತಡ ನಿವಾರಕ ಸೂತ್ರಗಳು ವ್ಯಾಪಾರೀಕರಣಗೊಂಡು ಜನಸಾಮಾನ್ಯರು ವಂಚನೆಗೊಳಗಾಗುತ್ತಿದ್ದಾರೆ. ಆಧ್ಯಾತ್ಮಿಕ ಮೌಲ್ಯಗಳ ಅರಿವು ಮೂಡಿಸಿ ಮೋಕ್ಷದ ಹಾದಿಯನ್ನು ಹಿಡಿಸುತ್ತೇವೆಂದು ಪ್ರಚಾರಗೈದ ಜಗದ್ಗುರುಗಳು ಐಷಾರಾಮಿ ಜೀವನ ನಡೆಸುತ್ತಿದ್ದಾರೆ. ನಾವೆಲ್ಲರೂ ಆತುರದ ಜಗತ್ತಿನಲ್ಲಿದ್ದೇವೆ. ಪ್ರತಿಯೊಂದನ್ನೂ ಅತ್ಯಂತ ವೇಗವಾಗಿ ಪಡೆಯಲು ಆಶಿಸುತ್ತೇವೆ. ಈ ಹಿನ್ನೆಲೆಯಲ್ಲಿ ಜನ ಜಾಗೃತರಾಗಬೇಕಾಗಿದೆ. 'ಆಧ್ಯಾತ್ಮಿಕತೆ'ಯ ಸೋಗಿನಲ್ಲಿ ಆಶ್ರಮಗಳಿಗಾಗಿ ನೂರಾರು ಎಕರೆ ಜಮೀನು ಆಕ್ರಮಿಸಿಕೊಂಡಿರುವ ಸಂನ್ಯಾಸಿಗಳನ್ನೂ ಮಠಾಧೀಶರನ್ನೂ ಬಹಿಷ್ಕರಿಸಬೇಕು.

*ಬೆಂಗಳೂರು* — *ಶಂಕರನಾರಾಯಣ*

'ಹೊಸತು'ಗೆ ಮೌಲಿಕ ಲೇಖನಗಳನ್ನು ನೀಡಿ ಸಹಕರಿಸುತ್ತಿದ್ದ ಮಾನ್ಯ ಶ್ರೀ ಬಿ. ಎಸ್. ಭವಾನಿಶಂಕರ್ ಮೇ ೯ರಂದು ತಮ್ಮ ೮೦ನೆಯ ವಯಸ್ಸಿನಲ್ಲಿ ನಿಧನರಾಗಿದ್ದಾರೆ. ಶ್ರೀಯುತರು ನೀರಿನ ಬಳಕೆಯ ಯೋಜನೆಗಳಲ್ಲಿ ಅಗ್ರಮಾನ್ಯರು. ಮಧ್ಯಪ್ರದೇಶದ ಪ್ರಮುಖ ಇಂಜಿನಿಯರ್ ಆಗಿ ಅನೇಕ ಅಣೆಕಟ್ಟುಗಳ ನಿರ್ಮಾಣ, ನಿರ್ವಸಿತರಿಗೆ ಆಶ್ರಯ ಕಲ್ಪಿಸುವುದು, ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಸಾಧನೆ ತಮ್ಮದಾಗಿಸಿಕೊಂಡು ಜನಪ್ರಿಯರಾಗಿದ್ದರು. ನೀರಿನ ಸಂಪನ್ಮೂಲವನ್ನು ರೂಢಿಸಿಕೊಳ್ಳುವುದರಲ್ಲಿ ಜನ ಹಾಗೂ ಪರಿಸರಗಳ ಹಿತ ಕಾಯುವುದು ಅವರ ಕಾರ್ಯಶೈಲಿ. ಕೇಂದ್ರ ಸರ್ಕಾರದಲ್ಲಿ ಕಾರ್ಯದರ್ಶಿಯಾಗಿ, ವಿಶ್ವ ಬ್ಯಾಂಕ್ ಮತ್ತು ಕರ್ನಾಟಕ ಸರ್ಕಾರಗಳ ಸಲಹಾಗಾರರಾಗಿ, 'ಸಹಯೋಗ' ಸಂಸ್ಥೆಯ ಸ್ಥಾಪಕ ಅಧ್ಯಕ್ಷರಾಗಿ ದುಡಿದ ಶ್ರೀ ಭವಾನಿಶಂಕರ್ ಅವರಿಗೆ 'ಹೊಸತು' ಗೌರವ ಸಲ್ಲಿಸುತ್ತದೆ.

### ಧ್ಯಾನ

ಆ – ಪ್ರಪಂಚದಲ್ಲಿ ನಿರಂತರ
ಮರೆತಂತೆ ಕಂಡರೂ
ಕಾಡುವ ನಾನು
ದನಿ ಮೂಡಿದಾಗ
ಮರು ದನಿಯಾಗೆ
ಪದಗಳಿಗೆ ಬದುಕು
ಕೊಟ್ಟ ತಪಸ್ವಿನಿ
ಕಣ್ಣಳತೆಯಲ್ಲಿ –
ಚಂದಿರನನ್ನು ಕುಣಿಸಿ
ಗಂಭೀರ ಪ್ರಶ್ನೆಗೆ
ಆಸ್ತಿಕ ಪಾತ್ರವಾಗಿ
ಮನೋಭಿತ್ತಿಯಲ್ಲಿನ ಚಿತ್ರಿಕೆಗಳಿಗೆ
ಸದ್ದಿಲ್ಲದೆ ಕೋಲಾಹಲ
ಹುಟ್ಟಿಸಿದ, ಆತ್ಮದಭಿಮಾನಿ
ಅದು ನೀನೆ,
ಹೌದು "ನೀನೆ" ಎಂಬ
ನಂಬಿಕೆಯಲ್ಲಿ ಕಾಯುವೆ.

ರಜಿಯಾ ಡಿ. ಬಿ.
W/O ಡಾ|| ಡಿ. ಬಿ. ಫಕ್ರುದ್ಧೀನ್
ಪ್ರೊ|| ಎಲೆಕ್ಟ್ರಿಕಲ್ ಇಂಜಿನಿಯರಿಂಗ್ ವಿಭಾಗ, ಎಸ್.ಐ.ಟಿ, ತುಮಕೂರು - ೫೭೨ ೧೦೩



# ‘ಖಾಪ್’ ಪಂಚಾಯಿತಿಗಳು ‘ಸಗೋತ್ರ ವಿವಾಹ’ವನ್ನು ವಿರೋಧಿಸುವುದೇಕೆ ?

## ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ

**ಖಾಪ್ ಮಹಾಸಭೆಯ ನಿರ್ಣಯಗಳು**

ಹರಿಯಾಣ, ರಾಜಾಸ್ತಾನ ಮತ್ತು ಉತ್ತರ ಪ್ರದೇಶದ ಪಶ್ಚಿಮ ಭಾಗಗಳಲ್ಲಿ ಇಂದಿಗೂ ಕ್ರಿಯಾಶೀಲವಾಗಿರುವ ‘ಖಾಪ್’ ಎಂಬ ಜಾತಿ ಪಂಚಾಯಿತಿ ಸಭೆಯ ನಡಾವಳಿಗಳು ಈಚಿನ ಪತ್ರಿಕೆಗಳಲ್ಲಿ ಬಹಳಷ್ಟು ಸುದ್ದಿ ಮಾಡುತ್ತಿವೆ. ಕುರುಕ್ಷೇತ್ರ ಸಮೀಪದ ಹಳ್ಳಿಯೊಂದರಲ್ಲಿ ‘ಗೋತ್ರ ನಿಯಮ’ವನ್ನು ಉಲ್ಲಂಘಿಸಿ ಮದುವೆಯಾಗಿದ್ದ ಮನೋಜ್ (೨೩) ಮತ್ತು ಬಬ್ಲಿ (೧೯) ಎಂಬ ನವದಂಪತಿಗಳನ್ನು ೨೦೦೭ರಲ್ಲಿ ಹತ್ಯೆ ಮಾಡಲಾಗಿತ್ತು. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರವು ಹೂಡಿದ್ದ ಮೊಕದ್ದಮೆಯ ತೀರ್ಪನ್ನು ಕಳೆದ ಮಾರ್ಚ್ ತಿಂಗಳಲ್ಲಿ ಪ್ರಕಟಿಸಿದ ಕರ್ನಾಲ್ ನ್ಯಾಯಾಲಯವು ಮನೋಜ್ ಮತ್ತು ಬಬ್ಲಿಯರನ್ನು ಕೊಂದುಹಾಕಿದ ಐದು ಜನರಿಗೆ ಮರಣದಂಡನೆಯನ್ನು ವಿಧಿಸಿದೆ; ಮತ್ತು ಈ ನವವಿವಾಹಿತರನ್ನು ಕೊಲ್ಲುವಂತೆ ಆದೇಶ ನೀಡಿದ್ದ ಖಾಪ್ ಪಂಚಾಯಿತಿಯ ಮುಖಂಡನಿಗೆ ಜೀವಾವಧಿ ಶಿಕ್ಷೆ ನೀಡಿದೆ. ಈ ಇಬ್ಬರನ್ನೂ ಅಪಹರಿಸಿದ್ದ ಕಾರು ಚಾಲಕನಿಗೆ ಏಳು ವರ್ಷಗಳ ಜೈಲು ಶಿಕ್ಷೆ ವಿಧಿಸಿದೆ.

ಈ ಸಂಬಂಧ ಕಳೆದ ಏಪ್ರಿಲ್ ೧೩ರಂದು ಹರಿಯಾಣದಲ್ಲಿ ಸಭೆ ಸೇರಿದ ಖಾಪ್ ಮಹಾಪಂಚಾಯಿತಿಯ ಸದಸ್ಯರು, ನ್ಯಾಯಾಲಯದ ತೀರ್ಪನ್ನು ಕಟುವಾಗಿ ಟೀಕಿಸಿದ್ದುದಲ್ಲದೆ ತಾವು ಈ ತೀರ್ಪಿನ ವಿರುದ್ಧ ತೀವ್ರ ಹೋರಾಟ ನಡೆಸುವುದಾಗಿ ಘೋಷಿಸಿದ್ದಾರೆ. ಹೋರಾಟದ ಖರ್ಚುವೆಚ್ಚಗಳಿಗಾಗಿ ಪ್ರತಿಯೊಂದು ಜಾಟ್ ಕುಟುಂಬದಿಂದಲೂ ಹತ್ತು ರೂಪಾಯಿಗೆ ಕಡಮೆ ಇಲ್ಲದಂತೆ ವಂತಿಗೆ ವಸೂಲಿ ಮಾಡಬೇಕೆಂದು ನಿರ್ಧರಿಸಿದ್ದಾರೆ. ‘ಭಾರತೀಯ ಕಿಸಾನ್ ಪರಿಷತ್ತಿ’ನ ಮಾಜಿ ಅಧ್ಯಕ್ಷರೂ ಪ್ರಭಾವಶಾಲಿ ಜಾಟ್ ಮುಖಂಡರೂ ಆದ ಮಹೇಂದ್ರ ಸಿಂಗ್ ಟಿಕಾಯತ್ ಅವರು ಸಭೆಯಲ್ಲಿ ಮಾತಾಡುತ್ತ ‘‘ನಮ್ಮ ಜನರ ಸಾಮಾಜಿಕ ಜೀವನ, ಕುಟುಂಬ ಗೌರವ ಮೊದಲಾದವು ಕಾನೂನಿನ ವಿಷಯಗಳಲ್ಲ; ಇವು ಆಯಾ ಜಾತಿಯ ಆಂತರಿಕ ವಿಷಯಗಳು. ಜಾತಿ ಮುಖಂಡರು ಅವುಗಳನ್ನು ತಮ್ಮಲ್ಲಿಯೇ ಚರ್ಚಿಸಿ ತೀರ್ಮಾನಿಸಿಕೊಳ್ಳುತ್ತಾರೆ; ಸರ್ಕಾರವಾಗಲಿ, ನ್ಯಾಯಾಲಯಗಳಾಗಲಿ ಈ ವಿಚಾರದಲ್ಲಿ ಮಧ್ಯೆ ಪ್ರವೇಶಿಸುವ ಅಗತ್ಯವಿಲ್ಲ’’ – ಎಂದಿದ್ದಾರೆ. ಅಂದರೆ ತಾವು ದೇಶದ ಕಾನೂನು ಮತ್ತು ಸಂವಿಧಾನಗಳಿಗೆ ಅತೀತರು ಎಂಬುದು ಅವರ ನಿಲುವು. ಸಭೆಯಲ್ಲಿ ಮಾತಾಡಿದ ಕುರುಕ್ಷೇತ್ರ ವಿಶ್ವವಿದ್ಯಾನಿಲಯದ ತರುಣ (೨೮ ವರ್ಷ) ರಾಜಕೀಯ ಶಾಸ್ತ್ರದ ಪ್ರಾಧ್ಯಾಪಕರೊಬ್ಬರು ‘‘ಒಂದು ವೇಳೆ ಮನೋಜ್-ಬಬ್ಲಿಯರನ್ನು ಹತ್ಯೆ ಮಾಡುವ ತೀರ್ಮಾನವು ತಪ್ಪು ಎನ್ನುವುದಾದರೂ ನ್ಯಾಯಾಲಯವು ಈ ವಿಚಾರದಲ್ಲಿ ಮಧ್ಯೆ ಪ್ರವೇಶಿಸಬೇಕಾಗಿರಲಿಲ್ಲ. ಪಂಚಾಯಿತಿದಾರರು ಅದನ್ನು ತಮ್ಮತಮ್ಮಲ್ಲೆ ಬಗೆಹರಿಸಿಕೊಳ್ಳುತ್ತಿದ್ದರು’’ – ಎಂದಿದ್ದಾರೆ. ‘ಹಿಂದೂ ವಿವಾಹ ಕಾಯ್ದೆ’ (೧೯೫೫)ಯಲ್ಲಿ ‘ಸಗೋತ್ರ ವಿವಾಹ’ವನ್ನು ನಿಷೇಧಿಸುವಂಥ ಸೂಕ್ತ ತಿದ್ದುಪಡಿ ತರುವುದಕ್ಕಾಗಿ ಇವರು ಸರ್ಕಾರಕ್ಕೆ ಒಂದು ತಿಂಗಳ ಕಾಲಾವಕಾಶ ಕೊಟ್ಟಿದ್ದಾರೆ. ಸರ್ಕಾರ ಹಾಗೂ ರಾಜಕೀಯ ಪಕ್ಷಗಳಿಗೆ ಸ್ಪಷ್ಟವಾದ ಎಚ್ಚರಿಕೆ ಕೊಡುವ ಧ್ವನಿಯಲ್ಲಿ ಇವರು, ಯಾವುದೇ ರಾಜಕೀಯ ಪಕ್ಷವಾಗಲಿ, ರಾಜ್ಯಮಟ್ಟದ ಅಥವಾ ರಾಷ್ಟ್ರಮಟ್ಟದ ರಾಜಕೀಯ ಮುಖಂಡರಾಗಲಿ ನಮ್ಮ ಸಭೆಯ ನಿರ್ಣಯಗಳನ್ನು ಟೀಕಿಸಿದರೆ ಅಂಥವರನ್ನು ಶಾಶ್ವತವಾಗಿ ಬಹಿಷ್ಕರಿಸುತ್ತೇವೆ – ಎಂದು ಸಾರಿ ಹೇಳಿದ್ದಾರೆ.



ಸಭೆಯಲ್ಲಿ ಮಾತಾಡಿದ ಡಾ॥ ಸಂತೋಷ್ ದಹಿಯಾ ಎನ್ನುವ ಮಹಿಳೆ ಗೋತ್ರ ನಿಯಮವನ್ನು ಉಲ್ಲಂಘಿಸಿ ಮದುವೆಯಾದವರನ್ನು ಕೊಂದುಹಾಕುವಂತೆ ಖಾಪ್ ಪಂಚಾಯಿತಿಯು ದಿಖ್ತತ್ ಹೊರಡಿಸಿತ್ತೆಂಬುದನ್ನು ಅಲ್ಲಗಳೆಯುವ ಮೂಲಕ, ಜೀವಾವಧಿ ಶಿಕ್ಷೆಗೊಳಗಾದ ಪಂಚಾಯಿತಿ ಮುಖಂಡನನ್ನು ಆರೋಪ ಮುಕ್ತನಾಗಿಸುವ ಪ್ರಯತ್ನ ಮಾಡಿದ್ದಾರೆ. ‘ಸ್ವಗೋತ್ರ ವಿವಾಹ ನಿಷೇಧ’ (ಅಗಮ್ಯ ಗಮನ) ನಿಯಮವನ್ನು ಉಲ್ಲಂಘಿಸಿ ಮದುವೆಯಾಗುವ ಮೂಲಕ ಕುಟುಂಬದ ಗೌರವಕ್ಕೆ ಧಕ್ಕೆಯುಂಟುಮಾಡಿದ ತಮ್ಮ ಮಕ್ಕಳನ್ನು ಹೆತ್ತವರೇ ಕೊಂದುಹಾಕಿದರೆ (ಮರ್ಯಾದೆಗಾಗಿ ಕೊಲ್ಲುವುದು) ಪಂಚಾಯಿತಿಯು ಏನು ಮಾಡಲು ಸಾಧ್ಯ ? ಇದರಲ್ಲಿ ಪಂಚಾಯಿತಿಯ ತಪ್ಪೇನಿದೆ, ಎಂದು ಈಕೆ ಪ್ರಶ್ನಿಸುತ್ತಾರೆ.

ಪರಸ್ಪರ ಪ್ರೀತಿಸಿ ತಮ್ಮ ಇಚ್ಛೆಯಂತೆ ಮದುವೆಯಾದ ಯುವಕ-ಯುವತಿಯರ ಜೀವರಕ್ಷಣೆಗೆ ಮುಂದಾಗದ ಸಮಾಜ ಮುಖಂಡರು, ನ್ಯಾಯಾಲಯದಿಂದ ಶಿಕ್ಷೆಗೊಳಗಾದವರನ್ನು ರಕ್ಷಿಸಲು ಹೋರಾಡುತ್ತಿರುವುದು ಮಾನವೀಯತೆಯ ವಿಪರ್ಯಾಸವೇ ಸರಿ !

ಡಾ॥ ಸಂತೋಷ ದಹಿಯಾ ಅವರು ‘ಸ್ವಗೋತ್ರ ವಿವಾಹವು’ ಏಕೆ ನಿಷಿದ್ಧವೆಂಬುದನ್ನು ವಿವರಿಸುತ್ತ ಸ್ಮೃತಿಕಾರನಾದ ಮನುವಿನಿಂದ ಹಿಡಿದು ಇತ್ತೀಚಿನ ವೈದ್ಯಕೀಯ ಸಂಶೋಧನೆಗಳು ಕೂಡ ‘ಸ್ವಗೋತ್ರ’ದಲ್ಲಿ ಮದುವೆಯಾದ ದಂಪತಿಗಳಿಗೆ ಹುಟ್ಟುವ ಮಕ್ಕಳು ದೈಹಿಕವಾಗಿ ಊನವಾಗಿರುತ್ತವೆ ಅಥವಾ ಮಾನಸಿಕವಾಗಿ ದುರ್ಬಲವಾಗಿರುತ್ತವೆ; ಎರಡೂ ಆಗಿರಲೂಬಹುದು – ಎಂದು ಹೇಳುತ್ತವೆ ! ಆದ್ದರಿಂದ ಈ ‘‘ವೈಜ್ಞಾನಿಕ ಸಂಪ್ರದಾಯ’’ವನ್ನು ರಕ್ಷಿಸುವ ಸಲುವಾಗಿಯೆ ತಾವು ಸಗೋತ್ರ ವಿವಾಹವನ್ನು ನಿಷೇಧಿಸುವುದಾಗಿ ತಮ್ಮ ನಿಲುವನ್ನು ಸಮರ್ಥಿಸಿಕೊಂಡಿದ್ದಾರೆ.

ಅತ್ಯಂತ ಹತ್ತಿರದ ರಕ್ತಸಂಬಂಧಿಗಳಾದ ದಂಪತಿಗಳಿಂದ ಮುಂದುವರಿಯುವ ಸಂತಾನವು ದೈಹಿಕ ಮಾನಸಿಕ ದೌರ್ಬಲ್ಯಗಳಿಗೆ ಒಳಗಾಗುವ ಸಾಧ್ಯತೆ ಹೆಚ್ಚೆಂದು ‘ತಳಿಶಾಸ್ತ್ರ’ವು ಪ್ರತಿಪಾದಿಸುವುದು ನಿಜ. ಆದ್ದರಿಂದ ‘ಹತ್ತಿರದ ರಕ್ತಸಂಬಂಧಿಗಳ ಮದುವೆ’ ಹಾಗೂ ‘ಸ್ವಗೋತ್ರ ವಿವಾಹ’ಗಳ ನಡುವಿನ ಹೋಲಿಕೆ ವ್ಯತ್ಯಾಸಗಳನ್ನು ನಾವು ಪರಿಶೀಲಿಸುವುದು ಅಗತ್ಯವಿದೆ.

**ಗೋತ್ರವೆಂದರೇನು ?**

ಸವರ್ಣೀಯ ಹಿಂದೂಗಳಲ್ಲಿ ಮೇಲಿನ ಮೂರು ಜಾತಿಗಳವರೂ ‘ಗೋತ್ರ’ ವೆಂಬ ಪರಿಕಲ್ಪನೆಯನ್ನು ಬಳಸುತ್ತಾರೆ. ಬ್ರಾಹ್ಮಣರಂತೂ ಹೆಚ್ಚು ಕಟ್ಟುನಿಟ್ಟಾಗಿ

ಗೋತ್ರವನ್ನು 'ಆಚರಿಸುತ್ತಾರೆ'. ತಾವು ಪ್ರಪ್ರಾಚೀನ ಕಾಲದ ಒಬ್ಬಾನೊಬ್ಬ ಋಷಿಯ ಸಂತಾನವಾದದ್ದರಿಂದ ತಾವು ಆ ಋಷಿಯ ಗೋತ್ರಕ್ಕೆ ಸೇರಿದವರೆಂಬುದು ಈ ಜನರ ನಂಬಿಕೆ. ವಸಿಷ್ಠ, ವಿಶ್ವಾಮಿತ್ರ, ಆಂಗಿರಸ, ಕಶ್ಯಪ, ಹರೀತ, ಭಾರದ್ವಾಜ – ಇವು ಪ್ರಚಲಿತವಿರುವ ಕೆಲವು ಗೋತ್ರಗಳು. ಪ್ರಾಚೀನ ಕಾಲದ ಋಷಿಗಳಲ್ಲಿ ಕೆಲವರು ಪತ್ನೀಪುತ್ರರ ಸಮೇತರಾಗಿ ಆಶ್ರಮವಾಸಿಗಳಾಗಿದ್ದು 'ಗುರುಕುಲ'ಗಳನ್ನು ನಡೆಸುತ್ತಿದ್ದರೆಂಬುದು ನಿಜ. ಆದರೆ ಅವರ ಪೀಳಿಗೆಯು ಆಧುನಿಕ ಕಾಲದವರೆಗೆ ಮುಂದುವರಿಯುತ್ತ ಬಂದ ವಿವರಗಳು ತಿಳಿಯುವುದಿಲ್ಲ. ಅಲ್ಲದೆ ವಿಶ್ವಾಮಿತ್ರ ಋಷಿಯು ಮೇನಕೆಯೆಂಬ ಅಪ್ಸರೆಯಿಂದ ಒಂದು ಹೆಣ್ಣು ಮಗುವನ್ನು ಪಡೆದನಾದರೂ ಮುಂದೆ ಆತನು ಆ ಹೆಂಡತಿ ಮತ್ತು ಮಗುವನ್ನು ಸ್ವೀಕರಿಸುವುದಿಲ್ಲ. ಹೀಗಾಗಿ ಆತನ ಪುತ್ರಸಂತಾನದ ಮೂಲಕ ಗೋತ್ರವು ಮುಂದುವರಿದ ಬಗೆಗೆ ಉಲ್ಲೇಖಗಳಿಲ್ಲ. ಆದರೂ ವಿಶ್ವಾಮಿತ್ರ ಗೋತ್ರವೆಂಬುದಿದೆ. ಗೋತ್ರವೆಂಬ ಪರಿಕಲ್ಪನೆಯು ಋಷಿಮೂಲವನ್ನು ಸೂಚಿಸುತ್ತದೆಯೆಂಬ ಅಭಿಪ್ರಾಯವನ್ನು ಮಾನವಶಾಸ್ತ್ರಜ್ಞರು ಒಪ್ಪುವುದಿಲ್ಲ.

ಪ್ರಪಂಚದ ಹಲವು ಜನಾಂಗಗಳಲ್ಲಿ ಆದಿಮಕಾಲದಿಂದಲೂ ಒಬ್ಬ ವ್ಯಕ್ತಿಯಾಗಲಿ, ಒಂದು ಕುಟುಂಬವಾಗಲಿ ನಿರ್ದಿಷ್ಟ ಕುಲ ಅಥವಾ ಬಣ (ಕ್ಲ್ಯಾನ್)ಕ್ಕೆ ಸೇರಿರುವುದನ್ನು ಸೂಚಿಸುವ ಸಲುವಾಗಿ ಕೆಲವು ಲಾಂಛನಗಳನ್ನು ಬಳಸುತ್ತ ಬಂದಿದ್ದಾರೆ. ಆಸ್ಟ್ರೇಲಿಯಾ, ಮಾಲಿನೇಷಿಯಾ, ಉತ್ತರ ಅಮೆರಿಕನ್ ಇಂಡಿಯಾ – ಮೊದಲಾದ ದೇಶಗಳಲ್ಲಿ ಇಂದಿಗೂ ಇಂತಹ ಲಾಂಛನಗಳು ರೂಢಿಯಲ್ಲಿವೆ. ಈ ಲಾಂಛನಗಳನ್ನು ಕುಲ-ಬಣ ಲಾಂಛನ (ಕ್ಲ್ಯಾನ್ ಟೋಟೆಂ) ಎಂದು ಹೆಸರಿಸಲಾಗುತ್ತದೆ. ಎಮು ಟೋಟೆಂ, ಕಾಂಗರೂ ಟೋಟೆಂ – ಇವು ಕೆಲವು ಪ್ರಸಿದ್ಧ ಕುಲ ಸಂಕೇತಗಳು. ಕಂಡಹಾಗೆಯೇ ಎಮು ಎಂಬುದು ಆಸ್ಟ್ರಿಚ್ ಜಾತಿಗೆ ಸೇರಿದ ಒಂದು ದೊಡ್ಡ ಪಕ್ಷಿ; ಕಾಂಗರೂ ಆಸ್ಟ್ರೇಲಿಯಾ ದೇಶದ ವಿಶಿಷ್ಟ ಪ್ರಾಣಿ – ಹೀಗೆ ತಮ್ಮ ಪರಿಸರದಲ್ಲಿ ವಿಶಿಷ್ಟವೆನ್ನುವಂತೆ ತೋರುವ ಒಂದು ಪಕ್ಷಿಯನ್ನೋ ಮೃಗವನ್ನೋ ಕಡೆಗೆ ಒಂದು ವೃಕ್ಷವನ್ನೊ ತಮ್ಮ ಕುಲಸಂಕೇತವಾಗಿ ಇಟ್ಟುಕೊಳ್ಳುವುದು ರೂಢಿ. ಭಾರತದ ಪ್ರಸಿದ್ಧ ಭೌತವಾದಿ ಲೋಕಾಯತ ತತ್ವಶಾಸ್ತ್ರಜ್ಞರಾದ ಡಾ|| ದೇವೀಪ್ರಸಾದ ಚಟ್ಟೋಪಾಧ್ಯಾಯ ಅವರು ಕೂಡ ಹಿಂದೂಗಳು ಗೋತ್ರಗಳೆಂದು ಹೇಳುವ 'ಭಾರದ್ವಾಜ', 'ಕಶ್ಯಪ' ಮೊದಲಾದವು ಋಷಿಗಳ ಹೆಸರುಗಳಲ್ಲವೆಂದೂ ಪಕ್ಷಿ, ಪ್ರಾಣಿಗಳ ಹೆಸರುಗಳೆಂದೂ ಪ್ರತಿಪಾದಿಸಿದ್ದಾರೆ. ಭಾರದ್ವಾಜ – ಎಂಬುದು ಒಂದು ಪಕ್ಷಿ; ಕಶ್ಯಪ (ಕಚ್ಛಪ-ಆಮೆ) ಎಂಬುದು ಜಲಚರ ಪ್ರಾಣಿ. ಆದ್ದರಿಂದ ಗೋತ್ರಗಳು ಕೂಡ ಮಾನವಶಾಸ್ತ್ರಜ್ಞರ ದೃಷ್ಟಿಯಲ್ಲಿ ಮೂಲತಃ ಕುಲಸಂಕೇತಗಳು, ಅಂದರೆ ಕ್ಲ್ಯಾನ್ ಟೋಟೆಂಗಳೇ ಆಗಿವೆ.

ಹಿಂದೂಗಳು ಗೋತ್ರದ ವಿಚಾರದಲ್ಲಿ ಅನುಸರಿಸುವ ಹಲವು ವಿಧಿ-ನಿಷೇಧಗಳು ಕುಲಲಾಂಛನಗಳಿಗೂ ಅನ್ವಯಿಸುತ್ತವೆ. ಯಾವುದೇ ಒಂದು ಕುಲಲಾಂಛನವನ್ನು ಹೊಂದಿದವರು ತಮ್ಮ 'ಜ್ಞಾತಿ'ಗಳನ್ನು ಸುಲಭವಾಗಿ ಗುರುತಿಸುತ್ತಾರೆ; ಪ್ರತಿಯೊಂದು ಕುಲಲಾಂಛನ ಹೊಂದಿದವರಿಗೂ ತಮ್ಮ ಲಾಂಛನದ ಬಗೆಗೆ ವಿಶೇಷ ಅಭಿಮಾನ ಇರುತ್ತದೆ; ಇಂತಹ ಲಾಂಛನಗಳ ವಿಚಾರದಲ್ಲಿ ವಿಶೇಷ ಶ್ರದ್ಧೆಯಿಂದ ಮುಟ್ಟು ಚಟ್ಟುಗಳನ್ನು ಅನುಸರಿಸಲಾಗುತ್ತದೆ. ಯಾವುದೇ ಕಾರಣಕ್ಕೆ ತಮ್ಮ ಕುಲಲಾಂಛನವಾದ ಪ್ರಾಣಿಯನ್ನೊ ಪಕ್ಷಿಯನ್ನೊ, ಮೈಲಿಗೆ ಮಾಡುವಂತಿಲ್ಲ; ಹಿಂಸಿಸುವಂತಿಲ್ಲ, ಕೊಲ್ಲುವಂತಿಲ್ಲ ಇತ್ಯಾದಿ. ಎಲ್ಲಕ್ಕಿಂತ ಮುಖ್ಯವಾಗಿ ಒಂದು ಕುಲಲಾಂಛನವುಳ್ಳವರು ಅದೇ ಕುಲಲಾಂಛನ ಉಳ್ಳವರನ್ನು ಮದುವೆಯಾದರೆ ಅದು ಒಮ್ಮದುವೆಯಾಗುವುದರಿಂದ ಅಂಥ ಮದುವೆ ನಿಷಿದ್ಧ. ಅನ್ಯಕುಲ ಸಂಕೇತವುಳ್ಳವರನ್ನೇ – ಭಿನ್ನ ಗೋತ್ರ – ಮದುವೆಯಾಗಬೇಕು. ಈ ಎಲ್ಲ ನಿಯಮಗಳಿವೆ.

**ಗೋತ್ರವನ್ನು ಅನುಸರಿಸುವ ವಿಧಾನ**

ಬ್ರಾಹ್ಮಣರಲ್ಲಿ ಪ್ರತಿಯೊಂದು ಶುಭ-ಅಶುಭ ಆಚರಣೆಯ ಸಂದರ್ಭದಲ್ಲೂ ಗೋತ್ರದ ಪ್ರಸ್ತಾಪವಾಗುತ್ತದೆ. ಉಪನಯನದಲ್ಲಿ ಯಜ್ಞೋಪವೀತ (ಜನಿವಾರ) ಧಾರಣೆಯಾದ ಮೇಲೆ, 'ಬ್ರಹ್ಮೋಪದೇಶ' ಪಡೆದ 'ವಟು'ವು (ಮುಂಜಿ ಅಥವಾ ಉಪನಯನವಾದ ಬ್ರಹ್ಮಚಾರಿ) ಅಗ್ನಿಗೆ ಮತ್ತು ಗುರುಹಿರಿಯರಿಗೆ ನಮಸ್ಕರಿಸುವಾಗ ಪ್ರವರ ಹೇಳಿಕೊಂಡು ನಮಸ್ಕಾರ ಮಾಡಬೇಕು. ಪ್ರವರವೆಂದರೆ ಗೋತ್ರ ಪ್ರವರ್ತಕರಾದ ಮೂರು ತಲೆಮಾರುಗಳ ಋಷಿಗಳನ್ನು ಹೆಸರಿಸಿ, ಅವರ ಗೋತ್ರಕ್ಕೆ ಸೇರಿದವನು ತಾನು ಎಂಬುದನ್ನೂ, ತಾನು ನಾಲ್ಕು ವೇದಗಳ ಪೈಕಿ ಯಾವ ವೇದದ ಯಾವ ಸೂತ್ರದ, ಯಾವ ಶಾಖೆಯನ್ನು ಅಧ್ಯಯನ ಮಾಡುವೆನೆಂಬುದನ್ನೂ ಶ್ರುತಪಡಿಸುವುದು. ಉದಾಹರಣೆ : 'ಕಾಶ್ಯಪಾವತ್ಸಾರ ನೈಧ್ರುವ ಪ್ರವರ ತ್ರಯಾನ್ವಿತ ಆಶ್ವಲಾಯನ ಸಮನ್ವಿತ. ಋಕ್ ಶಾಖಾಧ್ಯಾಯೀ ಶ್ರೀನಿವಾಸ ಶ್ರೋತ್ರಿಯೋಽಹಂ ಭೋ ಅಭಿವಾದಯಾಮಿ' – (ಡಾ|| ಎಸ್. ಎಲ್. ಭೈರಪ್ಪನವರ 'ವಂಶವೃಕ್ಷ' ಕಾದಂಬರಿ) – ಎಂಬುದು ಒಂದು ಪ್ರವರ.

ಶ್ರಾದ್ಧ ಕರ್ಮದ ಅಂಗವಾದ ಪಿಂಡಪ್ರದಾನದಲ್ಲಿ ಪ್ರಪಿತಾಮಹ (ಮುತ್ತಜ್ಜ), ಪಿತಾಮಹ (ಅಜ್ಜ), ಪಿತೃ (ತಂದೆ) ಇವರ ಹೆಸರನ್ನು ಗೋತ್ರ ಸಹಿತವಾಗಿ ಹೇಳಿ ಅವರವರಿಗೆ ಪಿಂಡ ಹಾಕಬೇಕಾಗುತ್ತದೆ.

ಸಂಪ್ರದಾಯಸ್ಥ ಕುಟುಂಬಗಳಲ್ಲಿ ಮದುವೆಯ ಪ್ರಸ್ತಾಪವು ಆರಂಭವಾಗುವುದೇ ಹುಡುಗ ಹುಡುಗಿಯರ ಗೋತ್ರವನ್ನು ವಿಚಾರಿಸುವ ಮೂಲಕ. ಹುಡುಗ ಹುಡುಗಿಯರ ತಂದೆ ತಾಯಿಗಳು ಎಷ್ಟೇ ದೂರದೇಶಗಳ ನಿವಾಸಿಗಳಾಗಿರಲಿ, ಅದರ ಪೂರ್ವ ಪಿತೃಗಳು ಯಾವುದೇ ತಲೆಮಾರಿನಲ್ಲಿ ಒಂದೇ ವಂಶಕ್ಕೆ ಸೇರಿರುವ (ಅಂದರೆ ತಂದೆಯ ಕಡೆಯಿಂದ ರಕ್ತಸಂಬಂಧಿಗಳಾಗಿರುವ) ಸಾಧ್ಯತೆ ಇಲ್ಲದಿರಲಿ ಗಂಡಿನ ತಂದೆ ಮತ್ತು ಹೆಣ್ಣಿನ ತಂದೆ (ಹುಡುಗ ಹುಡುಗಿಯರ ತಾಯಂದಿರ 'ಗೋತ್ರ'ದ ಪ್ರಸ್ತಾಪ ಉದ್ಭವಿಸುವುದೇ ಇಲ್ಲ) ಏಕ ಗೋತ್ರಕ್ಕೆ ಸೇರಿದವರಾಗಿಬಿಟ್ಟರೆ ಆ ಮದುವೆಯ ಪ್ರಸ್ತಾಪ ಮುಂದುವರಿಯುವಂತೆಯೇ ಇಲ್ಲ.

ನಾವು ಮುಂದೆ ಇನ್ನಷ್ಟು ವಿವರವಾಗಿ ನೋಡುವಂತೆ, ಗೋತ್ರವು ಮುಂದುವರಿಯುವುದೇನಿದ್ದರೂ ಪುರುಷ ಸಂತಾನದ ಮೂಲಕ. ಈ ನಿಯಮಕ್ಕೆ ಅಪವಾದವಾಗಿ



ದೊರೆಯುವ ಒಂದೇ ಒಂದು ನಿದರ್ಶನವೆಂದರೆ, ಛಾಂದೋಗ್ಯ ಉಪನಿಷತ್ತಿನಲ್ಲಿ ಬರುವ ಸತ್ಯಕಾಮ ಜಾಬಾಲಿ ಎಂಬಾತನ ಕಥೆ. ಈ ವ್ಯಕ್ತಿ ಮಾತ್ರ 'ಜಬಲಾ' ಎಂಬ ತನ್ನ ತಾಯಿಯ ಹೆಸರನ್ನೇ ತನ್ನ ಗೋತ್ರವಾಗಿಸಿಕೊಂಡು, ವೇದವಿದ್ಯೆಯನ್ನು ಕಲಿತು ತನ್ನ ಶಿಷ್ಯರಿಗೆ 'ಪರತತ್ವ'ವನ್ನು ಬೋಧಿಸಿದನೆಂಬ ಉಲ್ಲೇಖವಿದೆ.

ಮದುವೆಯಲ್ಲಿ ವಧೂ-ವರರನ್ನು ಅಂತಃಪಟದ ಆಚೆಈಚೆ ನಿಲ್ಲಿಸಿ, ಎರಡೂ ಕಡೆಯ ಪುರೋಹಿತರು ಕನ್ಯೆಯ ಮತ್ತು ವರನ ಪ್ರವರಗಳನ್ನು ಉಚ್ಚಕಂಠದಲ್ಲಿ ಘೋಷಿಸುತ್ತಾರೆ. (ಅಂತಃಪಟವೆಂದರೆ ವಧೂವರರ ನಡುವೆ ಹಿಡಿದಿರುವ ತೆರೆ. ಈ ತೆರೆಯು ಸರಿಯುವವರೆಗೆ ಹುಡುಗ ಹುಡುಗಿಯರು ಒಬ್ಬರನ್ನೊಬ್ಬರು ನೋಡಿರುವುದಿಲ್ಲವೆನ್ನಲಾಗುತ್ತದೆ. ಅಂತಃಪಟದಾಚೆ 'ವಿಧಿ'ಯು ತನ್ನ ಪಾಲಿಗೆ ತಂದು ನಿಲ್ಲಿಸಿರುವ ಬಾಳಸಂಗಾತಿ ಎಂಥವನೊ/ಳೊ ಎಂಬುದು ಕುತೂಹಲ! ''ಅಂತಃಪಟದಾಚೆ ವಿಧಿ ತಂದ ವಧು ನೀನು ಮಾಲೆಯ ಸಿಂಗರಿಸಿ ನಿಂತಿದ್ದೀಯೆ!'' ಎನ್ನುತ್ತಾರೆ, ದ. ರಾ. ಬೇಂದ್ರೆಯವರು ತಮ್ಮ 'ಸಖೀಗೀತ'ದಲ್ಲಿ.) ವರನು/ವಧುವು ಯಾವ ಗೋತ್ರದ ಯಾವ ಹೆಸರಿನಾತನ ಪ್ರಪೌತ್ರ/ಪ್ರಪೌತ್ರಿ; ಯಾರ ಪೌತ್ರ/ಪೌತ್ರಿ; ಯಾರ ಪುತ್ರ/ಪುತ್ರಿ ಎಂಬುದನ್ನು ಮೂರು ಮೂರುಬಾರಿ ಪಠಿಸಲಾಗುತ್ತದೆ. ವಧುವನ್ನು ಅವಳ ತಂದೆಯ ಗೋತ್ರದ ಹೆಸರಿನಲ್ಲಿ ಪರಿಚಯಿಸಿ ಅವಳನ್ನು ಬೇರೊಂದು ಗೋತ್ರದ ಕುಟುಂಬಕ್ಕೆ ಧಾರೆಯೆರೆದು ಕೊಟ್ಟೊಡನೆಯೆ ಅವಳು ಹುಟ್ಟಿದ ಮನೆಯ ಗೋತ್ರದ ಪ್ರಸ್ತಾಪವು ನಿಂತುಹೋಗುತ್ತದೆ. ಅಲ್ಲಿಂದ ಮುಂದೆ ಅವಳದೇನಿದ್ದರೂ ಆಕೆಯ ಗಂಡನ ಮನೆಯ ಗೋತ್ರ. (ಆಕೆಯು ಸತ್ತಮೇಲೆ ಅವಳ ತಿಥಿ ಮಾಡಿ ಪಿಂಡ ಹಾಕುವುದು ಕೂಡ ಅವಳ ಗಂಡನ ಮನೆಯ ಗೋತ್ರದ ಹೆಸರಿನಲ್ಲಿಯೆ.)

ಗೋತ್ರವನ್ನು ಅನುಸರಿಸುವುದರಲ್ಲಿ ಕೆಲವು ವಿಚಿತ್ರ ರೂಢಿಗಳೂ ಇವೆ: ಕೆಲವು ಅನಿವಾರ್ಯ ಕಾರಣಗಳಿಂದ ಒಂದೇ ಗೋತ್ರದ ಹುಡುಗ-ಹುಡುಗಿಯರ ಮದುವೆ

ನಡೆಯಬೇಕಾಗಿ ಬರುತ್ತದೆ ಎನ್ನೋಣ. (ಆಧುನಿಕ ಕಾಲದಲ್ಲಿ ವ್ಯಾಪಕವಾಗುತ್ತಿರುವ 'ಪ್ರೇಮವಿವಾಹ'ಗಳಲ್ಲಿ ಹುಡುಗ-ಹುಡುಗಿಯರು ಪರಸ್ಪರರ ಗೋತ್ರವನ್ನು ವಿಚಾರಿಸಿದ ಅನಂತರವೇ ಪ್ರೇಮಿಸಲು ಆರಂಭಿಸುತ್ತಾರೆ ಎಂದು ಹೇಳುವಂತಿಲ್ಲವಷ್ಟೆ!) ಇಂಥ ಸಂದರ್ಭಗಳಲ್ಲಿ ಸಂಪ್ರದಾಯವನ್ನು ಬಿಡಲಾರದ ಹಿರಿಯರಿಗೆ ಒಂದು ಒಳದಾರಿ ತೆರೆದಿದೆ. ಅದೇನೆಂದರೆ ಕನ್ಯೆಯನ್ನು ಬೇರೊಂದು ಗೋತ್ರದವರಿಗೆ ತಾತ್ಕಾಲಿಕವಾಗಿ ದತ್ತು ಕೊಡುವುದು. ಉದಾಹರಣೆ: ಇಬ್ಬರೂ ವಿಶ್ವಾಮಿತ್ರ ಗೋತ್ರವಾಗಿಬಿಟ್ಟರೆ ಆಗ ವಿಶ್ವಾಮಿತ್ರ ಗೋತ್ರದ ಹುಡುಗಿಯನ್ನು ವಸಿಷ್ಠ ಗೋತ್ರದ ದಂಪತಿಗಳಿಗೆ ದತ್ತುಕೊಡುವುದು. ಆಮೇಲೆ ಕನ್ಯೆಯನ್ನು ದತ್ತಕ ಪಡೆದ ದಂಪತಿಗಳು ತಮ್ಮ ವಸಿಷ್ಠ ಗೋತ್ರದ ಹೆಸರಿನಲ್ಲಿ ವಿಶ್ವಾಮಿತ್ರ ಗೋತ್ರದ ಕುಟುಂಬಕ್ಕೆ ಕನ್ಯಾದಾನ ಮಾಡಲು ಅಡ್ಡಿಯಾಗುವುದಿಲ್ಲ. ಹೀಗೆ ಗೋತ್ರದ ಸಮಸ್ಯೆಯನ್ನು ಸುಲಭವಾಗಿ ಪರಿಹರಿಸುವುದೂ ಉಂಟು.

ಈ ಲೇಖನದ ಆರಂಭದಲ್ಲಿ ಪ್ರಸ್ತಾಪಿಸಿದ ಡಾ॥ ಸಂತೋಷ್ ದಹಿಯಾ ಅವರ ಮಾತುಗಳನ್ನು ಈಗ ಮತ್ತೊಮ್ಮೆ ಪರಿಶೀಲಿಸಬಹುದು. (ಆಧುನಿಕ ಕಾಲದಲ್ಲಿ ಜೀವವಿಜ್ಞಾನವನ್ನು ಓದಿದ ಹಲವು ವಿದ್ಯಾವಂತರು ಕೂಡ ಇದೇ ನಂಬಿಕೆಯನ್ನು ಇಟ್ಟುಕೊಂಡಿದ್ದಾರೆ.) ಸ್ವಗೋತ್ರದಲ್ಲಿ ಮದುವೆಯಾದ ದಂಪತಿಗಳಿಗೆ ಹುಟ್ಟುವ ಮಕ್ಕಳು ದೈಹಿಕ-ಮಾನಸಿಕ ದೌರ್ಬಲ್ಯಗಳಿಗೆ ಒಳಗಾಗುತ್ತಾರೆಂದೂ, ಈ ಅಪಾಯವನ್ನು ತಪ್ಪಿಸಿ 'ವೈಜ್ಞಾನಿಕ ಸಂಪ್ರದಾಯ'ವನ್ನು ರಕ್ಷಿಸುವ ಸಲುವಾಗಿಯೆ ತಾವು ಸ್ವಗೋತ್ರ ವಿವಾಹಗಳನ್ನು ವಿರೋಧಿಸುವುದಾಗಿಯೂ ಈ ಡಾಕ್ಟರ್ ಹೇಳಿದ್ದಾರೆ. ಆದರೆ ತಂದೆ-ತಾಯಿಯರಿಂದ ವಂಶಾನುಗತವಾಗಿ ಮಕ್ಕಳಿಗೆ ಬರುವ ಗುಣದೋಷಗಳಿಗೆ ಕಾರಣವಾದ 'ವಂಶವಾಹಿ'ಗಳ ಬಗೆಗೆ 'ತಳಿಶಾಸ್ತ್ರ'ದಲ್ಲಿ ಈಗಾಗಲೆ ನಡೆದಿರುವ ಸಂಶೋಧನೆಗಳ ಬೆಳಕಿನಲ್ಲಿ ನಾವು ಈ ವಿಚಾರವನ್ನು ಪರಿಶೀಲಿಸಬೇಕಾಗುತ್ತದೆ.

ಮಕ್ಕಳಲ್ಲಿ ಆನುವಂಶಿಕವಾಗಿ ಪ್ರಸರಣವಾಗುವ ದೈಹಿಕ, ಮಾನಸಿಕ ಗುಣದೋಷಗಳಿಗೆ ಕಾರಣವಾಗುವ ವಂಶವಾಹಿಗಳನ್ನು 'ಜೀನ್ಸ್'ಗಳೆನ್ನುತ್ತಾರೆ. ತಳಿಶಾಸ್ತ್ರದಲ್ಲಿ ಮಹತ್ವದ ಸಂಶೋಧನೆ ನಡೆಸಿದ ಗ್ರಿಗೊರ್ ಮೆಂಡೆಲ್ ಎಂಬ ವಿಜ್ಞಾನಿಯ ಹೆಸರಿನಲ್ಲಿ ವಂಶವಾಹಕಗಳನ್ನು 'ಮೆಂಡಲಿಯನ್ ಜೀನ್ಸ್' ಎನ್ನುವುದೂ ಉಂಟು. ಮಗುವಿನ (ಅದು ಗಂಡಾಗಲಿ, ಹೆಣ್ಣಾಗಲಿ) ತಾಯಿಯ ಕಡೆಯಿಂದ ಒಂದು ಅಂಶವೂ ತಂದೆಯ ಕಡೆಯಿಂದ ಮತ್ತೊಂದು ಅಂಶವೂ ಬಂದು ಜೊತೆಗೂಡಿ ಆಗಿರುವಂತಹ ಜೀವಾಣು ಘಟಕಗಳು ಈ ವಂಶವಾಹಿಗಳು. ಆದ್ದರಿಂದ ಒಂದು ಜೋಡಿ ಗಂಡ-ಹೆಂಡತಿಯರಿಗೆ ಹುಟ್ಟಿದ ಅಣ್ಣ-ತಂಗಿ/ಅಕ್ಕ-ತಮ್ಮನಲ್ಲಿ ಒಂದೇ ಬಗೆಯ ವಂಶವಾಹಿಗಳಿರುತ್ತವೆಯೆಂಬುದು ವೈಜ್ಞಾನಿಕ ಸತ್ಯ.

**ಗೋತ್ರ ಮತ್ತು ವಂಶವಾಹಿಗಳು**

ಒಂದೇ ಗೋತ್ರದಲ್ಲಿ ಹುಟ್ಟಿದ ಅಕ್ಕ-ತಮ್ಮ ಅಥವಾ ಅಣ್ಣ-ತಂಗಿಯರಲ್ಲಿ ಹುಡುಗಿಯರನ್ನು ಬೇರೆಯ ಗೋತ್ರದವರಿಗೆ ದತ್ತು ಕೊಟ್ಟರೆ ಅಥವಾ ಅವರನ್ನು ಬೇರೆಯ ಗೋತ್ರದ ಕುಟುಂಬಕ್ಕೆ ಮದುವೆ ಮಾಡಿಕೊಟ್ಟೊಡನೆ ಅವರ (ಹೆಣ್ಣುಮಕ್ಕಳ) ಗೋತ್ರವು ಬದಲಾಗುತ್ತದೆ, ಎಂಬುದು ಸಂಪ್ರದಾಯ. ಹೀಗೆ ಗೋತ್ರವು ಬದಲಾದ ಮಾತ್ರಕ್ಕೆ ಅವಳಲ್ಲಿ ಅಡಕವಾಗಿರುವ ವಂಶವಾಹಿಗಳು ಕೂಡ ಬದಲಾಗಿಬಿಡುತ್ತವೆಯೆ? – ಇದು ನಾವು ಕೇಳಿಕೊಳ್ಳಬೇಕಾದ ಪ್ರಶ್ನೆ. ಈ ಪ್ರಶ್ನೆ ಏಕೆ ಮುಖ್ಯವಾಗುತ್ತದೆಯೆಂದರೆ ಒಬ್ಬ ಹುಡುಗನು ತನ್ನ ಅಕ್ಕನ ಅಥವಾ ತಂಗಿಯ ಮಗಳನ್ನು ಮದುವೆಯಾಗುವುದು ಸಂಪ್ರದಾಯ ವಿರುದ್ಧವಲ್ಲ. ವಾಸ್ತವವಾಗಿ ಹುಡುಗಿಯರು ತಮ್ಮ ಸೋದರಮಾವನನ್ನು (ಅಥವಾ ಸೋದರಮಾವನ ಮಗನನ್ನು) ಅಂದರೆ ಆಕೆಯ ತಾಯಿಯ ಅಣ್ಣ ಅಥವಾ ತಮ್ಮನನ್ನು ಮದುವೆಯಾಗುವುದು ಶ್ರೇಷ್ಠ ಸಂಪ್ರದಾಯವೆಂದು ಕೂಡ ಹೇಳಲಾಗುತ್ತದೆ. ಅಕ್ಕನ ಅಥವಾ ತಂಗಿಯ ಮಗಳನ್ನು ಮದುವೆಯಾಗುವ ಮೊದಲ ಹಕ್ಕುದಾರ ಆ ಹುಡುಗಿಯ ಸೋದರಮಾವನೇ ಸರಿ – ಎಂಬ ಅಭಿಪ್ರಾಯವೂ ಪ್ರಚಲಿತವಿದೆ! ಗೋತ್ರ ಮತ್ತು ವಂಶವಾಹಿನಿಗಳ ಬಗೆಗಿನ ಈ ಎಲ್ಲ ವಿವರಗಳನ್ನು ಪರಿಶೀಲಿಸಿದಾಗ 'ವೈಜ್ಞಾನಿಕ ಸಂಪ್ರದಾಯವನ್ನು ರಕ್ಷಿಸುವುದಕ್ಕಾಗಿ ತಾವು ಸ್ವಗೋತ್ರ ವಿವಾಹವನ್ನು ವಿರೋಧಿಸುವುದಾಗಿ' ಡಾ॥ ಸಂತೋಷ ದಹಿಯಾ ಹೇಳುವ ಮಾತು ಎಂತಹ ಬೊಗಳೆಯೆಂಬುದು ತನ್ನಿಂದ ತಾನೆ ಸ್ಪಷ್ಟವಾಗುತ್ತದೆ.

ಗೋತ್ರದ ಬಗೆಗೆ ಮೇಲುಜಾತಿಯ ಹಿಂದೂಗಳು, ಅದರಲ್ಲೂ ಬ್ರಾಹ್ಮಣರು, ಅನುಸರಿಸುವ ವಿಧಿ-ನಿಷೇಧಗಳ ಬಗೆಗೆ ಇಷ್ಟೆಲ್ಲ ಹೇಳಿದ ಮೇಲೂ ಹರಿಯಾಣ ಪ್ರದೇಶದ ಜಾಟ್ ಜನಾಂಗದವರು ಗೋತ್ರವೆಂಬ ಶಬ್ದವನ್ನು, ತಾವು ಪ್ರಪ್ರಾಚೀನ ಕಾಲದ ಒಬ್ಬಾನೊಬ್ಬ ಋಷಿ ಮೂಲಕ್ಕೆ ಸೇರಿದವರೆಂಬ ಅರ್ಥದಲ್ಲಿಯೇ ಬಳಸುತ್ತಾರೆಂಬುದು ಸಂದೇಹ. ಏಕೆಂದರೆ ಇವರು 'ಕಾಶ್ಯಪ' ಎಂಬ ಮಾತನ್ನು ಬಳಸಿದ ಹಾಗೆಯೆ 'ರಾಜಾಸ್ತಾನೀ' ಎಂಬುದನ್ನೂ ಬಳಸಿದ್ದಾರೆ. 'ರಾಜಾಸ್ತಾನೀ' – ಎಂಬುದು ಕೂಡ ಒಂದು ಗೋತ್ರವೆಂದು ಭಾವಿಸಲು ಸಮರ್ಥನೆಯಿಲ್ಲ. ಪ್ರಾಯಶಃ ಖಾಪ್ ಪಂಚಾಯಿತಿಯ ನೇತಾರರು ವೇದಾಗಮಗಳಲ್ಲಿ ಉಕ್ತವಾದ ಈ ಸಂಸ್ಕೃತ ಶಬ್ದವನ್ನು ಬಳಸುವುದು ತಮ್ಮ ವಾದಕ್ಕೆ ಸನಾತನತೆಯ ತೂಕವನ್ನೂ, ಸಂಸ್ಕೃತಭಾಷೆಯ ಗಾಂಭೀರ್ಯವನ್ನೂ ಲಗತ್ತಿಸುವ ಸಲುವಾಗಿ ಎಂದು ತೋರುತ್ತದೆ. ಖಾಪ್ ಪಂಚಾಯಿತಿಗಳು 'ಸ್ವಗೋತ್ರ ವಿವಾಹ'ವನ್ನು ಅಷ್ಟೊಂದು ಉಗ್ರವಾಗಿ ಖಂಡಿಸಿ, ನ್ಯಾಯಾಲಯದಿಂದ ಕಠಿಣ ಶಿಕ್ಷೆಗೆ ಒಳಗಾದವರನ್ನು ರಕ್ಷಿಸಲು ಮತ್ತು ಹಿಂದೂ ವಿವಾಹ ಕಾಯ್ದೆಗೆ ತಿದ್ದುಪಡಿ ತರುವಂತೆ ಸರ್ಕಾರದ ಮೇಲೆ ಒತ್ತಾಯ ಹೇರಲು ಧಾವಿಸುವುದನ್ನು ನೋಡಿದರೆ ಜಾಟ್ ಸಮುದಾಯದ ಪ್ರತಿಷ್ಠಿತ ನಾಯಕರು ತಮ್ಮ ಯಾವುದೋ 'ಗುಪ್ತಕಾರ್ಯಸೂಚಿ'ಯನ್ನು ಈಡೇರಿಸಿಕೊಳ್ಳುವ ಉದ್ದೇಶವಿಟ್ಟುಕೊಂಡಿರುವಂತೆ ತೋರುತ್ತದೆ.




**ನ್ಯಾಯಾಲಯದ ತೀರ್ಪು ಮತ್ತು ಖಾಪ್ ಮುಖಂಡರ ತಲ್ಲಣ**

ಮನೋಜ್-ಬಬ್ಲಿಯರ ಹತ್ಯೆ ಪ್ರಕರಣದಲ್ಲಿ ಕರ್ನಾಲ್ ಅಪರ ಸತ್ರ ನ್ಯಾಯಾಲಯದ ತೀರ್ಪು ಹೊರಬಿದ್ದಮೇಲೆ ಖಾಪ್ ಪಂಚಾಯಿತಿಯ ಜಾಟ್ ಪ್ರತಿಷ್ಠಿತರು ತಲ್ಲಣಗೊಂಡಿದ್ದಾರೆ. ಇದರ ಕಾರಣವನ್ನು ಹರಿಯಾಣ ಪ್ರದೇಶದ ಜನಾಂಗ ಪರಿಸ್ಥಿತಿಯ ಸಮೀಕ್ಷೆಯ ಮೂಲಕ ನಾವು ಅರ್ಥಮಾಡಿಕೊಳ್ಳಬೇಕಾಗುತ್ತದೆ.

ಹರಿಯಾಣ ರಾಜ್ಯವು ಭೌಗೋಳಿಕ ವಿಸ್ತಾರದಲ್ಲಿ ತುಂಬ ಚಿಕ್ಕದಾದರೂ ಇಲ್ಲಿನ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸನ್ನಿವೇಶಗಳು ತುಂಬ ಭಿನ್ನಭಿನ್ನವಾಗಿವೆ. ವೇಗವಾಗಿ ವಿಸ್ತರಿಸುತ್ತಿರುವ ಬಂಡವಾಳಶಾಹಿ ವ್ಯವಸ್ಥೆಯ ಜೊತೆಗೆ ಪ್ರತಿಗಾಮಿ ಊಳಿಗಮಾನ್ಯ ಮನೋಭಾವವೂ ಅಸ್ತಿತ್ವದಲ್ಲಿದೆ. ಒಂದು ಕಡೆ ದಲಿತರು, ಸ್ತ್ರೀಯರು ಮತ್ತು ಹಿಂದುಳಿದ ವರ್ಗಗಳಲ್ಲಿ ಶಿಕ್ಷಣ ಮತ್ತು ರಾಜಕೀಯ ಪ್ರಜ್ಞೆಗಳು ವ್ಯಾಪಕವಾಗುತ್ತಿದ್ದರೆ, ಮತ್ತೊಂದುಕಡೆ ಸ್ಥಾಪಿತ ಹಿತಾಸಕ್ತಿಗಳನ್ನು ರಕ್ಷಿಸುವ ಸಲುವಾಗಿ ಖಾಪ್ ಜಾತಿ ಪಂಚಾಯಿತಿಗಳೂ ಸಂಘಟಿತವಾಗುತ್ತಿವೆ. ಸಂವಿಧಾನಬದ್ಧವಲ್ಲದ ಈ ಜಾತಿ ಪಂಚಾಯಿತಿಗಳು ದೇಶದ ಕಾನೂನು ವ್ಯವಸ್ಥೆಗೆ ಸವಾಲು ಹಾಕುತ್ತಿವೆ. ಮನಸ್ಸಿಗೆ ತೋಚಿದಂತೆ 'ದಿಖ್ಖತ್'ಗಳನ್ನು ಹೊರಡಿಸುವ ಸಂದರ್ಭಗಳು ದಿನದಿನಕ್ಕೆ ಹೆಚ್ಚುತ್ತಿವೆ. ತರುಣ ದಂಪತಿಗಳು, ದಲಿತರು ಮತ್ತು ಪ್ರಗತಿಪರ ಚಿಂತಕರ ಮೇಲಿನ ದಾಳಿಗಳು ಉಲ್ಬಣಿಸುತ್ತಿವೆ. ಈ ಮೊದಲು ಪ್ರಸ್ತಾಪಿಸಿದ ಮನೋಜ್-ಬಬ್ಲಿಯರ ಪ್ರಕರಣವು ಇದಕ್ಕೊಂದು ಜ್ವಲಂತ ನಿದರ್ಶನ. ಸಾಂಸ್ಕೃತಿಕವಾಗಿ ನೋಡಿದರೆ, ರಾಜ್ಯದ ಕೆಲವು ಭಾಗಗಳಲ್ಲಿ ಮತ್ತು ಕೆಲವು ಉಪಜಾತಿಗಳಲ್ಲಿ ಸ್ವಗೋತ್ರ ವಿವಾಹಗಳು ಮತ್ತು ಒಂದೇ ಹಳ್ಳಿಯ ಹೆಣ್ಣು ಗಂಡುಗಳು ಮದುವೆಯಾಗುವುದು ಅಪರೂಪವೇನಲ್ಲ. ಇನ್ನು ಕೆಲವು ಪ್ರದೇಶಗಳಲ್ಲಿ ಸ್ವಗೋತ್ರ ವಿವಾಹವು ನಿಷಿದ್ಧವೆನ್ನಲಾಗುತ್ತದೆ. ಖಾಪ್ ಎಂಬ ಜಾತಿ ಪಂಚಾಯಿತಿಗಳು ಕೂಡ ರಾಜ್ಯದಾದ್ಯಂತ ಏಕರೀತಿಯಲ್ಲಿ ವ್ಯಾಪಿಸಿಲ್ಲ. ಕೆಲವು ಸಮುದಾಯಗಳಲ್ಲಿ ಮಾತ್ರ ಒಂದು ಜಾತಿಯ ಮುಖಂಡರು ತಮ್ಮ ಸುತ್ತಮುತ್ತಿನ ಇತರರು ರೂಢಿಸಿಕೊಂಡುಬಂದಿರುವ ಸಂಪ್ರದಾಯಗಳನ್ನು ಅಲ್ಲಗಳೆದು ತಾವೇ ಹರ್ಯಾಣ ಸಂಸ್ಕೃತಿಯ ಅಧಿಕೃತ ಪ್ರತಿನಿಧಿಗಳೆಂದು ಸ್ವಯಂಘೋಷಿಸಿಕೊಳ್ಳುತ್ತ ಇತರರ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದಾರೆ.

ರಾಜ್ಯದ ಜನಸಂಖ್ಯಾ ಪ್ರಮಾಣದ ಸ್ಥಿತಿಗಳು ಮತ್ತು ಅಭಿವೃದ್ಧಿಯ ಸಮೀಕ್ಷೆಯು ಸದ್ಯದ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗುತ್ತದೆ. ತಲಾವಾರು

ಆದಾಯದಲ್ಲಿ ಇಡೀ ದೇಶದಲ್ಲೆ ಎರಡನೆ ಸ್ಥಾನದಲ್ಲಿರುವ ಹರಿಯಾಣ ರಾಜ್ಯದಲ್ಲಿ ಗಂಡು ಹೆಣ್ಣುಗಳ ಪ್ರಮಾಣವು ಅತ್ಯಂತ ಕೆಳಮಟ್ಟದಲ್ಲಿದೆ. ಅಂದರೆ ೦-೬ ವರ್ಷಗಳ ವಯೋಮಿತಿಯಲ್ಲಿ ಪ್ರತಿ ೧೦೦೦ ಗಂಡುಮಕ್ಕಳಿಗೆ ೮೨೧ ಹೆಣ್ಣುಮಕ್ಕಳಿವೆ! ಹೆಣ್ಣು ಭ್ರೂಣಹತ್ಯೆಯು ಅತಿವ್ಯಾಪಕವಾಗಿದೆ. ಪರಿಸ್ಥಿತಿಯು ಎಷ್ಟು ಹದಗೆಟ್ಟಿದೆಯೆಂದರೆ ಇಲ್ಲಿನ ಗಂಡಸರಿಗೆ ಹೆಂಡತಿಯರನ್ನು ಹೊರರಾಜ್ಯಗಳಿಂದ ದುಡ್ಡು ಕೊಟ್ಟು ಕೊಂಡು ತರಲಾಗುತ್ತಿದೆ. (ಅಂದರೆ ಕೈತುಂಬ ಕಾಸಿದ್ದವನಿಗೆ ಮಾತ್ರ ಹೆಂಡತಿಯನ್ನು ಪಡೆಯುವುದು ಸಾಧ್ಯ ಎನ್ನುವಂತಾಗಿದೆ.) ಇಷ್ಟಾದರೂ ಹೆಣ್ಣು ಭ್ರೂಣ ಹತ್ಯೆಯ ವಿರುದ್ಧವಾಗಲಿ, ಸಾಮಾನ್ಯ ರೈತರನ್ನು ಕಂಗಾಲುಗೊಳಿಸಿರುವ ವ್ಯವಸಾಯದ ಸಮಸ್ಯೆಗಳ ಪರಿಹಾರಕ್ಕಾಗಲಿ ಸರ್ವಖಾಪ್ ಪರಿಷತ್ತು ಒಮ್ಮೆಯೂ ಸಭೆ ಸೇರಿ ಚರ್ಚಿಸಿಲ್ಲ, ಚಳುವಳಿ ನಡೆಸಿಲ್ಲ. ಆದರೆ ಮನೋಜ್-ಬಬ್ಲಿಯರ ಹತ್ಯಾ ಪ್ರಕರಣದ ತೀರ್ಪು ಹೊರಬಿದ್ದ ಕೆಲವೇ ದಿನಗಳಲ್ಲಿ ಸರ್ವಖಾಪ್ ಪರಿಷತ್ತು ದೊಡ್ಡ ಸಭೆ ನಡೆಸಿ, ಜಾಟ್ ಸಮಾಜದ ಮುಖಂಡರು ತಾವು ನಡೆಸಬೇಕಾಗಿರುವ ಹೋರಾಟದ ವಿವರಗಳನ್ನು ಚರ್ಚಿಸಿದರು, ಠರಾವುಗಳನ್ನು ಅಂಗೀಕರಿಸಿದರು. ಸಭೆಯು ಅಂಗೀಕರಿಸಿದ ಠರಾವುಗಳಲ್ಲಿ ಬಹುಮುಖ್ಯವಾದುದು ಸ್ವಗೋತ್ರ ವಿವಾಹವನ್ನು ನಿಷೇಧಿಸುವಂತೆ ೧೯೫೫ರ ಹಿಂದೂ ವಿವಾಹ ಕಾಯ್ದೆಗೆ ತಿದ್ದುಪಡಿ ಮಾಡಲು ಸರ್ಕಾರದ ಮೇಲೆ ಒತ್ತಡ ಹೇರುವುದು. ಏಕಗೋತ್ರದ ಹೆಣ್ಣು ಗಂಡುಗಳು ಹತ್ತಿರದ ರಕ್ತಸಂಬಂಧಿಗಳಾಗಿರುತ್ತಾರೆ; ಆದ್ದರಿಂದ ಅವರು ದಂಪತಿಗಳಾಗುವುದು ನಿಷಿದ್ಧವೆಂಬುದು ಇವರ ವಾದ. ಆದರೆ ಒಂದೇ ಗೋತ್ರದವರೆಂಬುದಕ್ಕೂ 'ಹತ್ತಿರದ ರಕ್ತಸಂಬಂಧಿಗಳು' ಎನ್ನುವುದಕ್ಕೂ ಇರುವ ವ್ಯತ್ಯಾಸವನ್ನು ಕುರಿತು ಇವರು ತರ್ಕಬದ್ಧವಾಗಿ ಯೋಚಿಸುವುದೇ ಇಲ್ಲ. (ಅಥವಾ ಕೆಲವರಿಗೆ ಈ ವ್ಯತ್ಯಾಸವು ತಿಳಿದಿದ್ದರೂ, ತಮ್ಮದೇ ಆದ ಕಾರಣಗಳಿಗಾಗಿ ಅದನ್ನು ಬಹಿರಂಗವಾಗಿ ವ್ಯಕ್ತಪಡಿಸುವುದಿಲ್ಲ.) ಅಣ್ಣತಮ್ಮಂದಿರ ಮಕ್ಕಳು; ಅಕ್ಕ-ತಂಗಿಯರ ಮಕ್ಕಳು ಅತ್ಯಂತ ಹತ್ತಿರದ ರಕ್ತಸಂಬಂಧಿಗಳು. ಯಾವ ವ್ಯಕ್ತಿಯೂ ತನ್ನ ತಂದೆಯ ಅಣ್ಣನ (ದೊಡ್ಡಪ್ಪನ) ಅಥವಾ ತಮ್ಮನ (ಚಿಕ್ಕಪ್ಪನ) ಮಗನನ್ನು/ಮಗಳನ್ನು ಮದುವೆಯಾಗುವುದಿಲ್ಲ. ಹಾಗೆಯೆ ತನ್ನ ತಾಯಿಯ ಅಕ್ಕ (ದೊಡ್ಡಮ್ಮ) ಅಥವಾ ತಂಗಿಯ (ಚಿಕ್ಕಮ್ಮನ) ಮಗನನ್ನು/ಮಗಳನ್ನು ಮದುವೆಯಾಗುವುದಿಲ್ಲ. ಇವರು ವಂಶ ಪರಂಪರೆಯ ಸಂತತಿಗಳಾಗಿರುತ್ತಾರೆ. ತಂದೆಯ ಕಡೆಯ ಅಥವಾ ತಾಯಿಯ ಕಡೆಯ ಸಂತತಿಯ ಗಂಡು-ಹೆಣ್ಣುಗಳ ಮದುವೆಯನ್ನು, ಹಿಂದೂ ವಿವಾಹ ಕಾಯ್ದೆಯು (೧೯೫೫) ಈಗಾಗಲೆ ನಿಷೇಧಿಸಿದೆ. ಆದ್ದರಿಂದ ಅದಕ್ಕಾಗಿ ಖಾಪ್ ಜಾತಿ ಪಂಚಾಯಿತಿಯ ಜಾಟ್ ಸರದಾರರು ಚಳುವಳಿ ನಡೆಸುವ ಅಗತ್ಯವಿಲ್ಲ.

ತರುಣ ದಂಪತಿಗಳ ವಿರುದ್ಧ ಖಾಪ್ ಪಂಚಾಯಿತಿಗಳು ಹೊರಡಿಸಿದ ದಿಖ್ತ್‌ಗಳಲ್ಲಿ ಬಹಳಷ್ಟು ಜೋಡಿಗಳು ಸ್ವಗೋತ್ರದವರೂ ಅಲ್ಲ. ವಾಸ್ತವವಾಗಿ, ಕುಟುಂಬ ಗೌರವಕ್ಕೆ ಧಕ್ಕೆಯಾಯಿತೆಂಬ ಕಾರಣದಿಂದ ಹತ್ಯೆಯಾದ (ಮರ್ಯಾದಾ ಹತ್ಯೆ)ವರಲ್ಲಿ ಒಂದೇ ಒಂದು ಜೋಡಿ ಮಾತ್ರ ಏಕಗೋತ್ರದವರಾಗಿದ್ದರು. ವಯಸ್ಸಿಗೆ ಬಂದ ಹುಡುಗ ಹುಡುಗಿಯರು ಪರಸ್ಪರ ಪ್ರೀತಿಸಿ ಮಾಡಿಕೊಳ್ಳುವ ಎಲ್ಲ ಪ್ರೇಮವಿವಾಹಗಳನ್ನೂ ಪಾಪಕೃತ್ಯ (ಅಗಮ್ಯ ಗಮನ)ಗಳೆಂಬ ಹುಸಿ ಅಭಿಪ್ರಾಯವನ್ನು ಖಾಪ್ ಪಂಚಾಯಿತಿಗಳು ಹರಡುತ್ತವೆ. ಹೀಗಾಗಿ ತಮ್ಮ ಬಾಳ ಗೆಳೆಯ/ಗೆಳತಿಯರನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ಯುವಜನರಿಂದ ಕಿತ್ತುಕೊಳ್ಳಲಾಗುತ್ತದೆ. ಪ್ರೀತಿಸಿ ಮದುವೆಯಾದ ಹುಡುಗ ಹುಡುಗಿಯರ ಕುಟುಂಬದ ಮೇಲೆ ಬಹಿಷ್ಕಾರ ಹಾಕುತ್ತವೆ. ಗ್ರಾಮದಿಂದ ಹೊರದಬ್ಬುವ ಮೂಲಕ ಅವರನ್ನು ಅಪಾರ ಸಂಕಟಕ್ಕೆ ಈಡುಮಾಡುತ್ತವೆ.

ಸ್ವಗೋತ್ರ ವಿವಾಹದ ಗೊಂದಲಕ್ಕೆ ಗುರಿಯಾದ ವೇದಪಾಲ್ ಮೋಹನ್ ಎಂಬ ಬಡಪಾಯಿಯದು ಒಂದು ಮನಕಲಕುವ ದಾರುಣ ಕಥೆ ಇದು : ವೇದಪಾಲನ ಹೆಂಡತಿಯನ್ನು ಪಕ್ಕದ ಹಳ್ಳಿಯ ಅವಳ ತಂದೆ-ತಾಯಿಯರು ಗೃಹಬಂಧನದಲ್ಲಿಟ್ಟಿದ್ದರು. ಆಕೆಯನ್ನು ತನ್ನ ಮನೆಗೆ ಕರೆದುಕೊಂಡುಬರಲು ವೇದಪಾಲ್ ಹೋಗುವಾಗ ಉಚ್ಚ ನ್ಯಾಯಾಲಯದ ಒಬ್ಬ ಅಧಿಕಾರಿ – ವಾರಂಟ್ ಆಫೀಸರ್ – ಮತ್ತು ಪೊಲೀಸರು ಸಹ ಅವನ ಜೊತೆ ಗಿದ್ದರು. ಆದರೂ ಮಾವನ ಮನೆಯವರು ವೇದಪಾಲ್‌ನ ಹೆಂಡತಿಯನ್ನು ಅವನ ಜೊತೆ ಕಳಿಸಲಿಲ್ಲ. ಏಕೆಂದರೆ ಯಾರಾದರೂ ತಮ್ಮ ಅಕ್ಕಪಕ್ಕದ ಹಳ್ಳಿಗಳ ಹೆಣ್ಣನ್ನು ಮದುವೆಯಾದರೆ 'ಭಯ್ಯಾಚಾರ'ವನ್ನು ಉಲ್ಲಂಘಿಸಿದಂತೆ ಆಗುತ್ತದೆ – ಎಂಬ ಹೊಸ ಸೂತ್ರದ ಆಧಾರದಿಂದ ಖಾಪ್

## ಜ್ಞಾನೋದಯ

ಬೋಧಿ ವೃಕ್ಷದ ಬುಡದಿಂದೆದ್ದ ಬುದ್ಧ
ನಡೆಯುತ್ತಾ ಹೊರಟ – ಎಲ್ಲಾ ಹೊಸ ಅನುಭವ
ದಾರಿಯುದ್ದಕ್ಕೂ ತನ್ನ ಸೂಕ್ತಿಗಳು
ಕೆಳಗೆ ಚೆಲ್ಲಿದ ರಕ್ತ - ಧರ್ಮಕ್ಕಾಗಿ ಅಲ್ಲವೆ ಅಂದುಕೊಂಡ
ಕಳೆದುಕೊಂಡ ಕಂದಗಳ ಉಸಿರ ಬಯಸುತ್ತಾ
ಗೌತಮಿಯರು ದುಃಖಿತರಾದರೆ,
ತ್ರಿಶೂಲಕ್ಕೆ ಸಿಕ್ಕಿದ ಭ್ರೂಣ-ಕ್ರಿಯೆ-ಪ್ರತಿಕ್ರಿಯೆ ಅಂದುಕೊಂಡ
ಅಹಿಂಸೆಯ ನಾಡಲ್ಲಿ - ಹಿಂಸಾ ಸಾಮ್ರಾಜ್ಯ
ಬದಲಾದ ಕಾಲಗತಿ ಅಂದುಕೊಂಡ
ಬಸವಣ್ಣ - ಗಾಂಧಿಗಳ ನಾಡಿನಲ್ಲಿ
ಬೆಂದು ಬಸವಳಿದ ಜನರ ನೋವಕಂಡು
ನಿಟ್ಟುಸಿರಿಡುತ್ತಾ ಬುದ್ಧ ಅಂದುಕೊಂಡ, ಕಾಲಾಯ ತಸ್ಮೈ ನಮಃ
ತಿರುತಿರುಗಿ ಸುಸ್ತಾದ ಬುದ್ಧ ಹಿಂತಿರುಗಲು
ಆಸರೆಯಾಗಿದ್ದ ಬೋಧಿ ವೃಕ್ಷವೇ ಬೋಳಾಗಿತ್ತು.

**ಭಾಗ್ಯ ಹಾಗಲಗಂಚಿ**
ಕುಂಚೆಬೈಲು ಅಂಚೆ, ಶೃಂಗೇರಿ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

ಪಂಚಾಯಿತಿಯು ವೇದಪಾಲ್ ಮೋಹನನ ವಿರುದ್ಧ 'ಫತ್ವಾ' ಹೊರಡಿಸಿತ್ತು! ಹೆಂಡತಿಯನ್ನು ತನ್ನೊಡನೆ ಕರೆತರಲು ಪ್ರಯತ್ನಿಸಿದ ವೇದಪಾಲ್‌ನನ್ನು ಮನಸೋ ಇಚ್ಛೆ ಹೊಡೆದು ಬಡಿದು ಕ್ರೂರವಾಗಿ ಹಿಂಸಿಸಲಾಯಿತು. ಆಮೇಲೆ ಖಾಪ್ ಪಂಚಾಯಿತಿಯ ಮುಂದಿನ ಸಭೆಯು ವೇದಪಾಲ್‌ನಿಗೆ ಮರಣದಂಡನೆ ವಿಧಿಸಿತು. ೨೦೦೯ರ ಮಾರ್ಚ್ ತಿಂಗಳಲ್ಲಿ ಸರ್ವಖಾಪ್ ಮಹಾಸಭೆಯು ವೇದಪಾಲನ ಮರಣದಂಡನೆಯನ್ನು ಬಹಿರಂಗವಾಗಿಯೇ ಘೋಷಿಸಿತು ಮತ್ತು ಜೂನ್ ತಿಂಗಳಲ್ಲಿ ಶಿಕ್ಷೆಯನ್ನು ಜಾರಿಗೊಳಿಸಿದ್ದೂ ಆಯಿತು !

ಖಾಪ್ ಪಂಚಾಯಿತಿಗಳು ಕೆಲವೇ ದಂಪತಿಗಳನ್ನು ಆರಿಸಿಕೊಂಡು, ಏನಾದರೊಂದು ಸೂತ್ರವನ್ನು ಅನ್ವಯಿಸಿ, ಅವರದು ನಿಷಿದ್ಧ ವಿವಾಹವೆಂಬ ಆಪಾದನೆ ಹೊರಿಸಿ ಅವರಿಗೆ ಮರಣದಂಡನೆಯಂಥ ಕ್ರೂರಶಿಕ್ಷೆ ವಿಧಿಸುವುದನ್ನು ನೋಡಿದರೆ, ಇದೆಲ್ಲದರ ಹಿಂದೆ ಒಂದು ಗುಪ್ತ ಉದ್ದೇಶವಿರುವಂತೆ ತೋರುತ್ತದೆ. ಈ ಎಲ್ಲ ಚಮತ್ಕಾರಗಳನ್ನು ಮಾಡುವುದು ಮುಖ್ಯವಾಗಿ ವಿಶೇಷತಃ ಹರಿಯಾಣದ ಜಾಟರಲ್ಲಿ, ಪರಂಪರಾಗತವಾಗಿ ಬಂದಿರುವಂತೆ ಇಡೀ ಆಸ್ತಿಯನ್ನು ಕುಲಪ್ರಧಾನವಾದ ಜಾತಿ ವ್ಯವಸ್ಥೆಯ ಯಜಮಾನನ ವಶದಲ್ಲಿಯೇ ಉಳಿಸಿಕೊಳ್ಳುವ ಹುನ್ನಾರವಿದು ಎಂಬುದನ್ನು ಅರ್ಥಮಾಡಿಕೊಳ್ಳಬೇಕು. ಮುಖ್ಯವಾಗಿ ಹೆಂಗಸು ತನ್ನ ಗಂಡನನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು, ಆಕೆಯ ಲೈಂಗಿಕಾಸಕ್ತಿಯನ್ನು ನಿರ್ಬಂಧಿಸುವ ಮೂಲಕ ತಮ್ಮ ಉದ್ದೇಶವನ್ನು ಸಾಧಿಸಿಕೊಳ್ಳುವುದು ಸಾಧ್ಯವೆಂದು ಜಾಟ್ ಮುಖಂಡರು ಖಚಿತವಾಗಿ ನಂಬಿದ್ದಾರೆ.

ಖಾಪ್ ಮಹಾಪಂಚಾಯಿತಿಯ ಜಾತಿ ಪಂಚಾಯಿತಿಗಳ ವಿರುದ್ಧ ಧ್ವನಿಯೆತ್ತಿದವರನ್ನು ಮಟ್ಟಹಾಕುವುದಾಗಿಯೂ, ಸಮಾಜದಿಂದ ಬಹಿಷ್ಕರಿಸುವುದಾಗಿಯೂ ಬೆದರಿಕೆ ಹಾಕುತ್ತಾರೆ. ಸ್ವಯಂಘೋಷಿತ ಜಾತಿಮುಖಂಡನಾದ ಹರ್‍ಯಾಣದ ಮಾಜಿ ಉನ್ನತ ಪೊಲೀಸ್ ಅಧಿಕಾರಿಯೊಬ್ಬರು ಪಂಚಾಯಿತಿಯನ್ನು ಟೀಕಿಸುವವರಿಗೆ ಬೆದರಿಕೆ ಹಾಕಿರುವುದು ದಾಖಲಾಗಿದೆ. ರಾಷ್ಟ್ರದ ರಾಜಧಾನಿಯಿಂದ ಉತ್ತರಕ್ಕೆ ಹೋದಂತೆ ಬದಲಾಗುವ ಭೂದೃಶ್ಯದೊಡನೆ ಕಾನೂನು ವ್ಯವಸ್ಥೆಯೂ ಬದಲಾಗುತ್ತದೆ! ನಮ್ಮ ಸಮುದಾಯದ ಒಂದು ಭಾಗವು ಖಾಪ್ ಪಂಚಾಯಿತಿಗಳ ನ್ಯಾಯವಿತರಣೆಯಲ್ಲಿ ಪ್ರಶ್ನಾತೀತವಾದ ನಂಬಿಕೆ ಇಟ್ಟಿದ್ದಾರೆ. ಪಂಚಾಯಿತಿಗಳು ಒಂದೇ ಒಂದು ಬಾರಿ ಸಭೆ ಸೇರಿ ಮರಣ ದಂಡನೆಯನ್ನು ಕೂಡ ವಿಧಿಸಬಲ್ಲಷ್ಟು ಬಲಿಷ್ಠವಾಗಿವೆ. ಖಾಪ್ ಪಂಚಾಯಿತಿಯ ಈ ತಾಲಿಬಾನ್ ಶೈಲಿಯ ಬರ್ಬರ, ಅನಾಗರಿಕ ಆಜ್ಞೆಗಳನ್ನು ಅಸಹಾಯಕರು ಮೂಕರಾಗಿ ಒಪ್ಪಿ ನಡೆಯುತ್ತಾರೆ. ಇನ್ನೂ ಹೀನಾಯವಾದುದೆಂದರೆ ಯಾವ ವಿಚಾರಣೆ, ವಾದ ಪ್ರತಿವಾದಗಳೂ ಇಲ್ಲದೆ ಈ ಪಂಚಾಯಿತಿ ಕಟ್ಟೆಗಳ ಮಧ್ಯಯುಗೀಯ ನಡವಳಿಕೆಗಳಿಗೆ ಅಧಿಕೃತವಾದ ಕಾನೂನಿನ ಮುದ್ರೆಯನ್ನು ಪಡೆಯುವ ಪ್ರಯತ್ನಗಳೂ ನಡೆಯುತ್ತಿವೆ.



ಹಿಂದುಳಿದ ಯಾವುದೇ ಜಾತಿಮತ ವರ್ಗಗಳು ತಮ್ಮ ಬದುಕಿನ ಹಕ್ಕಿಗಾಗಿ ದನಿ ಎತ್ತದಂತೆ ನೋಡಿಕೊಳ್ಳಲು ಖಾಪ್ ಪಂಚಾಯಿತಿಗಳು ನಿರ್ಧರಿಸಿವೆ. ಕಳೆದ ಏಪ್ರಿಲ್ ತಿಂಗಳ ೨೧ರಂದು ಪೊಲೀಸರ ಕಣ್ಣೆದುರಿನಲ್ಲೆ ದಲಿತರ ೨೦ ಮನೆಗಳಿಗೆ ಬೆಂಕಿ ಹಚ್ಚಲಾಯಿತು. ಈ ದುಷ್ಕೃತ್ಯವನ್ನು ನಡೆಸಿದವರು ಪ್ರಭಾವಶಾಲಿ ಜಾತಿಯೊಂದಕ್ಕೆ ಸೇರಿದ ಘಾತುಕರು ಎನ್ನಲಾಗಿದೆ. ಈ ದುರ್ಘಟನೆಯಲ್ಲಿ ೧೮ ವರ್ಷದ ಒಬ್ಬ ಅಂಗವಿಕಲ ಹುಡುಗಿ ಮತ್ತು ಕಾಯಿಲೆ ಮಲಗಿದ್ದ ಅವಳ ಅಪ್ಪ ಸುಟ್ಟು ಭಸ್ಮವಾದರು. ಘಟನೆಯು ನಡೆದ ಮೂರು ದಿನಗಳ ಮೇಲೆ ಸಭೆ ಸೇರಿದ ಖಾಪ್ ಪಂಚಾಯಿತಿಯು, ದುರ್ಘಟನೆಯ ಸಂಬಂಧ ಬಂಧಿಸಲ್ಪಟ್ಟಿದ್ದವರೆಲ್ಲ ನಿರ್ದೋಷಿಗಳೆಂದು ತೀರ್ಮಾನಿಸಿತು. ಕೂಡಲೆ ಬಂಧಿತರನ್ನೆಲ್ಲ ಬಿಡುಗಡೆ ಮಾಡುವಂತೆ ಸರ್ಕಾರಕ್ಕೆ ಅಂತಿಮ ಆದೇಶ ನೀಡಿತು! ಇದಲ್ಲವೆ ಈಗ ಪ್ರಜಾಪ್ರಭುತ್ವ !

ಸಾಮಾಜಿಕವಾಗಿ, ಆರ್ಥಿಕವಾಗಿ ದುರ್ಬಲರಾದ ಕುಟುಂಬಗಳ ವಯೋವೃದ್ಧರಿಗೆ ಕೂಡ ಇವರು ಕರುಣೆ ತೋರಿಸುವುದಿಲ್ಲ. ೨೦೦೯ರ ಡಿಸೆಂಬರ್ ತಿಂಗಳಲ್ಲಿ ಖೇದಿ ಮೆಹನ್ ಎಂಬ ಹಳ್ಳಿಯ ಹೊಸ ಮದುವಣಿಗನೊಬ್ಬನ ಅಪ್ಪನ ಬಾಯಿಗೆ ಒತ್ತಾಯದಿಂದ ಎಕ್ಕಡವನ್ನು ತುರುಕಿ, ಇಡೀ ಗ್ರಾಮಸ್ಥರ ಎದುರಿನಲ್ಲಿ ಅವನು ಅದನ್ನು ಕಚ್ಚಿಹಿಡಿದು ನಿಲ್ಲುವಂತೆ ಮಾಡಲಾಯಿತು !

ಹರಿಯಾಣದ ಸುತ್ತಮುತ್ತಲ ಪ್ರದೇಶದ ಸಾಮಾನ್ಯ ನಾಗರಿಕರು ಎರಡು ಬಗೆಯ ಮೌಲ್ಯಗಳ ನಡುವೆ ಇಕ್ಕಟ್ಟಿನಲ್ಲಿ ಸಿಕ್ಕಿಬಿದ್ದಿರುವಂತಿದೆ. ಒಂದುಕಡೆ ಆರ್ಥಿಕ ಉದಾರೀಕರಣವು ಸಾಧ್ಯವಾಗಿಸಿರುವ ಕುರುಡು ಕೊಳ್ಳುಬಾಕ ಸಂಸ್ಕೃತಿ; ಮತ್ತೊಂದು ಕಡೆ ಖಾಪ್ ಪಂಚಾಯಿತಿಗಳು ಪ್ರತಿನಿಧಿಸುವ ಕಾಲಾತೀತ ಊಳಿಗಮಾನ್ಯ ಮೌಲ್ಯ ವ್ಯವಸ್ಥೆ – ಪರಸ್ಪರ ವಿರುದ್ಧವಾದ ಎರಡು ಬಗೆಯ ಮೌಲ್ಯಗಳ ಇಕ್ಕಟ್ಟಿನಲ್ಲಿ ಸಾಮಾನ್ಯ ನಾಗರಿಕರು ! ಕೈತುಂಬ ಹಣವಿದ್ದು ಬೇಕಾದದ್ದು/ಬೇಡವಾದದ್ದನ್ನೆಲ್ಲ ಕೊಳ್ಳುವ ಶಕ್ತಿ ಇದ್ದ ಮಾತ್ರಕ್ಕೆ ಊಳಿಗಮಾನ್ಯ ಸಾಂಸ್ಕೃತಿಕ ಮೌಲ್ಯಗಳನ್ನು ಮೀರಿ ಬದುಕುವುದು ಸಾಧ್ಯವಾಗುವುದಿಲ್ಲ. ವಾಸ್ತವವಾಗಿ ಹುಸಿ ಆಧುನಿಕೀಕರಣವು ಕಾಲಾತೀತವಾದ ಪ್ರಾಚೀನ ಮೌಲ್ಯಗಳ ಪುನರುತ್ಥಾನದಲ್ಲಿ ತೊಡಗಿದವರಿಗೆ ಹೆಚ್ಚಿನ ಶಕ್ತಿ ನೀಡುತ್ತಿದೆ. ಹೀಗೆ ಪ್ರಾಚೀನ ಸಂಸ್ಕೃತಿಯ ಪುನರುತ್ಥಾನದ ಸೋಗಿನಲ್ಲಿ ನಡೆಯುತ್ತಿರುವ ದಬ್ಬಾಳಿಕೆಗೆ ತುತ್ತಾಗುತ್ತಿರುವವರು ಹೆಚ್ಚಾಗಿ ತಮ್ಮ ಇಚ್ಛೆಯಂತೆ ಪ್ರೀತಿಸಿದವರನ್ನು ಮದುವೆಯಾಗಲು ಬಯಸುವ ತರುಣ-ತರುಣಿಯರು ಇಲ್ಲವೆ ನವ ವಿವಾಹಿತರು.



**ಕೈಕಟ್ಟಿ ಕುಳಿತ ಸರ್ಕಾರ**

ನವ ವಿವಾಹಿತರ ಬದುಕುವ ಹಕ್ಕನ್ನು ರಕ್ಷಿಸುವ ವಿಚಾರದಲ್ಲಿ ನ್ಯಾಯಾಲಯಗಳು ನಿರ್ಣಾಯಕ ಪಾತ್ರ ವಹಿಸಬಹುದಾದರೂ ನ್ಯಾಯಾಲಯಕ್ಕೆ ತನ್ನದೇ ಆದ ಇತಿಮಿತಿಗಳಿವೆ. ಪಂಜಾಬ್ ಮತ್ತು ಹರಿಯಾಣ ಉಚ್ಚ ನ್ಯಾಯಾಲಯದಲ್ಲಿ ೧೮ರಿಂದ ೨೧ ವಯಸ್ಸಿನ ನವದಂಪತಿಗಳಿಗೆ ಸಂಬಂಧಿಸಿದ ಹತ್ತು ಮೊಕದ್ದಮೆಗಳನ್ನು ಒಟ್ಟಾಗಿ ವಿಚಾರಣೆ ನಡೆಸುವ ಸಂದರ್ಭದಲ್ಲಿ ನ್ಯಾಯಮೂರ್ತಿ ಕೆ. ಎಸ್. ಆಹ್ಲುವಾಲಿಯ ಅವರು ಸಮಾಜದ ಕಣ್ಣು ತೆರೆಸುವ ಕೆಲವು ಮಾತುಗಳನ್ನಾಡಿದ್ದಾರೆ. ಅವರು ಹೇಳುತ್ತಾರೆ : ''ಮದುವೆಯಾದ ಈ ನವದಂಪತಿಗಳ ಸ್ವಾತಂತ್ರ್ಯ ಮತ್ತು ಬದುಕುವ ಹಕ್ಕಿನ ಬಗೆಗೆ ನ್ಯಾಯಾಧೀಶರು ಉತ್ತರಿಸಬೇಕಾದಂಥ ಮೊಕದ್ದಮೆಗಳಿಂದ ಉಚ್ಚ ನ್ಯಾಯಾಲಯವು ತುಂಬಿತುಳುಕುತ್ತಿದೆ. ಸರ್ಕಾರವು ಮಾತ್ರ ಮೂಕಪ್ರೇಕ್ಷಕನಂತೆ ಕೈಕಟ್ಟಿ ಕುಳಿತಿದೆ. ಅದು (ಸರ್ಕಾರವು) ನಿದ್ದೆಯಿಂದ ಎಚ್ಚರಗೊಳ್ಳುವುದು ಯಾವಾಗ ? ನ್ಯಾಯಾಲಯಗಳು ಎಷ್ಟುಕಾಲ ತಾನೆ ನೊಂದವರ ಗಾಯಕ್ಕೆ ಮುಲಾಮು ಹಚ್ಚಿ ಅವರಿಗೆ ಸಾಂತ್ವನ ನೀಡಬಲ್ಲವು ? ಈ ಎಲ್ಲ ಮೊಕದ್ದಮೆಗಳನ್ನು ನ್ಯಾಯಾಲಯವು ಇತ್ಯರ್ಥಗೊಳಿಸುವುದು ಯಾವ ಕಾಲಕ್ಕೆ ?'' ಇಂತಹ ಪರಿಸ್ಥಿತಿಯಲ್ಲಿ ಪ್ರಬಲ ಸಾಮೂಹಿಕ ಚಳುವಳಿಯ ಮೂಲಕ ರಾಜಕೀಯ ಇಚ್ಛಾಶಕ್ತಿಯಿಂದ ಕೂಡಿದ ಶಾಸಕಾಂಗ ಮತ್ತು ಶಾಸನಗಳನ್ನು ಪ್ರಾಮಾಣಿಕವಾಗಿ ಜಾರಿಗೆ ತರುವ ಕಾರ್ಯಾಂಗಗಳು ತರುಣ ದಂಪತಿಗಳ ಬದುಕುವ ಹಕ್ಕನ್ನು ರಕ್ಷಿಸುವ ಜವಾಬ್ದಾರಿ ಹೊರುವಂತೆ ಮಾಡಬೇಕಾಗುತ್ತದೆ.

ಖಾಪ್ ಪಂಚಾಯಿತಿಯ ತೀರ್ಮಾನಗಳನ್ನು ಪ್ರತಿಭಟಿಸಲಾರದೆ 'ಯಾರ ಕೈಲಿ ಲಾಠಿ ಇದೆಯೊ ಅವನ ಮಾತನ್ನೇ ಎಮ್ಮೆ ಕೇಳುತ್ತದೆ' (ಜಿಸ್ ಕಿ ಲಾಠೀ ಉಸ್‌ಕಿ ಭೈನ್ಸ್) ಎಂಬ ನಾಣ್ಣುಡಿಯಂತೆ ಬದುಕುತ್ತಿರುವ ಊಳಿಗಮಾನ್ಯ ವ್ಯವಸ್ಥೆಯನ್ನು ಬದಲಾಯಿಸಿ ಆರೋಗ್ಯಪೂರ್ಣವೂ ಪ್ರಗತಿಪರವೂ ಆದ ನವಸಮಾಜ ನಿರ್ಮಾಣಕ್ಕಾಗಿ ಇಡೀ ಹಿಂದೀ ಭಾಷಿಕ ಪ್ರದೇಶದ ಸುಶಿಕ್ಷಿತ ತರುಣರು ಪ್ರಯತ್ನಶೀಲರಾಗಬೇಕಿದೆ. ಅಲ್ಲಿಯವರೆಗೆ ಹರಿಯಾಣದ ದುರ್ಬಲವರ್ಗದ ಜನರಿಗೆ ದಿನದಿನವೂ ಜೀವಭಯ ತಪ್ಪಿದ್ದಲ್ಲ.

*(ಈ ಲೇಖನದ ಹಲವು ಮಾಹಿತಿಗಳನ್ನು ಏಪ್ರಿಲ್ ಮತ್ತು ಮೇ ತಿಂಗಳ 'ದಿ ಹಿಂದೂ' ದಿನ ಪತ್ರಿಕೆಗಳಿಂದ ಸಂಗ್ರಹಿಸಲಾಗಿದೆ.)*

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು - ೫೬೦ ೦೭೦

# ಮುನಿಸ್ವಾಮಿಯು ಮೇಷ್ಟ್ರಾದ ಪ್ರಸಂಗವು

"ವೃತ್ತಿಗಳಲ್ಲೆಲ್ಲಾ ಅತ್ಯಂತ ಶ್ರೇಷ್ಠವಾದ ವೃತ್ತಿ ಸಿಂಪಲ್ಲಾಗಿ ಅಧ್ಯಾಪನ ವೃತ್ತಿ ಮದಪ್ಪ" ಎಂದು ನನಗೆ ಹೇಳುತ್ತಾ ನಮ್ಮ ತಂದೆಯವರನ್ನು "ಸಿಂಪಲ್ಲಾಗಿ ಒಂದಿಷ್ಟು ನೆಶ್ಯ ಕೊಡ್ರಿ ಸ್ವಾಮಿ" ಎಂದು ಕೇಳಿ ನಮ್ಮ ಮನೆಯೊಳಕ್ಕೆ ಕಾಲಿರಿಸಿದವನು ಸಿಂಪಲ್ ಶಂಕರಪ್ಪ. ಕಾಲೇಜೊಂದರಲ್ಲಿ ಕನ್ನಡ ಅಧ್ಯಾಪಕನಾಗಿದ್ದ ನನ್ನೊಂದಿಗೆ ಮಾತನಾಡುವಾಗಲೆಲ್ಲಾ ಈ ಸಿಂಪಲ್ ಶಂಕರಪ್ಪನು ಅತ್ಯಂತ ವ್ಯಾಕರಣಬದ್ಧವಾಗಿ ಮಾತನಾಡುತ್ತಿದ್ದೇನೆಂದು ಭ್ರಮಿಸಿಕೊಂಡು ನನಗೆ ತುಂಬ ಕಿರಿಕಿರಿ ಉಂಟುಮಾಡುತ್ತಿದ್ದನು. ವಾಚಕ ಮಹಾಶಯರೇ, ನಿಮ್ಮ ಅನುಮತಿಯೊಂದಿಗೆ ಇಲ್ಲಿಂದ ಮುಂದೆ ಇವನನ್ನು ಸಿಂಪಲ್ಲಾಗಿ 'ಸಿಂಪಲ್' ಎಂದೇ ನಿರ್ದೇಶಿಸುತ್ತೇನೆ. ಈ ಸಿಂಪಲ್ಲಿನ ಪುತ್ರರತ್ನವೇ ಪ್ರಸ್ತುತ ಅಧ್ಯಾಯದ ನಾಯಕಮಣಿ ಮುನಿಸ್ವಾಮಿ. ಈ ನಾಯಕಮಣಿಗೆ ಎರಡು ದಿನಗಳ ಹಿಂದಷ್ಟೇ ನಮ್ಮೂರಿನ ಸರ್ಕಾರಿ ಶಾಲೆಯ ಅಧ್ಯಾಪಕನಾಗಿ ಅಪಾಯಿಂಟ್‌ಮೆಂಟ್ ಆರ್ಡರ್ ಬಂದದ್ದೆ ಸಿಂಪಲ್ ಉದುರಿಸಿದ ಮೇಲಿನ ಆಣಿಮುತ್ತುಗಳಿಗೆ ಕಾರಣವಾಗಿತ್ತು. ಮೊದಮೊದಲು ಮೇಷ್ಟ್ರುಗಳನ್ನೆಲ್ಲಾ ಯದ್ವಾತದ್ವಾ ಬೈಯುತ್ತಿದ್ದ ಸಿಂಪಲ್‌ಗೆ ಮಗ ಅಧ್ಯಾಪಕನಾಗಿಬಿಟ್ಟ ಕೂಡಲೆ ಇದ್ದಕ್ಕಿದ್ದಂತೆ ಅಧ್ಯಾಪನವೃತ್ತಿ ಶ್ರೇಷ್ಠವಾದದ್ದೆಂಬ ಜ್ಞಾನೋದಯವಾಗಿಬಿಟ್ಟಿತ್ತು. ಇವನ ಮೊದಲಿನ ಅಭಿಪ್ರಾಯಕ್ಕೆ ಕಾರಣಗಳೇನೋ ಇದ್ದವು. ಹಿಂದೆ ನಮ್ಮೂರ ಅನೇಕ ಮೇಷ್ಟ್ರುಗಳು ಹುಡುಗರಿಂದಲೇ ಬೀಡಿ ಸಿಗರೇಟು ತರಿಸಿಕೊಳ್ಳುವುದು, ಶಾಲೆಯಲ್ಲೇ ಗುಟ್ಟಾಗಿ ಹೆಂಡ ಕುಡಿಯುವುದು ಇತ್ಯಾದಿ ಉದ್ಯಮಗಳಲ್ಲಿ ತೊಡಗಿ ಪರಸ್ತ್ರೀಯರೊಂದಿಗೆ ಅಕ್ರಮ ಸಂಬಂಧಗಳಿವೆಯೆಂಬ ಪುಕಾರಿದ್ದು, ಪಾಠ ಮಾಡುವುದೊಂದನ್ನು ಬಿಟ್ಟು ಉಳಿದ ಅನೇಕಾನೇಕ ಹಲ್ಕ ಕೆಲಸಗಳನ್ನು ಮಾಡುತ್ತಿದ್ದು, ಶಾಲೆಯು ಎಕ್ಕುಟ್ಟಿ ಹೋಗಿತ್ತು. ನಮ್ಮೂರಿನ ಹುಡುಗರೂ ಅಷ್ಟೆ, ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಾಗಿದ್ದರೂ ಪಡ್ಡೆ ಹುಡುಗರಿಗಿಂತ ಚೇಷ್ಟೆಕೋರರು. ಮೇಷ್ಟ್ರು ನಾರಾಯಣಪ್ಪ, ಒಮ್ಮೆ ಉಲಿಯನನ್ನು ಬೈದರು. ಮಾರನೇ ದಿನ ಐದನೇ ಕ್ಲಾಸಿನ ಗೋಪಾಲಾಚಾರಿ ಜೇಡಿಮಣ್ಣಿನಲ್ಲಿ ಗುರುವರೇಣ್ಯರ ಕಳೇಬರದ ಗೊಂಬೆಯನ್ನು ತದ್ವತ್ತಾಗಿ ತಯಾರು ಮಾಡಿದನು. ಇನ್ನೊಂದಷ್ಟು ಹುಡುಗರು ಮನೆಗಳಿಂದ ಬಿದಿರಿನ ಗಳುಗಳನ್ನು ಕದ್ದು ತಂದು ಚಟ್ಟ ಕಟ್ಟಿದರು. ಹುಡುಗರೇ ಸಿದ್ಧಪಡಿಸಿದ ನಾಲ್ಕು ಚಕ್ರದ ಟ್ರಾಲಿಯ ಮೇಲೆ ಊರಿನ ಕೇರಿಕೇರಿಗಳಲ್ಲಿ ಗುರು ನಾರಾಯಣಪ್ಪನವರ ಪಾರ್ಥಿವ ಶರೀರದ ಮೆರವಣಿಗೆ ಹೊರಟಿತು. ಟಿ. ಮುನಿಯನು ಹಗ್ಗದ ಕುಣಿಕೆ ಕಟ್ಟಿದ್ದ ಕೆಂಡದ ಮಡಿಕೆಯನ್ನು ಹಿಡಿದುಕೊಂಡು ಮೆರವಣಿಗೆಯನ್ನು ಲೀಡ್ ಮಾಡಿದನು. ಗೋವಿಂದುವಿನ ಮಗ ನಾರೇಯಣನು ಒಂಟಿ ಮೇಳ ಊದಿದರೆ, ಸಂಪಂಗಿ ತಮಟೆ ಬಾರಿಸಿಬಿಟ್ಟನು. ಈ ಗಾಂಧರ್ವವಾದ್ಯಕ್ಕೆ ನಾನು, ರಹ್ಮತ್, ಮಹ್ಬೂಬ್, ನಾರಿಗ ಮತ್ತು ಮುನಿಸ್ವಾಮಿ ಗುಂಡುರವಾಗಿ ಸುತ್ತುತ್ತ ಲಯಬದ್ಧವಾಗಿ ಹೆಜ್ಜೆ ಹಾಕಿದೆವು. ಉಳಿದ ಹುಡುಗರೆಲ್ಲ ಲಬೋಲಬೋ ಬಾಯಿ ಬಡಿದುಕೊಂಡು ಕೃತಕವಾಗಿ ಅಳುವುದನ್ನು ನಟಿಸುತ್ತಿದ್ದರು. ತಮ್ಮ ಮುದ್ದಿನ ಮುಂಡೇವುಗಳ ಪ್ರತಿಭಾ ಪ್ರದರ್ಶನಕ್ಕೆ ಊರಿನ ಸತ್ಪ್ರಜಾ ಸಮೂಹ ಬಾಯಿಬಾಯಿ ಬಿಟ್ಟುಕೊಂಡು ಹಿಗ್ಗಿ ಹೀರೇಕಾಯಿಗಳಾಗಿಬಿಟ್ಟವು. ಗುರುವರೇಣ್ಯರು ನಮ್ಮೂರ ಕಡೆ ತಲೆ ಹಾಕಿ ಮಲಗಲೂ ಇಲ್ಲ. ಹಾಗೂ ಬೇರೆ ಊರಿಗೆ ವರ್ಗಮಾಡಿಸಿಕೊಂಡುಬಿಟ್ಟರು. ವಾಚಕೋತ್ತಮರೆ, ಎಂಥ ಕಾಲ ಬಂದುಬಿಟ್ಟಿತು. ಶಾಂತಂ ಪಾಪಂ! ಚಿಂತಿಸಬೇಡಿರಿ, ತಡೆದುಕೊಳ್ಳಿ. ಈ ಉಲಿಯನ ಬಗ್ಗೆ ಅವನ ರಾದ್ಧಾಂತಗಳ ಬಗ್ಗೆ ದಯವಿಟ್ಟು ಪರಾಂಬರಿಸತಕ್ಕಂಥವರಾಗಿ. ಉಲಿಯನು ಒಂದನೇ ತರಗತಿಗೆ ಸೇರಿದಾಗ ಅವನಿಗೆ ಒಂಬತ್ತು ವರ್ಷ ವಯಸ್ಸು. ಹೀಗಾಗಿ ಅವನು ಇತರ ಸಹಪಾಠಿಗಳಿಗಿಂತ ನಾಲ್ಕು ವರ್ಷ ದೊಡ್ಡವನು. ಮೂರನೇ ಕ್ಲಾಸಿಗೆ ಬರುವ ಹೊತ್ತಿಗೆ ಅವನ ದಾಂಧಲೆಗಳ ಬಗ್ಗೆ ಊರಿನಲ್ಲಿ ದಂತಕತೆಗಳು ಸೃಷ್ಟಿಯಾಗಿಬಿಟ್ಟಿದ್ದವು. ಅವನೇ ನಮ್ಮೆಲ್ಲರ ಲೀಡರ್. ಅವನನ್ನು ನಾರಾಯಣಪ್ಪ ಮೇಷ್ಟ್ರು ಬೈದದ್ದಕ್ಕೆ ಆದ ಪರಿಣಾಮವನ್ನು ವಾಚಕ ಮಹನೀಯರೇ, ಈಗಾಗಲೇ ನೀವು ಕುತೂಹಲಾಶ್ಚರ್ಯಂಗಳಿಂದ ಕೇಳಿ ಕರ್ಣಾನಂದಕರರಾಗಿರುವಿರಿ. ಈಗ ಅವನ ಇನ್ನೊಂದು ಪ್ರಸಂಗವನ್ನು ದಯವಿಟ್ಟು ಶಾಂತಚಿತ್ತರಾಗಿ ಕೇಳುವಂಥವರಾಗಿ. ನಿಮ್ಮೆಲ್ಲರಿಗೆ ನಮೋ ನಮಃ. ಗುರುವರೇಣ್ಯ ನಾರಾಯಣಪ್ಪ ಮೇಷ್ಟ್ರು ವರ್ಗಾವಣೆಯಾದ ನಂತರ ನಮ್ಮ ಶಾಲೆಗೆ ಸೀತಾರಾಮಯ್ಯ ಎಂಬ ಮೇಷ್ಟ್ರೊಬ್ಬರು ಟ್ರಾನ್ಸ್‌ಫರ್ ಆಗಿ ಬಂದರು. ಅವರು ತುಂಬ ಅಚ್ಚುಕಟ್ಟು ಹಾಗೂ ಕಟ್ಟುನಿಟ್ಟು. ಕಚ್ಚೆ ಪಂಚೆ, ಕ್ಲೋಸ್ ಕಾಲರ್ ಕೋಟು ಧರಿಸಿ ರೇಷ್ಮೆ ಜರಿಯ ಪೇಟ ತಲೆಯ ಮೇಲಿರಿಸಿ ಸ್ಕೂಲಿಗೆ ಬರುವರು. ಇವರು ಮಧ್ಯಾಹ್ನದ ವಿರಾಮದ ವೇಳೆ ಬುತ್ತಿ ಊಟ ಮಾಡಿ ಮೇಲ್ಕಂಡ ವೇಷದಲ್ಲಿಯೇ ಶಾಲೆಯ ಆಟದ ಬಯಲಿನ ಅಂಚಿನ ಬೇಲಿಯ ಬಳಿ 'ಒಂದ'ನಾರ್ಪಣೆಗೆಂದು ಕುಕ್ಕುರುಗಾಲಿನಲ್ಲಿ ಕುಳಿತುಕೊಳ್ಳುವರು. ಇದನ್ನು ಉಲಿಯನು ಗಮನಿಸಿದ್ದನು. ನಮ್ಮೂರಿನಲ್ಲಿ ಬೇಲಿಯಂಚುಗಳಲ್ಲಿ 'ಮುಗುಡದಾಂಬರೆ' ಎಂಬ ಜಾತಿಯ ಮುಳ್ಳಿನ ಗಿಡದ ತಳಿಯೊಂದು ಬೆಳೆಯುತ್ತದೆ. ಕಡ್ಡಿಯಿಂದಲೋ ಕೈಯಿಂದಲೋ ಇದರ ಎಲೆಗಳು ಮುಟ್ಟಿದರೆ ಮಡಿಚಿಕೊಂಡುಬಿಡುವುದರಿಂದ ಇದಕ್ಕೆ 'ಮುಟ್ಟಿದರೆ ಮುನಿಯ' ಎಂಬ ಹೆಸರೂ ಉಂಟು. ಅದರ ಮುಳ್ಳುಗಳು ತುಂಬ ಕಿರಿದಾಗಿದ್ದರೂ ತಾಕಿದಾಗ ಮಾತ್ರ ತುಂಬ ಉರಿಯಾಗಿ ಬಹಳ ಕಾಲದವರೆಗೆ ತಾಕಿದ ಜಾಗದಲ್ಲಿ ನೋವಿನ ಫ್ಲೇವರ್ ಉಳಿದಿರುತ್ತದೆ. ಇದರಲ್ಲಿ 'ಕೆಂಜಗ' ಎಂಬ ಜಾತಿಯ ತೀವ್ರವಾಗಿ ಕಚ್ಚುವ ಕೆಂಪಿರುವೆಗಳು ಉಂಡುಂಡೆಯಾಗಿ ಮನೆ ಮಾಡಿಕೊಂಡಿರುತ್ತವೆ. ಒಂದು ದಿನ ಯಾರೂ ಇಲ್ಲದಿದ್ದಾಗ ಸೀತಾರಾಮಯ್ಯನವರು ಕೋಟು ರುಮಾಲುಗಳೊಂದಿಗೆ 'ಒಂದನಾರ್ಪಣೆ' ಮಾಡುತ್ತಿದ್ದಾರೆ. ಅರ್ಪಣೆಯು ಪರಾಕಾಷ್ಠೆಯ ಸ್ಥಿತಿಯನ್ನು ತಲುಪಿದೆ. ಉಲಿಯನು ಸದ್ದಿಲ್ಲದೆ ಹಿಂದಿನಿಂದ ಬಂದು ಕುಕ್ಕುರು ತುದಿಗಾಲಿನ ಪೋಸಿನಲ್ಲಿ ಕುಳಿತಿದ್ದ ಸೀತಾರಾಮಯ್ಯನವರ ಹಿಂಬದಿಯ ಎರಡೂ ದಿಬ್ಬಗಳಿಗೆ ಕೈಹಾಕಿ ಸಿಂಪಲ್ಲಾಗಿ ಟಾಂಗು ಕೊಟ್ಟುಬಿಟ್ಟು ಕ್ಷಣಾರ್ಧದಲ್ಲಿ ಮಂಗಮಾಯವಾಗಿಬಿಟ್ಟನು. ಸೀತಾರಾಮಯ್ಯನವರಿಗೆ ಏನಾಯಿತೆಂಬುದೇ ತಿಳಿಯಲಿಲ್ಲ. ಗಾಬರಿಯಾಗಿ ಅವರು ಆಯತಪ್ಪಿ ಬಿದ್ದುಬಿಟ್ಟರು. ರುಮಾಲು ಎಲ್ಲಿಯೋ ಉರುಳಿತು.

ಕೆ. ಎಸ್. ಮಧುಸೂದನ



'ಕೆಂಜಗ' ಬೇರೆ ಅವರನ್ನು ಮುತ್ತಿಕೊಂಡಿತು. ಅವರ ಹಾಹಾಕಾರಕ್ಕೆ ಜನಜಂಗುಳಿ ಸೇರಿ ಪರಿಸ್ಥಿತಿಯ ಗಾಂಭೀರ್ಯ ಅರಿತ ಉಲಿಯನು ಊರಿನಿಂದಲೇ ಪರಾರಿಯಾಗಿಬಿಟ್ಟನು. ಉಲಿಯನನ್ನು ದಂಡಿಸುವುದಿರಲಿ, ಅವನು ಊರಿಗೆ ಹಿಂದಿರುಗಿಬಿಟ್ಟರೆ ಸಾಕೆಂದು ಸೀತಾರಾಮಯ್ಯನವರು ದೇವರಿಗೆ ಪ್ರಾರ್ಥಿಸಿಕೊಂಡರು.

ತುಮಕೂರಿನ ಬಸ್ ಸ್ಟ್ಯಾಂಡ್‌ನಲ್ಲಿ ಹದಿನೈದು ದಿನಗಳ ನಂತರ ಉಲಿಯನನ್ನು ಕಂಡ ಯಾರೋ ನಮ್ಮೂರ ಕಡೆಯವರು ಜೊತೆಯಲ್ಲಿ ಕರೆದುಕೊಂಡು ಬಂದು ಅವನ ಮನೆಗೆ ಒಪ್ಪಿಸಿ ಹೋದರು. ಸೀತಾರಾಮಯ್ಯನವರು ನಿರಾಳವಾಗಿ ನಿಟ್ಟುಸಿರು ಬಿಟ್ಟರು. ಇವು ಉಲಿಯನ ದಾಂಧಲೆಗಳಿಗೆ ಕೇವಲ ಎರಡು ಉದಾಹರಣೆಗಳು ಮಾತ್ರ.

ಉಲಿಯನ ಲೀಡರ್‌ಶಿಪ್ಪಿನಲ್ಲಿ ನಡೆದ ಇನ್ನೊಂದು ಪ್ರಸಂಗವನ್ನು ಹೇಳಿಬಿಟ್ಟು ಮೂರಕ್ಕೆ ಮುಕ್ತಾಯ ಮಾಡಿ ಮೂಲ ವೃತ್ತಾಂತವಾದ ಸಿಂಪಲ್ ಹಾಗೂ ಅವನ ಪುತ್ರರತ್ನದ ಕಡೆ ಗಮನ ಕೊಡೋಣ.

ಒಂದಾನೊಂದು ದಿನ ನಮ್ಮೂರ ಸ್ಕೂಲಿನಲ್ಲಿ ಊಟಕ್ಕೆ ಬಿಟ್ಟಾಗ ಊರ ಮುಂದೆ 'ಅಮ್ಮಣ್ಣಿ ಓಟೆಲ್ ಉರುಫ್ ವೀರಶೈವ ಕಾಪಿ ಕ್ಲಬ್ಬು' ಇದೆ. ಇದರ ಮುಂದೆ ಒಂದು ವಿಚಿತ್ರ ಪ್ರಾಣಿ ನಿಂತದ್ದನ್ನು ನೋಡಿದೆವು. ಆ ಪ್ರಾಣಿಯೇ 'ಆಟೋವೃಕ್ಷ'. ಆಗ್ಗೆ ಆಟೋ ಹೊಸದಾಗಿ ಬಂದಿದ್ದ ಕಾಲ. ನಮ್ಮೂರಿನ ಪಕ್ಕದೂರಿನ ಒಬ್ಬ ಡ್ರೈವರ್ ಆಟೋವನ್ನು ಬೆಂಗಳೂರಿನಿಂದ ತನ್ನ ಊರಿಗೆ ಓಡಿಸಿಕೊಂಡು ಹೋಗುವಾಗ ನಡುವೆ ನಮ್ಮೂರಿನಲ್ಲಿ ಕಾಪಿ ಕುಡಿಯಲೆಂದು ಅಮ್ಮಣ್ಣಿ ಓಟೆಲಿನ ಮುಂದೆ ನಿಲ್ಲಿಸಿ ಓಟೆಲಿನ ಒಳಗೆ ಊಟ ಮುಗಿಸಿ ಈಚೆ ಬಂದು ನೋಡುತ್ತಾನೆ, 'ಆಟೋವೃಕ್ಷ' ಮಂಗಮಾಯ! ಯಾರನ್ನು ಕೇಳಿದರೂ ಯಾರೂ ಇಲ್ಲವೆಂದು ಹೇಳಿದರು. ಎರಡೂ ದಿಕ್ಕಿನ ರಸ್ತೆಗಳಿಂದ ಬಂದ ವಾಹನಗಳ ಚಾಲಕರನ್ನು ವಿಚಾರಿಸಿದನು. ಯಾರೂ ಆಟೋ ಸುಳಿವನ್ನೂ ಕಂಡಿರಲಿಲ್ಲ. ನಮ್ಮೂರಿಂದ ಕವಲೊಡೆದಿದ್ದ ಎಲ್ಲ ದೊಡ್ಡ ಚಿಕ್ಕಪುಟ್ಟ ರಸ್ತೆಗಳಲ್ಲೆಲ್ಲ ಹುಡುಕಿಸಿದರು. ಆಟೋ ನಾಪತ್ತೆ. ಡ್ರೈವರ್ ಅಳಲು ಆರಂಭಿಸಿದನು. ಆ ಆಟೋ ಯಾರೋ ಬೇರೆ ಓನರನದು. ಸಂಜೆ ಆರರವರೆಗೂ ಹುಡುಕಿಸುವುದೆಂದೂ, ಸಿಗದಿದ್ದರೆ ಸಮೀಪದ ಪಟ್ಟಣದ ಪೊಲೀಸು ಠಾಣೆಯಲ್ಲಿ ದೂರು ಕೊಡುವುದೆಂದೂ ಊರ ಹಿರಿಯರು ನಿಶ್ಚಯಿಸಿದರು. ಊಟದ ವಿರಾಮದ ಬೆಲ್ಲಿನ ನಂತರ ಎಲ್ಲ ಹುಡುಗರೂ ಸ್ಕೂಲಿಗೆ ಹೋಗಿ ಸಂಜೆ ಹಿಂದಿರುಗಿದೆವು. ಸಂಜೆ ಐದರ ಹೊತ್ತಿಗೆ ಹಾಲಿನ ಸಂಜೀವಪ್ಪನು, ಪಕ್ಕದ ಹೊಲದಲ್ಲಿ ಬಹಿರ್ದೆಶೆಗೆ ಹೋಗಿ ಶುಚಿ ಮಾಡಿಕೊಳ್ಳಲು ಸೀನಪ್ಪನ ಕುಂಟೆಯಲ್ಲಿ ಎಡಗೈ ಅದ್ದಿದನು. ಯಾವುದೋ ಸ್ವಿಚ್ಚಿಗೆ ಕೈತಾಗಿ ಕ್ಲುಯ್ ಎಂದು ಹಾರನ್ ಸೌಂಡು ಕೇಳಿಸಿಬಿಟ್ಟಿತು. ಹಾಗೂ ಆ ಜಾಗದಲ್ಲಿ ನೀರ್ಗುಳ್ಳೆಗಳು ಎದ್ದವು. ಜನ ಘೇರಾಯಿಸಿದರು. ಡ್ರೈವರನೂ ಓಡಿಬಂದನು. ಅಮ್ಮಣ್ಣಿ ಓಟಲಿನಿಂದ ಕೇವಲ ನೂರು ಗಜ ದೂರದ ತಿರುವಿನಲ್ಲೇ ಸೀನಪ್ಪನ ಕುಂಟೆ ಇದ್ದದ್ದು. ಎಲ್ಲರೂ ಸೇರಿ ಕುಂಟೆಯೊಳಗಿಂದ ಒಂದು ಪದಾರ್ಥವನ್ನು ಮೇಲೆತ್ತುತ್ತಾರೆ! ನಾಪತ್ತೆಯಾಗಿದ್ದ ಆಟೋವೃಕ್ಷ! ಅದುವರೆಗೂ ಗುಂಪಿನಲ್ಲಿ ಅಲ್ಲಲ್ಲಿ ಸೇರಿಕೊಂಡಿದ್ದ ಸ್ಕೂಲು ಹುಡುಗರಾದ ನಾವುಗಳು ಒಬ್ಬೊಬ್ಬರೇ ಅಲ್ಲಿಂದ ಕಳಚಿಕೊಂಡುಬಿಟ್ಟೆವು. ಏಕೆಂದರೆ ಬಿಸಿಲಿನಲ್ಲಿ ಮಧ್ಯಾಹ್ನ ರಸ್ತೆಯಲ್ಲಿ ಯಾರೂ ಇಲ್ಲದಿದ್ದ ಸಮಯ ನೋಡಿಕೊಂಡು 'ಆಟೋವೃಕ್ಷ'ವನ್ನು ಕುಂಟೆಯಲ್ಲಿ ತಳ್ಳಿಬಿಟ್ಟಿದ್ದೆವು. ಡ್ರೈವರನ ಮುಖಾರವಿಂದ ಅರಳಿಬಿಟ್ಟಿತು. ಹೀಗೆ ನಮ್ಮೂರಿನ ಎಕ್ಕುಟ್ಟಿಹೋಗಿದ್ದ ಸ್ಕೂಲಿನ ಚೋರಗುರುಗಳ ಬಳುವಳಿಯೇ ಚಂಡಾಲ ಶಿಷ್ಯರಾಗಿದ್ದ ನಾವುಗಳು. ವಾಚಕ ಮಹಾಜನಂಗಳೇ, ನಿಮ್ಮೆಲ್ಲರ ಕುತೂಹಲಗಳಿಗೆ ಕೇಂದ್ರವಾಗಿರುವಂಥವರು ಸಿಂಪಲ್ ಶಂಕರಪ್ಪ ಹಾಗೂ ಅವನ ಪುತ್ರರತ್ನವಾದ ಈ ಅಧ್ಯಾಯದ ನಾಯಕ ಮಣಿ ಮುನಿಸ್ವಾಮಿ ಎಂಬುದರ ಅರಿವು ಈ ಪಾಮರ ಲೇಖಕನಿಗಿದೆ. ನಿಮ್ಮಂತಹವರ ಅವಜ್ಞೆಗೆ ಪಾತ್ರನಾಗಲೂ ನನಗೆ ಇನಿತೂ ಇಚ್ಛೆಯಿಲ್ಲ. ಆದ್ದರಿಂದ ಈಗಿಂದೀಗಲೇ ಆ ಈರ್ವರನ್ನು ಕುರಿತ ಇನ್ನಿತರ ಸಂಗತಿಗಳನ್ನು ವಿವರಿಸುವೆನು. ಮೇಲೆ ಹೇಳಿದ ಉಲಿಯಾದಿ ಆಟೋವೃಕ್ಷಗಳ ಕಾರಣದಿಂದಲೇ 'ಸಿಂಪಲ್' ಮೊದಮೊದಲು ಮೇಷ್ಟ್ರುಗಳನ್ನು ಬಯ್ಯುತ್ತಿದ್ದುದು. ಶಂಕರಪ್ಪನು ಏನೇ ಮಾತನಾಡಲಿ ಎಲ್ಲಕ್ಕೂ ಸಿಂಪಲ್ ಎಂಬ ಅಡ್ಜೆಕ್ಟಿವ್ ಸೇರಿಸಿಬಿಡುತ್ತಿದ್ದನು. ಉದಾರಣೆಗೆ, ''ನನ್ನ ಮಗ ಲಕ್ಷ್ಮೀನಾರಾಯಣನು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಸಿಂಪಲ್ಲಾಗಿ ಫೇಲ್ ಆಗಿಬಿಟ್ಟನು''. ಅವನ ಮಗ ರಂಗನ ಮದುವೆ ಜಬರುದಸ್ತಾಗಿ ನಡೆದಿತ್ತು. ಅದಕ್ಕೆ ''ನನ್ನ ದೊಡ್ಡ ಮಗ ರಂಗನ ಮದುವೆಯನ್ನು ಸಿಂಪಲ್ಲಾಗಿ ಮಾಡಿಬಿಟ್ಟೆ'' ಎಂದಿದ್ದನು. ''ನನ್ನ ತಂದೆ ಸಿಂಪಲ್ಲಾಗಿ ಸತ್ತುಹೋದರು'', ''ಸಿಂಪಲ್ಲಾಗಿ ಒಂದಿಷ್ಟು ನಸ್ಯ ಕೊಡ್ರಿ ಸ್ವಾಮಿ''. ಎಟ್ಸೆಟ್ರಾ. ಇದರಿಂದಾಗಿ ನಾವು ಮುನಿಸ್ವಾಮಿಯ ತಂದೆಗೆ ಸಿಂಪಲ್ ಶಂಕರಪ್ಪನೆಂದು ನಾಮಧೇಯ ನೀಡಿದ್ದೆವು. ಅವನಿಗೆ ಈ ಹೆಸರು ಹೇಗೆ ಶಾಶ್ವತವಾಗಿ ಅಂಟಿಕೊಂಡು ಬಿಟ್ಟಿತ್ತೆಂದರೆ ಬರೀ ಶಂಕರಪ್ಪನೆಂದರೆ ಸದರಿ ಶಂಕರಪ್ಪನು ಕೂಡ ಸುಮ್ಮನಿರುತ್ತಿದ್ದು ಸಿಂಪಲ್ ಶಂಕರಪ್ಪ ಎಂದಾಗ ಮಾತ್ರ ಪ್ರತಿಕ್ರಿಯಿಸುತ್ತಿದ್ದನು. ಈ ರೂಪವು ಸ್ಯಾಂಪಲ್ ಶಂಕರಪ್ಪನೆಂದೂ ಶ್ಯಾಂಪೂ ಶಂಕರಪ್ಪನೆಂದೂ ರೂಪಾಂತರಗಳನ್ನೂ ಪಡೆದುಕೊಂಡಿದ್ದಿತು. ನಾಯಕಮಣಿ ಮುನಿಸ್ವಾಮಿಯು ಎಸ್.ಎಸ್.ಎಲ್.ಸಿ. ಪರೀಕ್ಷೆ ಪ್ಯಾಸಾದದ್ದು ಒಂದು ಅನನ್ಯ ಪ್ರಸಂಗ. ಸಿಂಪಲ್ ಈಗಾಗಲೇ ಹೇಳಿದಂತೆ ಮುನಿಸ್ವಾಮಿಯ ಅಣ್ಣ ಲಕ್ಷ್ಮೀನಾರಾಯಣನು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ 'ಸಿಂಪಲ್ಲಾಗಿ ಫೇಲಾಗಿ' ಮನೆ ಮಂದಿಗೆ ಮೇಲ್ಪಂಕ್ತಿ ಹಾಕಿಕೊಟ್ಟಿದ್ದನು. ಮುನಿಸ್ವಾಮಿಯು ನಮ್ಮ ಹಳ್ಳಿಯ ಕೆಲವು ಹುಡುಗರೊಂದಿಗೆ ಸಮೀಪದ ಪೇಟೆಯ ಹೈಸ್ಕೂಲಿಗೆ ಹೋಗುತ್ತಿದ್ದನು. ಆ ಸ್ಕೂಲಿಗೆ ನಮ್ಮ ಬಂಧುಗಳೊಬ್ಬರು ಹೆಚ್.ಎಮ್. ಆಗಿದ್ದು ಒಳ್ಳೆಯ ಮೇಷ್ಟ್ರೆಂದು ಹೆಸರುವಾಸಿಯಾಗಿದ್ದರು.

ಒಮ್ಮೆ ತಂದೆಯವರಿಗೆ ಪೇಟೆಯಲ್ಲಿ ಹೆಚ್.ಎಮ್. ಆದ ಮೂರ್ತಿಯವರು ಸಿಕ್ಕಿ ''ಗಿರಿ, ನಾನು ಎಂತೆಂತಹ ದಡ್ಡರೂ ಪಾಸಾಗುವಂತೆ ಪಾಠ ಹೇಳಿದ್ದೇನೆ ಕಣಯ್ಯ. ಒಂದು ಕರಿ ಗುಂಡು ಕಲ್ಲೂ ಸಹ ಎಸ್.ಎಸ್.ಎಲ್.ಸಿ. ಪಾಸಾಗುವಂತೆ ಪಾಠ ಹೇಳಬಲ್ಲೆ. ಆದರೆ ನಿಮ್ಮೂರಿನ ಹುಡುಗ ಮುನಿಸ್ವಾಮಿ ಇದ್ದಾನಲ್ಲ, ಅವನು ಮಾತ್ರ ಈ ಜನ್ಮದಲ್ಲಿ ಪಾಸಾಗುವುದಿಲ್ಲ ಕಣಯ್ಯ, ಇದು ಗ್ಯಾರಂಟಿ, ಬರೆದಿಟ್ಟುಕೋ'' ಎಂದು ಕೈಮುಗಿದುಬಿಟ್ಟರು. ನಮ್ಮ ತಂದೆಯವರಿಗೆ ಅವಮಾನವಾಗಿ ಬಿಟ್ಟಿತು. ಏಕೆಂದರೆ ಮುನಿಸ್ವಾಮಿ ನಮ್ಮೂರಿನ ಹುಡುಗ. ಮೇಲಾಗಿ ಊರಿನ ಮರ್ಯಾದೆಯ ಪ್ರಶ್ನೆ. ಅವಮಾನಗೊಂಡ ತಂದೆಯವರು ''ಮೂರ್ತಿಗಳೇ, ಮುನಿಸ್ವಾಮಿಗೆ ನಾನು ಪಾಠ ಹೇಳಿ, ಟ್ಯೂಷನ್ನಲ್ಲ, ಅವನು ಎಸ್.ಎಸ್.ಎಲ್.ಸಿ. ಪಾಸಾದ ನಂತರವೇ ನನ್ನ ನಿಮ್ಮ ಭೇಟಿ, ನಮಸ್ಕಾರ!'' ಎಂದು ಅವಾಕ್ಕಾಗಿ ನೋಡುತ್ತಿದ್ದ ಮೂರ್ತಿಯವರಿಂದ ಬೀಳ್ಕೊಂಡದ್ದೇ ಕೆಲಸ.

ಊರಿನಲ್ಲಿ ಬಸ್ಸಿಳಿದು ಸೀದಾ ಸಿಂಪಲ್ ಶಂಕರಪ್ಪನ ಮನೆಗೆ ಹೋದರು. ಹೋದವರೇ ''ಸಿಂಪಲ್, ಮುನಿಸ್ವಾಮಿ ಇನ್ನು ಎಸ್.ಎಸ್.ಎಲ್.ಸಿ. ಪರೀಕ್ಷೆ ಮುಗಿಯುವವರೆಗೆ ನನ್ನ ಮನೆಯಲ್ಲಿರಬೇಕು. ಅವನು ಬಂದ ತಕ್ಷಣ ಕಳಿಸು'' ಎಂದು ತಮಗೂ ಹೆಚ್.ಎಮ್.ಗೂ ನಡೆದ ಸಂವಾದ ತಿಳಿಸಿದರು. ಸಿಂಪಲ್‌ಗೆ ಸಂತೋಷವೇ ಆಯಿತು. ಮಾರನೆಯ ದಿನದಿಂದ ಮುನಿಸ್ವಾಮಿ ನಮ್ಮ ಮನೆಯಲ್ಲೇ ಠಿಕಾಣಿ. ತಂದೆಯವರು ಹೊಲಗದ್ದೆಗೆ ಹೋಗುವಾಗ, ಬೆಂಗಳೂರಿಗೆ ಹೋಗುವಾಗ, ಮದುವೆ ಮುಂಜಿಗಳಿಗೆ ಹೋಗುವಾಗ, ಕೊನೆಗೆ ಹೊರಗಡೆ ಬಹಿರ್ದೆಶೆಗೆ ಹೋಗುವಾಗ ಕೂಡ ಮುನಿಸ್ವಾಮಿ ಅವರ ಜೊತೆಯಲ್ಲೇ ಇರುತ್ತಿದ್ದನು. ಇವರ ಗುರು-ಶಿಷ್ಯತ್ವ ಊರಿನಲ್ಲೆಲ್ಲಾ ಸುದ್ದಿಯಾಯಿತು. ಹೊಲ ಗದ್ದೆ, ತೋಟ ಕಾಡುಗಳಲ್ಲಿ ಸಸ್ಯಶಾಸ್ತ್ರವನ್ನೂ, ಕಡ್ಡಿ ದಾರಗಳ ಮುಖೇನ ಜ್ಯಾಮಿಟ್ರಿಯನ್ನೂ ಹೀಗೆ ತಮ್ಮದೇ ವಿಧಾನಶಾಸ್ತ್ರದಲ್ಲಿ ಮುನಿಸ್ವಾಮಿಗೆ ಪಾಠ ಹೇಳುವರು. ಇವರ ಪಾಠ ಕ್ರಮ ಮುನಿಸ್ವಾಮಿಯನ್ನು ಹೇಗೆ ನಾಟಿಬಿಟ್ಟಿತೆಂದರೆ ಪರೀಕ್ಷೆ ಪಾಸಾಗುವುದಿರಲಿ ತಾನು ಮುಂದೆ ಅಧ್ಯಾಪಕನಾಗಿಬಿಡಲೇಬೇಕೆಂದು ನಿರ್ಧರಿಸಿಬಿಟ್ಟನು. ಅಂತೂ ಇಂತೂ ಹಾಗೋ ಹೀಗೋ ಒಟ್ಟಿನಲ್ಲಿ ಮುಂದಿನ ಎಸ್.ಎಸ್.ಎಲ್.ಸಿ.ಯಲ್ಲಿ ಮುನಿಸ್ವಾಮಿ ಮೊದಲನೇ ದರ್ಜೆಯಲ್ಲಿ ಪ್ಯಾಸಾಗಿಬಿಟ್ಟು ನಮ್ಮೂರಿನ ಮರ್ಯಾದೆ ಮುಗಿಲು ಮುಟ್ಟಿಬಿಟ್ಟು ನಮ್ಮ ತಂದೆಯವರು ಆನಂದತುಂದಿಲರಾದರು. ನಂತರ ತಂದೆಯವರು ಸಿಹಿಪೊಟ್ಟಣ ಹಾಗೂ ಮಲ್ಲಿಗೆ ಹಾರ

## ನಾಸ್ತಿಕರು

ಸಕಲವನ್ನೂ ಕರುಣಿಸುವಾತನಿಗೇ
ಹುಲು ಮಾನವ ನಾನೇನು
ಕೊಡಬಲ್ಲೆನೆಂಬ ಕಟು
ಸತ್ಯವರಿಯದೆ ಕಾಣಿಕೆ
ನೀಡಿ ದಾನಿ ತಾನೆಂದು
ದೇಗುಲದ ಸುತ್ತಾ ಹೆಸರು
ಹಾಕಿಸಿಕೊಂಡು ಪ್ರಚಾರ
ಗಿಟ್ಟಿಸುವ ಬಹುಮಂದಿ

**ಎಸ್. ಶ್ರೀನಿವಾಸ್**
ಪ್ರಥಮ ದರ್ಜೆ ಸಹಾಯಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ,
ವಿ. ಸಿ. ಫಾರಂ, ಮಂಡ್ಯ - ೫೭೧ ೧೦೫

ಗಳನ್ನು ತೆಗೆದುಕೊಂಡು ಮುನಿಸ್ವಾಮಿಯೊಂದಿಗೆ ಪೇಟೆಗೆ ಹೋಗಿ ಹೆಚ್. ಎಮ್. ಮೂರ್ತಿಯವರನ್ನು ಕಂಡು ಅರ್ಪಿಸಿ ''ಮೂರ್ತಿಗಳೇ, ಮುನಿಸ್ವಾಮಿ ಎಸ್.ಎಸ್.ಎಲ್.ಸಿ. ಪ್ಯಾಸಾಗಿದ್ದಾನೆ, ಅವನನ್ನು ಹರಸಿರಿ. ನಾನು ಆ ದಿನ ನಿಮ್ಮೆದುರು ತಪ್ಪಾಗಿ ನಡೆದುಕೊಂಡಿದ್ದರೆ ಕ್ಷಮಿಸಿ. ಈ ಮುನಿಸ್ವಾಮಿಯ ಏಳಿಗೆ ಹಾಗೂ ನಮ್ಮೂರಿನ ಮರ್ಯಾದೆ, ಇವೆರಡೇ ನನ್ನ ಮನಸಿನಲ್ಲಿದ್ದದ್ದು'' ಎಂದು ಹೇಳಿ ''ಮುನಿಸ್ವಾಮಿ, ಹೆಚ್. ಎಮ್. ಅವರಿಗೆ ನಮಸ್ಕರಿಸಿ ಅವರ ಆಶೀರ್ವಾದ ಪಡೆದುಕೋ'' ಎಂದು ಹೇಳಿ ಅವನಿಂದ ಹೆಚ್.ಎಮ್.ಗೆ ಮಲ್ಲಿಗೆ ಹಾರ ಹಾಕಿಸಿದರು. ಮೂರ್ತಿಯವರು ಮುಗುಳ್ನಗುತ್ತಾ ಅವಾಕ್ಕಾಗಿ ನಿಂತಿದ್ದರು. ಮುನಿಸ್ವಾಮಿ ಎಸ್.ಎಸ್.ಎಲ್.ಸಿ. ಪ್ಯಾಸ್ ಆದದ್ದು ಹೀಗೆ.

ಈ ಅಧ್ಯಾಯದ ನಾಯಕಮಣಿ ಮುನಿಸ್ವಾಮಿಯು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ಪಾಸಾದ ನಂತರ ನಮ್ಮೂರಿಗೆ ನಾಯಕಮಣಿಯಾಗಿಬಿಟ್ಟನು. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ನಮ್ಮೂರಿನ ನಾಯಕಮಣಿಯಾದ್ದರಿಂದಲೇ ಅವನು ಈ ಅಧ್ಯಾಯದ ನಾಯಕಮಣಿಯಾಗಿರುವುದು. ಮುನಿಸ್ವಾಮಿ ಪ್ಯಾಸಾದ್ದರಿಂದ ಸಿಂಪಲ್‌ಗೇನೋ ಸಂತೋಷವಾಯಿತು. ಆದರೆ ಮುನಿಸ್ವಾಮಿಯು ನಮ್ಮೂರ ಇಸ್ಕೂಲಿನಲ್ಲೇ ಮೇಷ್ಟ್ರಾಗಬೇಕೆಂದಿದ್ದುದರಿಂದ ಅದಕ್ಕೆ ಬೇಕಾಗಿದ್ದ ಟಿ.ಸಿ.ಹೆಚ್. ಮಾಡಿಕೊಳ್ಳಲು ಬೆಂಗಳೂರಿನ ಟ್ರೇನಿಂಗ್ ಕಾಲೇಜೊಂದಕ್ಕೆ ಸೇರಬೇಕೆಂದು ಪಟ್ಟುಹಿಡಿದನು. ನಮ್ಮೂರಿನಲ್ಲಿ ಕಾಲೇಜಿಗೆ ಕಳಿಸಬೇಕೆಂದರೆ ಅಷ್ಟು ಸುಲಭವಲ್ಲ. ಫೀಜಿನ ವಿಷಯಕ್ಕಾಗಿ ಅಲ್ಲ, ಬಣ್ಣ ಬಣ್ಣದ ನಾಲ್ಕೈದು ಸೆಟ್ಟು ಹೊಸಾ ಬಟ್ಟೆ ಹೊಲಿಸಬೇಕು. ಇದು ಮೊದಲೇ ಖರೀದಿಸಬೇಕು. ಏಕೆಂದರೆ ಟೈಲರ್ ಬಚ್ಚಿಗನು ಸತಾಯಿಸಿ ಗೋಳು ಹೊಯ್ದುಕೊಂಡು ಒಂದೆರಡು ತಿಂಗಳ ನಂತರವೇ ಬಟ್ಟೆ ಕೊಡುವುದು. ನಂತರ ಓದುವವನ ಹೆಸರಿನಲ್ಲಿ ಒಂದು ಕರೆಯುವ ಹಸುವನ್ನೋ ಎಮ್ಮೆಯನ್ನೋ ಬಿಡಬೇಕು. ಸದರಿ ಈಗ ಮುನಿಸ್ವಾಮಿ ಟಿ.ಸಿ.ಹೆಚ್. ಕಾಲೇಜಿಗೆ ಸೇರಿದರೆ ಅವನ ಹೆಸರಿನಲ್ಲಿ ಒಂದು ಕರೆಯುವ ಹಸುವನ್ನು 'ಸಿಂಪಲ್' ಬಿಡುತ್ತಾನೆ. ಆ ಹಸು ಕರೆಯುವ ಹಾಲು, ಅದರಿಂದಾದ ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ, ಗಿಣ್ಣು ಎಲ್ಲಾ ಮುನಿಸ್ವಾಮಿಗೇನೆ. ಇತರರು ಮುಟ್ಟುವಂತಿಲ್ಲ ಅದರ ಹಾಲು ಹೈನಿನ ವ್ಯಾಪಾರದಿಂದ ಬಂದ ದುಡ್ಡನ್ನು ಮುನಿಸ್ವಾಮಿಯ ಹೆಸರಿನಲ್ಲಿಡಬೇಕು. ಆ ಹಸು ಹಾಲು ಕರೆಯುವುದನ್ನು ನಿಲ್ಲಿಸಿ ಅದು ಗೊಡ್ಡುದನವಾದರೆ ಅದನ್ನು ಮಾರಿ, ಬಂದ ಹಣವೂ ಮುನಿಸ್ವಾಮಿಯದೇ. ಅದರ ಕರುವಾದ ಪಡ್ಡೆಯೂ ಅವನದೇ. ಅಂತೂ ಸಿಂಪಲ್ ಏನೋ ಇಕ್ಕಟ್ಟುಪಟ್ಟುಕೊಂಡು ಮಗನಿಗೆ ಮೂರ್‍ನಾಲ್ಕು ಚೌಕಳಿ ಷರಟುಗಳನ್ನೂ ಗೆರೆಗೆರೆ ಪ್ಯಾಂಟುಗಳನ್ನೂ ಹೊಲೆಯಲು ಟೈಲರ್ ಬಚ್ಚಿಗನ ಬಳಿ ಹಾಕಿದನು. ಅವನಾದರೂ ಮುನಿಸ್ವಾಮಿಯ ಅಳತೆ ತೆಗೆದುಕೊಂಡು ಬೆಂಗಳೂರಿಗೆ ಕಾಲೇಜಿಗೆ ಸೇರಲು ಹೋಗುವ ಹಿಂದಿನ ದಿನವೇ ಕೊಟ್ಟುಬಿಟ್ಟನು. ನಂತರ ಸಿಂಪಲ್ ಹಸುವಿನ ವ್ಯಾಪಾರದಲ್ಲಿ ಪಳಗಿದ್ದ ಸಕುನಿ ಪಾತ್ರ ವಹಿಸುವ ಚಿಕ್ಕೋನಪ್ಪನ ನೆರವಿನಿಂದ ಕರೆಕ್ಟಾದ ಸುಳಿಗಳೂ ಸರಿಸಂಖ್ಯೆಯ ಹಲ್ಲುಗಳೂ ಇರುವ ಒಳ್ಳೆಯ ಜಾತಿಯ ಫಲ ಬಿದ್ದ, ತಿಂಗಳೊಂದರಲ್ಲಿ ಕರುವನ್ನು ಈಯುವ ಹಸುವನ್ನು ಕೊಂಡುಕೊಂಡನು. ಮುಂದೆ ಮುನಿಸ್ವಾಮಿ ಮೇಷ್ಟ್ರಾದರೆ ಒಂದೇ ವರ್ಷದಲ್ಲಿ ಹೊಸ ಬಟ್ಟೆಯ, ಹಸುವಿನ, ಹಾಸ್ಟೆಲಿನ ಖರ್ಚು ಎದ್ದುಬಿಡುವುದೆಂದು ಮನಸ್ಸಿನಲ್ಲೇ ಲೆಕ್ಕಾಚಾರ ಹಾಕಿಕೊಂಡನು.



ಹೀಗೆ ಅಂತೂ ಮುನಿಸ್ವಾಮಿಯು ಬೆಂಗಳೂರಿನ ಕಾಲೇಜೊಂದರಲ್ಲಿ ಟಿ.ಸಿ.ಹೆಚ್. ಕ್ಲಾಸಿಗೆ ಅಡ್ಮಿಟ್ ಆಗಿ ಆ ಕಾಲೇಜಿಗೆ ಸೇರಿದ ಹಾಸ್ಟೆಲಿನಲ್ಲಿ ದಾಖಲಾತಿ ಪಡೆದುಕೊಂಡನು. ನನ್ನ ತಂದೆಯವರ ಪಾಠಗಳಿಂದ ಪ್ರಭಾವಿತನಾಗಿದ್ದ ಮುನಿಸ್ವಾಮಿ ಟಿ.ಸಿ.ಹೆಚ್. ತರಗತಿಯಲ್ಲಿ ಹಿಂದೆ ಬೀಳಲಿಲ್ಲ. ಸಾಕಷ್ಟು ಮುಂದೇ ಇದ್ದನು. ರಜೆ ಇದ್ದು ಊರಿಗೆ ಬಂದಾಗ ತನಗೆ ಬಿಟ್ಟ ಹಸುವಿನ ಹಾಲು ಹೈನುಗಳನ್ನು ಪೂರಾ ಅವನೇ ಪಡೆದುಕೊಳ್ಳುತ್ತಿದ್ದನು. ಹಸುವಿನ ಉತ್ಪನ್ನದಿಂದ ಉಂಟಾದ ಹಣವನ್ನೂ ಈಸಿಕೊಂಡು ಬೆಂಗಳೂರಿನಲ್ಲಿ ಹಾಸ್ಟೆಲ್ ಊಟ ಬೇಜಾರಾದಾಗ ಬಳೇಪೇಟೆಯ ಉಡುಪಿ ಕೃಷ್ಣ ಭವನದಲ್ಲೋ ಅಥವಾ ಗಾಂಧಿಬಜಾರಿನ ವಿದ್ಯಾರ್ಥಿ ಭವನದಲ್ಲೋ ವ್ಯಯಿಸುವನು. ಆಗೀಗ ಅಪರೂಪಕ್ಕೆ ಒಮ್ಮೊಮ್ಮೆ ಬೀಡಿ ಸಿಗರೇಟುಗಳನ್ನೂ ಹೊಡೆಯುತ್ತಿದ್ದನು. ಒಮ್ಮೆ ಅವನಿಗೆ ಈ ಕಾರಣಗಳಿಂದ ಹಣ ಷಾರ್ಟೇಜು ಬಂದುಬಿಟ್ಟಿತು. ಅವನಿಗೆ ಏನು ಮಾಡಬೇಕೆಂದು ತೋಚಲಿಲ್ಲ. ತನ್ನ ತಂದೆ ಶಂಕರಪ್ಪನಿಗೆ ಒಂದು ಪೋಸ್ಟ್ ಕಾರ್ಡಿನಲ್ಲಿ ಕೂಡಲೇ ಹಣ ಕಳಿಸಬೇಕೆಂದು ಬರೆದಿದ್ದನು. ಅತ್ಯಂತ ವ್ಯಾಕರಣಬದ್ಧವಾಗಿ ಮಾತನಾಡುತ್ತಿದ್ದೇನೆಂದು ಭ್ರಮಿಸಿದ್ದ, ಆದರೆ ನಿರಕ್ಷರಕುಕ್ಷಿಯಾಗಿದ್ದ ಸಿಂಪಲ್ ಕಾರ್ಡಿನಲ್ಲಿರುವ ಸಮಾಚಾರವೇನೆಂದು ತಿಳಿದುಕೊಳ್ಳಲು ಕಾರ್ಡನ್ನು ತಂದೆಯವರ ಕೈಯಲ್ಲಿರಿಸಿದನು. ಅದರ ಒಕ್ಕಣೆ ಹೀಗಿತ್ತು :

ಕ್ಷೇಮ ಶ್ರೀ ತಾರೀಕು

ಬೆಂಗ್ಳೂರ್

ತೀರ್ತರೂಪಂಗಳ ಕಾಲಿಗೆ ಮಗು ಮುನಿಸ್ವಾಮಿಯು ಅಡ್ಡಬಿದ್ದು ಮಾಡುವ ನಮಸ್ಕಾರಗಳು. ನಾನು ಹಾಸ್ಟೆಲಿನಲ್ಲಿ ಬುದ್ದಿಯಾಗಿ ಓದುತ್ತಿದ್ದೀನಿ. ಅಣ್ಣ, ರಂಗ, ಅತ್ತಿಗೆ ಹಾಗೂ ಲಕ್ಷ್ಮೀನಾರಾಯಣ ಚೆನ್ನಾಗಿರುವರೇ? ಮಾತೋಸ್ರೀಯವರು ಆರೋಗ್ಯವೆ? ನೀವು ಹೇಗಿರುವಿರಿ? ಎಂಬುದಕ್ಕೆಲ್ಲಾ ಕಾಗಜ ಬರೆಯಿರಿ. ಈಗ ನನಗೆ ಇಲ್ಲಿ ಪೂರಾ ಇಕ್ಕಟ್ಟಾಗಿಬಿಟ್ಟು ಕೊಂಚ ತೊಂದರೆಯಲ್ಲಿರುವೆನು. ಕಾಲೇಜಿನ ನೋಟೀಸು ಬೋರ್ಡಿನಲ್ಲಿ ಟೇಮ್‌ಟೇಬಲ್ ಹಾಕಿಬಿಟ್ಟಿದ್ದಾರೆ. ನನಗೆ ಏನು ಮಾಡಬೇಕೋ ತೋಚದಾಗಿದೆ. ಆದ್ದರಿಂದ ಕೂಡಲೇ ನನಗೆ ನೂರು ರೂಪಾಯಿಗಳನ್ನು ಮನಿಯಾರ್ಡರ್ ಮಾಡಬೇಕಾಗಿ ಪ್ರಾರ್ತಿಸುವೆನು. ಇದನ್ನು ಜರೂರೆಂದು ತಿಳಿಯಿರಿ. ಇಂತಿ ನಮ್ಮಸ್ಕಾರಗಳು.

ಬಾಲಕ ಮುನಿಸ್ವಾಮಿ

– ಈ ಒಕ್ಕಣೆಯನ್ನು ತಂದೆಯವರು ಮನಸ್ಸಿನಲ್ಲೇ ಓದಿಕೊಂಡು ಮೂಗಿನಿಂದ ಜಾರುತ್ತಿದ್ದ ಕನ್ನಡಕವನ್ನು ಸರಿಪಡಿಸಿಕೊಂಡು ಮುಗುಳ್ನಕ್ಕರು. ತನ್ನ ಪತ್ರವನ್ನು ಸಿಂಪಲ್ ನನ್ನ ತಂದೆಯವರಿಂದ ಓದಿಸುವುದು ಮುನಿಸ್ವಾಮಿಗೆ ತಿಳಿದಿರಲಿಲ್ಲ. ಪೋಸ್ಟ್‌ಮ್ಯಾನ್ ಇಸ್ಮಾಯಿಲ್ಲೇ ಪತ್ರ ಓದಿ ಹೇಳುವನೆಂದು ಭಾವಿಸಿಕೊಂಡಿದ್ದನು. ತಂದೆಯವರಿಗೆ ಎಷ್ಟೇ ಆಗಲಿ ಮುನಿಸ್ವಾಮಿ ಶಿಷ್ಯೋತ್ತಮನಲ್ಲವೇ? ಅಷ್ಟೇ ಅಲ್ಲ, ಹದಿಹರೆಯದ ಪಡ್ಡೆ ಹುಡುಗರ ಪಾಸಿಟಿವ್ ಚೇಷ್ಟೆಗಳನ್ನು ಸದ್ಗುರುಗಳಾದ ತಂದೆಯವರು ಉದಾರವಾಗಿಯೇ ಸ್ವೀಕರಿಸುತ್ತಿದ್ದರು. ಒಂದು ರೀತಿಯಲ್ಲಿ ತನ್ನ ತಂದೆಗೆ ಬೇಸ್ತು ಬೀಳಿಸಲು ಯತ್ನಿಸಿದ ಮುನಿಸ್ವಾಮಿಯನ್ನು ಕುರಿತು 'ಏನೇ ಆಗಲಿ ಎಸ್.ಎಸ್.ಎಲ್.ಸಿ. ಫಸ್ಟ್ ಕ್ಲಾಸಿನಲ್ಲಿ ಪಾಸು ಮಾಡಿ ನನ್ನ ಮಾನ ಉಳಿಸಿದ್ದಾನೆ. ಏನೋ ಚಿಕ್ಕದಾಗಿ ಒಂದೋ ಎರಡೋ ಸಿಗರೇಟು ಸೇದಿ ಹೋಟೆಲಲ್ಲಿ ದೋಸೆ ತಿಂದಿರಬಹುದು, ಪಾಪ ಕಷ್ಟಪಟ್ಟಿದ್ದಾನೆ' ಎಂದು ಮನಸ್ಸಿನಲ್ಲಂದುಕೊಂಡರು. ಆತಂಕದಿಂದ ನಿರೀಕ್ಷಿಸುತ್ತಿದ್ದ ಸಿಂಪಲ್‌ಗೆ ''ಸಿಂಪಲ್, ಮುನಿಸ್ವಾಮಿಗೆ ಕಾಲೇಜಿಗೆ ಸಂಬಂಧಿಸಿದಂತೆ ಒಂದು ಅರವತ್ತು ರೂಪಾಯಿ ಮನಿಯಾರ್ಡರು ಮಾಡಿಬಿಡಯ್ಯ. ಪಾಪ, ಕಾಗದದಲ್ಲಿ ಬರೆದಿದ್ದಾನೆ'' ಎಂದು ಟೈಮ್ ಟೇಬಲ್ಲಿಗೂ ಹಣಕ್ಕೂ ಸಂಬಂಧವಿಲ್ಲವೆಂಬುದು ಗೊತ್ತಿದ್ದರೂ, ಅವನನ್ನು ರಕ್ಷಿಸಲು ಈ ಮಧ್ಯಮ ಮಾರ್ಗ ಸೂಚಿಸಿದರು. ತನ್ನ ಮುದ್ದಿನ ಪಿಂಡವಾದ ಪುತ್ರರತ್ನ ನಾಯಕಮಣಿಯ ವಿದ್ಯಾಭಿವೃದ್ಧಿಗೆ ಸಿಂಪಲ್ ಸಿಂಪಲ್ಲಾಗಿ ಅಂದೇ ಅರವತ್ತು ರೂಪಾಯಿ ಮನಿಯಾರ್ಡರ್ ಮಾಡಿದನು. ಇಂತಹ ಕೆಲವು ಇಲ್ಲಸಲ್ಲದ ಸಬೂಬುಗಳನ್ನು ನೀಡಿ ಪತ್ರಗಳನ್ನು ಬರೆದು ಮುನಿಸ್ವಾಮಿ ತಂದೆ ಸಿಂಪಲ್ಲಿಂದ ಆಗಾಗ ಸಾಕಷ್ಟು ಹಣವನ್ನು ಜೇಬುಖರ್ಚಿಗೆಂದು ಅಡ್ಜಸ್ಟ್ ಮಾಡಿಬಿಟ್ಟಿದ್ದನು. ಹೀಗೆ ಅನೇಕ ಕಷ್ಟ-ಕಾರ್ಪಣ್ಯಗಳನ್ನು ಅನುಭವಿಸಿ ಮುನಿಸ್ವಾಮಿ ಟಿ.ಸಿ.ಹೆಚ್. ಪರೀಕ್ಷೆಯನ್ನೂ ಮೊದಲ ದರ್ಜೆಯಲ್ಲೇ ಪ್ಯಾಸು ಮಾಡಿ ಅಪ್ಲಿಕೇಷನ್ ಹಾಕಿಕೊಂಡಿದ್ದರಿಂದಲೇ ಅವನಿಗೆ ನಮ್ಮೂರ ಸರ್ಕಾರಿ ಶಾಲೆಗೆ ಅಪಾಯಿಂಟ್‌ಮೆಂಟ್ ಆರ್ಡರ್ ಬಂದು ಮುನಿಸ್ವಾಮಿ ಮೇಷ್ಟ್ರಾದದ್ದು. ಆದರೆ ಅವನು ತಂದೆಯವರ ಜೊತೆ ಸಿಹಿಪೊಟ್ಟಣ ಮಲ್ಲಿಗೆ ಹಾರದೊಂದಿಗೆ ಹೆಚ್. ಎಮ್. ಮೂರ್ತಿಯವರನ್ನು ಭೇಟಿಯಾಗಿ ಅವರಿಗೆ ಸಲ್ಲಿಸಿ ನಮಸ್ಕಾರ ಮಾಡಿ ಆಶೀರ್ವಾದ ಪಡೆಯುವುದನ್ನು ಮರೆಯಲಿಲ್ಲ. ಮೂರನೇ ಬಾರಿಗೆ ಹೆಚ್. ಎಮ್. ಮೂರ್ತಿಯವರು ಮುಗುಳು ನಗುತ್ತಾ ಅವಾಕ್ಕಾಗಿ ನಿಂತಿದ್ದರು.

ಕೆ. ಎಸ್. ಮಧುಸೂದನ
ನಂ. ೧೫೫ ಪ್ರ, ೩ನೇ ಮುಖ್ಯರಸ್ತೆ, ೭ನೇ ಬ್ಲಾಕ್, ೪ನೇ ಘಟ್ಟ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಎಷ್ಟು ದಿನಗಳು?




ಆಫೀಸಿಗೆ ಸ್ಕೂಟರಲ್ಲಿ ಹೊರಟಾಗ ಹೊರಗೆ ಕೂಸಪ್ಪ ಕಾಯುತ್ತಿದ್ದ. ನನ್ನನ್ನು ನಿಲ್ಲಿಸಿ, ''ಸರ್ ಇವತ್ತು ಬಸ್ ಸ್ಟ್ರೈಕಂತೆ, ಯಾವ ಬಸ್ಸೂ ಇಲ್ಲ. ನಾನು ನಿಮ್ಜತೆ ಬರ್ಲಾ'' ಎಂದವನೇ ಸ್ಕೂಟರ್ ಏರಿ ಕುಳಿತೇಬಿಟ್ಟ, ದಾರಿಯಲ್ಲಿ ವಾಹನಗಳ ಪೀಕ್ ಅವರು, ಅತ್ತಿತ್ತ ಸರಿದುಕೊಂಡು ಸ್ಕೂಟರ್ ಬಿಡುವುದೇ ಕಷ್ಟವೆಂದು ಯೋಚಿಸುತ್ತಾ ಮುಂದುವರಿವಾಗ ಆ ಗಲಾಟೆಯಲ್ಲೂ ಕೂಸಪ್ಪನ ಪ್ರಶ್ನೆ - ''ಸರ್ ವರ್ಷಕ್ಕೆ ಎಷ್ಟು ದಿನಗಳು'', ಹೆಲ್ಮೆಟ್ ಹಾಕಿರುವಾಗ ನನಗೆ ಸ್ವಲ್ಪವೇ ಕೇಳಿದರೂ ಕೋಪದಿಂದ ಉತ್ತರಿಸಿದೆ, ''ನೋಡು ಕೂಸಪ್ಪ, ಸ್ಕೂಟರಲ್ಲಿ ಹೋಗುವಾಗ ಪ್ರಶ್ನಿಸಬೇಡ, ಆಯಿತು ನಿನ್ನ ಈ ಪ್ರಶ್ನೆಗೆ ಮಾತ್ರ ಉತ್ತರಿಸುತ್ತೇನೆ. ಮುನ್ನೂರ ಅರವತ್ತೈದು, ಬೇರೆ ಏನಾದರೂ ಪ್ರಶ್ನೆಯಿದ್ದರೆ ಆಫೀಸಲ್ಲಿ ಬಂದು ಕೇಳು'' ಎಂದೆ. ಪರಿಸ್ಥಿತಿ ಅರ್ಥವಾಗಿ ಆಮೇಲೆ ಆತ ಪ್ರಶ್ನಿಸಲಿಲ್ಲ. ಆದರೆ ಆಫೀಸಿಗೆ ಹೋಗಿ ಸೈನ್ ಮಾಡಿ ಕುರ್ಚಿಯಲ್ಲಿ ಕುಳಿತು ಫೈಲುಗಳನ್ನು ಬಿಡಿಸಿದಾಗ ಅವನ ಪ್ರವೇಶ.

''ಕ್ಷಮಿಸಿ ಸರ್, ನನಗಾಗ ತಿಳಿದಿರಲಿಲ್ಲ, ಈಗ ಒಂದು ಹತ್ತು ನಿಮಿಸ ನಿಮ್ಗೆ ತೊಂದ್ರೆ ಕೊಡ್ತೇನೆ.''

''ಆಯಿತು, ಬೇಗ ಆರಂಭಿಸು, ಕೆಲ್ಸಾ ತುಂಬಾ ಬಾಕಿಯಿದೆ.''

''ಅದೇ ಸಾರ್, ವರ್ಷಕ್ಕೆ ಮುನ್ನೂರ ಅರವತ್ತೈದು ದಿನಗಳು ಎಂದು ನೀವು ಹೇಳಿದ್ದೀರಲ್ಲಾ, ಈಗ ಸರಕಾರ ಪ್ರಕಟಿಸಿದ ದಿನಗಳು ಅದಕ್ಕಿಂತಲೂ ಜಾಸ್ತಿಯಿದೆಯಲ್ಲಾ?''

ನನಗೆ ಅರ್ಥವಾಗಲಿಲ್ಲ.

''ಸರ್, ಮುಂಚೆ ಸ್ವಾತಂತ್ರ್ಯೋತ್ಸವ, ರಿಪಬ್ಲಿಕ್ ಡೇ, ಹುತಾತ್ಮರ ದಿನ, ಗಾಂಧಿ ಜಯಂತಿ, ಗಾಂಧೀ ಶೀವ ಪಾದ ಸೇವೆ ದಿನ, ನೆಹರೂ ಜನ್ಮದಿನ, ಪ್ರೇಮಿಗಳ ದಿನ, ಅಮ್ಮಂದಿರ ದಿನ, ಮಾತ್ರ ಇತ್ತು. ಆದರೆ ಈಗ ಅಪ್ಪಂದಿರ ದಿನ, ಮಕ್ಕಳ ದಿನ, ಟೀಚರ್ಸ್ ದಿನ, ಸಂಸ್ಥಾಪಕರ ದಿನ, ಬುದ್ಧ ಜಯಂತಿ, ಮಹಾವೀರ ಜಯಂತಿ, ಮದ್ಯಪಾನ ರಹಿತ ದಿನ, ತಂಬಾಕುರಹಿತ ದಿನ, ಇತ್ತೀಚೆಗೆ ಆರಂಭವಾದ ಸ್ನೇಹಿತರ ದಿನ, ಪ್ರೇಮಿಗಳ ದಿನ ಹಾಗೂ ಶೀಘ್ರವೇ ಆರಂಭವಾಗಲಿರುವ ಸಲಿಂಗರತಿ ದಿನ – ಹೀಗೆ ನೆನಪು ಮಾಡಿಕೊಂಡರೆ ನೂರಾರು ದಿನಗಳಿವೆ. ಕ್ರಿಸ್‌ಮಸ್, ಗುಡ್‌ಫ್ರೈಡೇ, ವಿಜಯದಶಮಿ, ಬಲಿಪಾಡ್ಯಮಿ, ದೀಪಾವಳಿ, ಧನಲಕ್ಷ್ಮಿ ಪೂಜೆ, ರಂಜಾನ್, ಬಕ್ರೀದ್, ಈದ್, ಎಲ್ಲಾ ರಜೆಯಿದೆ. ಭಾರತದಷ್ಟು ರಜಾದಿನಗಳು ಬೇರೆ ಯಾವ ರಾಷ್ಟ್ರಗಳಲ್ಲೂ ಇಲ್ಲವೆಂದು ವಿಮರ್ಶಕರು ತಿಳಿಸಿದ್ದಾರೆ. ಇನ್ನು ಗಾಂಧೀ ಸಮಾಧಿಗೆ ಹೂಹಾರ ಗೌರವ, ನೆಹರು, ಇಂದಿರಾ ಗಾಂಧಿ, ರಾಜೀವ್ ಗಾಂಧಿ, ಅಂಬೇಡ್ಕರ್ ಜಯಂತಿ, ಹೂಗುಚ್ಛ ಸಮರ್ಪಣೆ, ಲಾಲ್ ಬಹದ್ದೂರ್ ಶಾಸ್ತ್ರಿ, ದೇವರಾಜ್ ಅರಸ್, ವೀರೇಂದ್ರ ಪಾಟೀಲ್ ಇತ್ಯಾದಿ ಎಷ್ಟೋ ರಾಜಕಾರಣಿಗಳ ಜಯಂತಿ ಹಾಗೂ ಪುಣ್ಯ ದಿನಗಳಂದು (ಸೆಕ್ರೆಟರಿಗಳು ನೆನಪಿಸಿ) ಮಂತ್ರಿಗಳು ರಾಜಕೀಯ ಪುಢಾರಿಗಳು ಹಾರಾರ್ಪಣೆ ಮಾಡ್ತಾರೆ. ಸಂದರ್ಶನ ಕೊಟ್ಟು ಟಿ.ವಿ., ಸುದ್ದಿ ಮಾಧ್ಯಮಗಳ ಸಹಕಾರ ಸಹಿತ ಹಾರಾರ್ಪಣೆ ಮಾಡುವ ದಿನಗಳೂ ಇವೆ. ಇಲೆಕ್ಷನ್ ದಿನಗಳು ವರ್ಷಕ್ಕೆ ನಾಲ್ಕು ಬಾರಿಯಾದರೂ ಬರಬಹುದು. ಇವಕ್ಕೆಲ್ಲ ರಜೆಯಿದೆ. ಆದರೆ ನಮ್ಮ ಹಬ್ಬಗಳಾದ ನಾಗರ ಪಂಚಮಿ, ಕೃಷ್ಣಾಷ್ಟಮಿ, ಸುಬ್ರಹ್ಮಣ್ಯ ಷಷ್ಠಿ, ಆಟಿ ಹುಣ್ಣಿಮೆ, ಅನಂತನ ವ್ರತ, ಲಕ್ಷದೀಪ ಹಾಗೂ ಇನ್ನಿತರ ಅನೇಕ ಹಬ್ಬಗಳಿವೆ. ಹೆಣ್ಣುಮಕ್ಕಳಿಗೆ ಆಷಾಢ ಹುಣ್ಣಿಮೆ, ಮಂಗಳ ಗೌರಿ ವ್ರತ, ವರಮಹಾಲಕ್ಷ್ಮಿ ವ್ರತ, ವಟ ಸಾವಿತ್ರಿ ವ್ರತ, ಲಕ್ಷ್ಮಿ ಶೋಭಾನೆ, ವೈಭವ ಲಕ್ಷ್ಮಿ ಪೂಜೆ, ಸಂತೋಷ ಲಕ್ಷ್ಮಿ ಪೂಜೆ, ಗೌರಿ ತೃತೀಯಾ ಈ ರೀತಿ...''

''ಹಾಂ... ಹಾಂ... ಸ್ವಲ್ಪ ತಡಿ, ಕೂಸಪ್ಪ ನೀನು ರಾಜಧಾನಿ ಎಕ್ಸ್‌ಪ್ರೆಸ್ಸಿನ ಹಾಗೆ ಎಲ್ಲೂ ನಿಲ್ಲದೆ ಸಾಗ್ತಾ ಇದಿಯಲ್ಲಾ ನಮ್ಮ ದಕ್ಷಿಣ ಕನ್ನಡದ ಎಲ್ಲಾ ಹಬ್ಬ ಹರಿ ದಿನಗಳು, ಹೆಣ್ಣುಮಕ್ಕಳ ಹಬ್ಬ – ಇದೆಲ್ಲಾ ನಿನಗೆ ಹೇಗೆ ಗೊತ್ತಾಯ್ತು?''

''ಗೊತ್ತು ಸರ್, ನಾವು ನಮ್ಮ ಸ್ನೇಹಿತರು ಬ್ರ್ಯಾಂಡಿ ಅಂಗಡಿಯಲ್ಲಿ ಕುಳಿತು ಮಾತಾಡೋಕೆ ಬೇರೇನು ಇದೆ ಹೇಳಿ? ಕೇವಲ ರಾಜಕೀಯ, ಊರಿನ ಆಗುಹೋಗುಗಳು, ಸರಕಾರದ ಕರ್ಮಕಾಂಡಗಳು, ಮೆಟ್ರೋ ಕುಸಿತ, ಕರುಣಾನಿಧಿಗೆ ವಿರೋಧಿಗಳ ಧಿಕ್ಕಾರ, ಜತೆಗೆ ನಮ್ಮ ಈಗಿನ ಪರಿಸ್ಥಿತಿಗಳು, ಹೀಗಿರುವಾಗ ಹಬ್ಬ ಹರಿದಿನಗಳು ಗೊತ್ತಾಗೋದಿಲ್ವೆ? ಬಿಡಿ ಸರ್, ನಾನು ಈಗ ಹೇಳ್ತಾ ಇರೋದು ನಮ್ಮ ಭಾರತದ ಈ ಲೆಕ್ಕ ಮಾಡಲಾಗದಷ್ಟು ದಿನಗಳ ವಿಚಾರ. ಇನ್ನು ಮಾರಿ ಹಬ್ಬ, ಕಾಳೀ ಹಬ್ಬ, ಕೋಳಿ ಜೂಜು, ಕುದುರೆ ಸೀಕು, ಕ್ಷಮಿಸಿ ಕುದುರೆ ರೇಸು, ಕ್ರಿಕೆಟ್ ಆಟಗಾರರ ಮಾರಾಟ, ಒಂದೇ ಎರಡೇ ಎಷ್ಟು ವಿಚಾರಗಳಿವೆ ನಮ್ಮ ಕುಡಿಯೋ ಮೀಟಿಂಗ್‌ನಲ್ಲಿ. ಆದರೆ ಬೇಸರದ ಸಂಗತಿಯೆಂದರೆ ಬಾಟ್ಲಿ ಮುಗಿಸಿದಾಗ ವೈಟರ್ ಬಿಲ್ಲು ತಂದಿಡ್ತಾನೆ. ಹೊರಬರುವಾಗ ಮಾತನಾಡಿದ ಎಲ್ಲಾ ವಿಚಾರಗಳೂ ಮರೆತುಹೋಗ್ತಾವೆ. ಈ ವರ್ಷದ ದಿನಗಳು ಮಾತ್ರ ಏನೋ ನಿನ್ನೆಯಿಂದ ನೆನಪಿತ್ತು.

''ಸರ್, ಅಪ್ಪಂದಿರ ದಿನ, ಅಮ್ಮಂದಿರ ದಿನ, ಮಕ್ಕಳ ದಿನ, ಟೀಚರ್ಸ್ ಡೇ, ಲಾಂಟೀನು ಅಲ್ಲ ವ್ಯಾಲಂಟೀನು ದಿನ, ಸ್ನೇಹಿತರ ದಿನ ಹೀಗೆಲ್ಲಾ ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇವೆ. ನಾನು ಲೆಕ್ಕ ಮಾಡಿಟ್ಟ ಪ್ರಕಾರ ಈಗ ಮುನ್ನೂರ ನಲವತ್ತೈದು ದಿನ ಆಗಿದೆ. ಅವನ್ನೆಲ್ಲಾ ಲಿಸ್ಟ್ ಮಾಡಿಟ್ಟಿದ್ದೇನೆ. ಓದಿ ಹೇಳ್ಲಾ?''

''ಬೇಡ ಬೇಡ, ಮುನ್ನೂರ ಅರವತ್ತಾರು ದಿನವಾದಾಗ ಹೇಳಿದರೆ ಸಾಕು. ಆಗ ನಾವು ಸರಕಾರವನ್ನು ಕೇಳೋಣ, ಅದು ಯಾವ ತಾರೀಕು ಎಂದು.''

''ಆಯ್ತು ಸರ್, ಅಪ್ಪಂದಿರ, ಅಮ್ಮಂದಿರ, ಮಕ್ಕಳ ದಿನಗಳಂತೆ, ಭಿಕ್ಷುಕರ ದಿನ, ಚಿಕ್ಕಪ್ಪನ ದಿನ, ದೊಡ್ಡಪ್ಪನ ದಿನ, ಸೋದರಮಾವನ ದಿನ, ಸೋದರತ್ತೆಯ ದಿನ, ಅಜ್ಜ-ಅಜ್ಜಿಯಂದಿರ ದಿನಾಂತ್ಲೂ ಆಚರಿಸ್ಲಿ, ಮುನ್ನೂರ ಅರವತ್ತೈದು ದಿನಗಳಾಗಲು ಇನ್ನು ಹೆಚ್ಚು ಸಮಯ ಬೇಡ. ಆಗ ನಾವೆಲ್ಲಾ ಸೇರಿ ವರ್ಷಕ್ಕೆ ಕನಿಷ್ಠ ನಾನ್ನೂರು ದಿನಗಳಾದರೂ ಬೇಕು ಎಂದು ಪ್ರತಿಭಟನೆ ಮಾಡೋಣ ಅಲ್ವೇ ಸರ್, ಬರ್ತೀನಿ. ಹತ್ತು ನಿಮಿಷದೊಳಗೆ ಮುಗಿಸಿದ್ದೀನಿ. ತೊಂದರೆ ಕೊಟ್ಟದ್ದಕ್ಕೆ ಕ್ಷಮಿಸಿ ಸರ್.''

ಕೂಸಪ್ಪ ಹತ್ತು ನಿಮಿಷದೊಳಗೆ ಹೇಳಿ ಹೊರಟುಹೋದ. ಆದರೆ ಅವನು ಹೇಳಿದ್ದರಲ್ಲಿ ಗಂಭೀರ ಅರ್ಥವಿದೆಯಲ್ಲಾ?


**ರಾಘವೇಂದ್ರ ಉಡುಪಿ**

**(ಕೆ. ರಾಘವೇಂದ್ರ ಭಟ್)**

೮-೩-೫೧, ಶ್ಯಾಮಲಾ ಸದನ, ಕೆ. ಎ. ಮಾರ್ಗ, ಕುಂಜಿಬೆಟ್ಟು, ಉಡುಪಿ - ೫೭೬ ೧೦೨

# ಯಾರಿಗೂ ಬೇಡವಾದ ವ್ಯಕ್ತಿ

ಬಿ. ವಿ. ಸುಬ್ಬರಾವ್

ಮಹಾನಗರದ ಒಂದು ಪ್ರಮುಖ ರಸ್ತೆ ಕಿಕ್ಕಿರಿದ ಜನಸಂದಣಿ. ಸೈಕಲ್, ಮೊಪೆಡ್, ಆಟೋ, ಕಾರು, ಬಸ್, ಲಾರಿಗಳ ನಿರಂತರ ಓಡಾಟ! ರಸ್ತೆಯ ಎರಡೂ ಬದಿಯಲ್ಲಿ ಬಹು ಅಂತಸ್ತಿನ ದೊಡ್ಡ ದೊಡ್ಡ ವ್ಯಾಪಾರಿ ಮಳಿಗೆಗಳು, ಷೋರೂಮುಗಳು, ಅಂಗಡಿಗಳು, ಹೋಟೆಲ್, ಸಿನಿಮಾ ಮಂದಿರಗಳು, ಬಾರ್‌ಗಳು; ಅವುಗಳ ತುಂಬ ಲೆಕ್ಕವಿಲ್ಲದಷ್ಟು ಮಂದಿ ಗ್ರಾಹಕರು. ಎಲ್ಲಿ ನೋಡಿದರೂ ಗಿಜಿಗಿಜಿ, ನೂಕು ನುಗ್ಗಲು. ಇಷ್ಟು ಜನರ ಮಧ್ಯೆ ನಡೆದು ಹೋಗುವುದೇ ಕಷ್ಟ. ಇನ್ನು ರಸ್ತೆಯನ್ನು ದಾಟಿ, ಈ ಕಡೆಯಿಂದ ಆ ಕಡೆಗೆ ಹೋಗುವುದು ಮತ್ತೂ ದುಸ್ತರದ ಕೆಲಸ, ಬಹಳ ಅಪಾಯಕಾರಿ ಕೂಡ.

ಈ ರಸ್ತೆಯ ಒಂದು ಬದಿಯಲ್ಲಿ ವಯಸ್ಸಾದ ಒಬ್ಬ ವ್ಯಕ್ತಿ ನಿಂತಿದ್ದಾನೆ. ಪೂರ್ತಿ ಕುರುಡನಲ್ಲದಿದ್ದರೂ ಆತನಿಗೆ ಕಣ್ಣು ಸರಿಯಾಗಿ ಕಾಣಿಸುತ್ತಿಲ್ಲ, ಶರೀರ ಜೀರ್ಣವಾಗಿದೆ, ಮುಖ ಸುಕ್ಕುಗಟ್ಟಿದೆ. ಕೈಕಾಲುಗಳಲ್ಲಿ ತ್ರಾಣವಿಲ್ಲ. ಹೇಗೋ ಕಾಲೆಳೆದುಕೊಂಡು ಹೋಗುವಷ್ಟು ಶಕ್ತಿ ಇದೆ.

ಆ ವ್ಯಕ್ತಿ ನಿಂತಿದ್ದುದು ಒಂದು ಭಾರಿ ಸಿಲ್ಕ್ ಸೀರೆಗಳ ಅಂಗಡಿಯ ಮುಂದೆ. ಭಿಕ್ಷುಕನಂತೆ ಕಾಣುತ್ತಿರುವ ಇಂತಹ ಬಡಕಲು ವ್ಯಕ್ತಿ ತನ್ನ ಅಂಗಡಿಯ ಮುಂದೆ ನಿಂತಿರುವುದು ಆ ಅಂಗಡಿಯ ಮಾಲೀಕನಿಗೆ ಸರಿ ಕಾಣಲಿಲ್ಲ. ಎದ್ದು



ಬಂದು ಆ ವ್ಯಕ್ತಿಗೆ ಜೋರು ಧ್ವನಿಯಲ್ಲಿ ಹೇಳಿದ, ''ಯಾಕೆ ಇಲ್ಲಿ ನಿಂತಿದ್ದೀಯಪ್ಪ, ನಿನ್ನಿಂದ ನನ್ನ ಅಂಗಡಿಗೆ ಬರುವವರಿಗೆಲ್ಲಾ ತೊಂದರೆ ಆಗುತ್ತಿದೆ, ನನಗೂ ಇಷ್ಟವಿಲ್ಲ ಸ್ವಲ್ಪ ಮುಂದೆ ಆ ಕಡೆ ಹೋಗಿ ನಿಂತಿಕೊ.'' ಆ ವ್ಯಕ್ತಿ, ಪಾಪ, ಮರುಮಾತಾಡದೆ ನಾಲ್ಕಾರು ಹೆಜ್ಜೆ ಮುಂದೆ ಹೋಗಿ ಮತ್ತೊಂದು ಕಡೆ ನಿಂತುಕೊಂಡ. ಅದೂ ಬೇರೊಂದು ತರಹದ ಅಂಗಡಿಯಾಗಿತ್ತು. ಆ ಅಂಗಡಿಯ ಮಾಲೀಕನು ಸರ್ರನೆ ಹೊರಗೆ ಬಂದು ಆಕ್ರೋಶಿಸಿದ – ''ಛೆ! ನಿನ್ನಂಥವನು ಇಂತಹ ಅಂಗಡಿಯ ಹತ್ತಿರ ಬರಲೇಬಾರದು. ಬಂದರೋ ನನ್ನ ವ್ಯಾಪಾರವೆಲ್ಲಾ ಹಾಳು, ನಡಿ ಮುಂದೆ.''

ವ್ಯಕ್ತಿ ಮುಂದೆ ನಡೆದ. ಯಾವ ಅಂಗಡಿ ಮುಂದೆ ನಿಂತರೂ ಆ ಅಂಗಡಿ ಮಾಲೀಕರಿಂದ ಛೀಮಾರಿ, ''ನನ್ನ ಅಂಗಡಿ ಮುಂದೆ ನಿಲ್ಲಬೇಡ, ಹೋಗು ಮುಂದೆ'' ಎಂದು ಎಲ್ಲರೂ ಅವನನ್ನು ಓಡಿಸುವವರೇ! ಹೀಗೆ ಹತ್ತಾರು ಕಡೆ ನಿಂತು, ಎಲ್ಲರಿಂದಲೂ ಧಿಕ್ಕರಿಸಿಕೊಂಡು, ಎಲ್ಲಿ ನಿಂತರೂ ಅವರಿವರ ಆಕ್ರೋಶಕ್ಕೆ ಗುರಿಯಾಗಿ ಮುಂದೇನು ಮಾಡಬೇಕೆಂದು ತೋಚದೆ ನಿಧಾನವಾಗಿ ಮೆಲ್ಲಗೆ ಕಾಲು ಹಾಕುತ್ತಾ ಮುನ್ನಡೆದ. ಸ್ವಲ್ಪ ದೂರದಲ್ಲಿ ರಸ್ತೆಯ ಫುಟ್‌ಪಾತಿನ ಮಗ್ಗುಲಲ್ಲಿ ಒಂದು ಕಲ್ಲುಬೆಂಚು ಕಾಣಿಸಿತು. ಆ ವ್ಯಕ್ತಿ ಅದರ ಮೇಲೆ ಕುಳಿತ. ಆ ಕಲ್ಲುಬೆಂಚಿನ ಪಕ್ಕದಲ್ಲೇ ತನ್ನ ಸರಕುಗಳನ್ನು ಮಾರುತ್ತಿದ್ದ ಫುಟ್‌ಪಾತ್ ವ್ಯಾಪಾರಿಗೆ ಕೋಪ ಬಂತು. ''ನೀನ್ಯಾಕೊ ಇಲ್ಲಿಗೆ ಬಂದೆ? ನೀನು ಬಂದರೆ ನನ್ನ ವ್ಯಾಪಾರವೆಲ್ಲಾ ಹಾಳು, ಇನ್ನೆಲ್ಲಾದರೂ ಕೂತ್ಕೊ, ಇಲ್ಲಿಂದ ತೊಲಗು, ಹ್ಞೂ...'' ಎಂದು ಸಿಡುಕಿನಿಂದ ಅಬ್ಬರಿಸಿದ. ಈ ವ್ಯಕ್ತಿಯದು ನಾಯಿಪಾಡು ಪಾಪ, ಎಲ್ಲಿ ನಿಂತರೂ ಆಕ್ಷೇಪಣೆ, ಎಲ್ಲಿ ಕೂತರೂ ನಿಂದನೆ, ಪ್ರೀತಿ ವಿಶ್ವಾಸದಿಂದ ಅವನನ್ನು ಯಾರೂ ಹತ್ತಿರ ಬರಗೊಡಲಿಲ್ಲ, ಹೋಗು, ಹೋಗು, ದೂರ ಹೋಗು, ಇಲ್ಲಿರಬೇಡ, ಎಂದು ಎಲ್ಲರೂ ಅವನನ್ನು ನೂಕುವವರೇ; ಯಾರಿಗೂ ಬೇಕಿಲ್ಲದವನಾದ ಆ ವ್ಯಕ್ತಿ.

ಈ ರಸ್ತೆಯ ಎರಡೂ ಬದಿಯಲ್ಲಿ ಭಾರಿ ಭಾರಿ ಷೋರೂಮುಗಳು; ಬೃಹತ್ ಕಂಪನಿಗಳ ಅಂಗಡಿಗಳು, ಝಗ ಝಗ ಪ್ರಕಾಶಿಸುತ್ತಿದ್ದ ನೂರಾರು ವಿದ್ಯುತ್ ಬಲ್ಬುಗಳ ಪ್ರಕಾಶದಲ್ಲಿ, ಸಿಂಗರಿಸಿಕೊಂಡು ಗ್ರಾಹಕರನ್ನು ಆಕರ್ಷಿಸುವಂತಹ ಬೆಡಗಿಯರು. ಅಂತಹ ವಾತಾವರಣದಲ್ಲಿ ಕೊಳಕು ಬಟ್ಟೆ ಧರಿಸಿ, ಭಿಕ್ಷುಕನಂತೆ ಕಾಣುತ್ತಿದ್ದ ಆ ವ್ಯಕ್ತಿಯು ಎಲ್ಲರಿಗೂ ಅಪಶಕುನ ರೂಪವಾಗಿ ಅನಾದರನಾದ. ತಮ್ಮ ವಹಿವಾಟು ಸಮರ್ಪಕವಾಗಿ ನಡೆಯಬೇಕಾದರೆ, ವ್ಯಾಪಾರದಲ್ಲಿ ಆದಷ್ಟೂ ಲಾಭ ಗಳಿಸಬೇಕಾದರೆ, ಈ ತರಹದ ವ್ಯಕ್ತಿ ಹತ್ತಿರ ಬರಲೇಬಾರದು ಎಂಬುದೇ ಎಲ್ಲಾ ವ್ಯಾಪಾರಿಗಳ ಧೋರಣೆ.

ಆ ವ್ಯಕ್ತಿಗೂ ನಿಂತುನಿಂತು ಬೇಸರವಾಯಿತು. ಹತ್ತಾರು ಅಂಗಡಿ ಮಾಲೀಕರಿಂದ ಬೈಗುಳ ತಿಂದು, ಮುಂದೆ ಹೋಗು ಎನಿಸಿಕೊಂಡು, ಅಲ್ಲೇ ಯಾಕೆ ನಿಂತಿರಬೇಕು ಎಂದು ಯೋಚಿಸಿದ. ಆದರೆ ಎಲ್ಲಿಗೆ ಹೋಗಬೇಕೆಂದು ಗೊತ್ತಾಗಲಿಲ್ಲ, ರಸ್ತೆಯನ್ನು ದಾಟಿ, ಬೇರೆ ಯಾವುದಾದರೂ ಜಾಗಕ್ಕೆ ಹೋದರೆ ವಾಸಿ ಎನಿಸಿತು. ಆದರೆ ಕಣ್ಣು ಸರಿಯಾಗಿ ಕಾಣಿಸದ ಆ ವ್ಯಕ್ತಿಯು ಆ ಗಜಿಬಿಜಿ ರಸ್ತೆಯನ್ನು ದಾಟುವುದಾದರೂ ಹೇಗೆ? ಯೋಚಿಸುತ್ತಾ ರಸ್ತೆಯ ತುದಿಯಲ್ಲೇ ನಿಂತ. ಅದೇ ರಸ್ತೆಯಲ್ಲಿ ಒಬ್ಬ ಶ್ರೀಮಂತ ವ್ಯಕ್ತಿ ನಿಂತು, ಬಹಳ ಹೊತ್ತಿನಿಂದ ಈ ಬಡಕಲು ವ್ಯಕ್ತಿಯನ್ನೇ ನೋಡುತ್ತಿದ್ದ. ಅವನ ಹೀನಾಯ ಸ್ಥಿತಿಯನ್ನು ನೋಡಿ ಮರುಗಿದ, ಮನಸ್ಸು ಕರಗಿತು. ಹೃದಯ ನೀರಾಯಿತು. ರಸ್ತೆಯನ್ನು ದಾಟಿ ಹೋಗಲು ಸಾಧ್ಯವಾಗದೆ ಅಲ್ಲೇ ನಿಸ್ಸಹಾಯಕನಾಗಿ ನಿಂತಿದ್ದ ಅವನಿಗೆ ಸಹಾಯ ಮಾಡಲು ಮುಂದಾಗಿ, ಅವನ ಬಳಿ ಬಂದು,

''ಏನಪ್ಪ? ಎಲ್ಲಿಗೆ ಹೋಗಬೇಕು?'' ಎಂದು ಪ್ರೀತಿಯಿಂದ ಪ್ರಶ್ನಿಸಿದರು.

''ಎಲ್ಲಿಗೆ ಹೋಗಬೇಕು ಅಂತ ನನಗೇ ಗೊತ್ತಿಲ್ಲ ಸಾರ್; ಎಲ್ಲಿ ನಿಂತರೂ, ಎಲ್ಲಿ ಕುಳಿತರೂ ಜನರ ಆಕ್ಷೇಪಣೆ, ಹೋಗು ತೊಲಗು ಎಂದು ಹೀನಾಮಾನವಾಗಿ ಮಾತಾಡ್ತಾರೆ, ನನ್ನನ್ನು ಕಂಡರೆ ಎಲ್ಲರಿಗೂ ತಾತ್ಸಾರ. ನಾನು ಯಾರಿಗೂ ಬೇಡವಾದ ಅನಾಥನಾಗಿದ್ದೇನೆ ಸಾರ್'' ಎಂದು ತನ್ನ ದುಃಖವನ್ನು ಹೇಳಿಕೊಂಡ.

ಶ್ರೀಮಂತನಿಗೆ ಕರುಣೆ ಉಕ್ಕಿ ಬಂದಿತು. ರಸ್ತೆ ದಾಟಿ ಆ ಕಡೆ ಹೋಗಲು ಅವನಿಗೆ ಸಹಾಯ ಮಾಡಲು ಮುಂದಾದರು.

''ನನ್ನ ಜೊತೆ ಬಾ, ರಸ್ತೆ ದಾಟಿಸಲು ಸಹಾಯ ಮಾಡ್ತೀನಿ'' ಎಂದರು ಶ್ರೀಮಂತರು.

''ಬಹಳ ಉಪಕಾರವಾಯಿತು ಸಾರ್'' ಎಂದು ಆ ವ್ಯಕ್ತಿಯು ಶ್ರೀಮಂತರ ಜೊತೆಗೇ ನಡೆದ. ರಸ್ತೆಯನ್ನು ಇಬ್ಬರೂ ದಾಟಿ ಮುಂದೆ ಹೋದರು. ಅಲ್ಲಿ

ಜನಸಂಚಾರ ಜಾಸ್ತಿ ಇರಲಿಲ್ಲ, ಆರಾಮವಾಗಿ ನಡೆದುಹೋಗಲು ಸಾಧ್ಯವಿತ್ತು. ಇಬ್ಬರೂ ಜೊತೆಜೊತೆಯಾಗಿಯೇ ನಡೆದುಹೋದರು. ''ನಿನ್ನ ಮನೆ ಎಲ್ಲಿದೆಯಪ್ಪ?'' ಎಂದು ಶ್ರೀಮಂತರು ಕೇಳಿದರು. ಆತನನ್ನು ಅವನ ಮನೆಯವರೆಗೂ ಕರೆದುಕೊಂಡು ಹೋಗುವ ಉದ್ದೇಶವಿತ್ತು ಶ್ರೀಮಂತರಿಗೆ.

ಬಡಕಲು ವ್ಯಕ್ತಿ ತಕ್ಷಣ ಉತ್ತರ ಹೇಳಲಿಲ್ಲ. ಮುಖ ಖಿನ್ನವಾಯಿತು, ಕಣ್ಣುಗಳಿಂದ ನೀರು ಉಕ್ಕಿಬಂತು. ಕರ್ಚೀಫಿನಿಂದ ಕಣ್ಣನ್ನು ಒರೆಸಿಕೊಂಡು ಗದ್ಗದ ಧ್ವನಿಯಲ್ಲಿ ಹೇಳಿದ. ''ಈಗೆಲ್ಲಿ ಸಾರ್ ಮನೆ ಮಠ?... ಒಂದಾನೊಂದು ಕಾಲದಲ್ಲಿ ಎಲ್ಲಾ ಇದ್ದವು, ಎಂದರೆ ನಮ್ಮ ದೇಶ ಸ್ವತಂತ್ರವಾಗುವುದಕ್ಕೆ ಮೊದಲು... ಅದೋ ನೋಡಿ, ದೂರದಲ್ಲಿ ಅಲ್ಲಿ ಕಾಣಿಸುತ್ತಿದೆಯಲ್ಲಾ, ಕೆಂಪು ಕಟ್ಟಡ, ಅಲ್ಲಿ ನಾನು ವಾಸವಾಗಿದ್ದೆ. ಅಲ್ಲಿಗೆ ಬಂದು ಹೋಗುತ್ತಿದ್ದವರು ಬಹಳ ಜನ. ಎಲ್ಲರಿಗೂ ನಾನು ಅಚ್ಚುಮೆಚ್ಚಾಗಿದ್ದೆ. ಎಲ್ಲರಿಗೂ ನಾನು ಬೇಕಾದವನಾಗಿದ್ದೆ. ಸಾರ್ವಜನಿಕರು, ಅಧಿಕಾರಿಗಳು, ಕಂಪನಿ ಮಾಲೀಕರು, ಬಡವರು, ಶ್ರೀಮಂತರು, ಹೆಂಗಸರು, ಗಂಡಸರು, ಎಲ್ಲರಿಗೂ ನಾನು ಅತ್ಯಂತ ಪ್ರಿಯನಾಗಿದ್ದೆ ಆಗ ಆದರೆ...?''

''ಆದರೆ... ಏನು?''

''ಕಾಲ ಬದಲಾಯಿಸಿಹೋಯಿತು ಸಾರ್; ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂತು. ದೇಶದ ಎಲ್ಲಾ ಜನಗಳಿಗೂ ಸಂತೋಷವಾದಂತೆ ನನಗೂ ತುಂಬ ಸಂತೋಷವಾಯಿತು. ನಾನೂ ಒಬ್ಬ ಶ್ರೀಮಂತನಾಗುತ್ತೇನೆ, ಎಂದು ಕನಸು ಕಾಣುತ್ತಿದ್ದೆ... ಆದರೆ ನಮ್ಮ ದೇಶದ ದೌರ್ಭಾಗ್ಯ ಎನ್ನಿ, ಹಣೆಬರಹ ಎನ್ನಿ. ನನ್ನ ಕನಸೆಲ್ಲಾ ನುಚ್ಚುನೂರಾಯಿತು. ಅಧಿಕಾರಿಗಳು, ಸಾರ್ವಜನಿಕರು, ವ್ಯಾಪಾರಿಗಳು, ರಾಜಕಾರಣಿಗಳು, ವಿಜ್ಞಾನಿಗಳು, ಕಾರ್ಮಿಕರು, ಶಿಕ್ಷಕರು... ಇತ್ಯಾದಿ ಎಲ್ಲರೂ ಅಧಿಕಾರ, ಅಂತಸ್ತು, ಹಣ, ಪ್ರಭಾವಗಳಿಗೆ ಮಾರುಹೋದರು. ಎಲ್ಲಕ್ಕಿಂತ ಮುಖ್ಯ ಯಾವುದೆಂದರೆ, ಹಣ ಎಂದು ನಂಬಿದರು. ಹಣಕ್ಕಾಗಿ ಏನೆಲ್ಲಾ ಮಾಡಲು ಮುಂದಾದರು. ಮಾಡಬಾರದ್ದನ್ನೆಲ್ಲಾ ಮಾಡಲು ತೊಡಗಿದರು. ಕೊಲೆ, ಸುಲಿಗೆ, ಮೋಸ, ವಂಚನೆ ಯಾವುದಕ್ಕೂ ಹೇಸದೆ ಹಣ ಶೇಖರಿಸಿದರು. ಆಸ್ತಿಪಾಸ್ತಿ ಮಾಡಿಕೊಂಡರು. ದೇಶದ ಹಿತವನ್ನು ಮರೆತರು. ತನ್ನ ಕುಲಕೋಟಿಗೆ ಕೆಲ ಕೋಟಿಗಳಾದರೂ ಬೇಡವೇ ಎಂದು ಹಣ ಗಳಿಸಿ ಗಳಿಸಿ ಕೋಟ್ಯಧೀಶ್ವರರಾದರು. ಇವೆಲ್ಲ ಸಾಧಿಸುವಾಗ ನನ್ನನ್ನು ಮರೆತರು. ನಾನು ಬೇಡವಾದೆ. ಅವರ ಆಸೆ ಆಕಾಂಕ್ಷೆಗಳಿಗೆ ನಾನು ಅಡ್ಡಿಬರುತ್ತಿದ್ದೆ ಎಂದು ನನ್ನನ್ನು ತ್ಯಜಿಸಿದರು. ಆ ಕೆಂಪು ಕಟ್ಟಡದಿಂದ ನನ್ನ ಓಡಿಸಿದರು. ಈಗ ಅಲ್ಲಿ ನನಗೆ ಸ್ಥಾನವಿಲ್ಲ. ಬೀದಿಬೀದಿ ಅಲೆಯುತ್ತಿದ್ದೀನಿ. ನಿಮ್ಮಂಥ ನಾಲ್ಕಾರು ಜನ ಇನ್ನೂ ಇದಾರೆ. ಅವರೇ ನನ್ನ ಹಿತೈಷಿಗಳು, ಅವರ ಆಶ್ರಯ ಸಂರಕ್ಷಣೆಯಲ್ಲೇ ನಾನಿನ್ನೂ ಜೀವಂತವಾಗಿದೇನೆ... ಇದೇ ಸಾರ್ ನನ್ನ ಕತೆ...''

ಆ ಬಡಕಲು ವ್ಯಕ್ತಿಯ ದೀರ್ಘ ವ್ಯಾಖ್ಯಾನದಿಂದ ಶ್ರೀಮಂತರು ಪ್ರಭಾವಿತರಾದರು. ಅವನು ಹೇಳಿದ್ದನ್ನು ಪೂರ್ಣತಃ ಒಪ್ಪಿಕೊಂಡರು. ನಮ್ಮ ದೇಶದ ಇಂದಿನ ಸ್ಥಿತಿಯನ್ನು ಬಹು ಚೆನ್ನಾಗಿ ಅರ್ಥಮಾಡಿಕೊಂಡು, ಕೆಲವೇ ಶಬ್ದಗಳಲ್ಲಿ ಅದನ್ನು ಮನಮುಟ್ಟುವಂತೆ ವರ್ಣಿಸಿದ್ದಾನೆ ಎಂದು ಹೊಗಳಿದರು.

''ಭೇಷ್ ಕಣಪ್ಪ! ನಿನ್ನ ಅನುಭವ, ತಿಳುವಳಿಕೆ, ಗ್ರಹಣಶಕ್ತಿ ಎಲ್ಲಾ ಅದ್ಭುತವಾಗಿವೆ. ನಮ್ಮ ಜನರ ಈಗಿನ ಮನೋವೃತ್ತಿಯನ್ನು ಬಹು ಚೆನ್ನಾಗಿ ವಿವರಿಸಿದೆ. ನಮ್ಮ ದೇಶವು ಪ್ರಗತಿಪಥದಿಂದ ಜಾರಿ, ಅವನತಿಯ ದಿಕ್ಕಿನಲ್ಲಿ ದೌಡಾಯಿಸುತ್ತಿದೆ, ಎಂದು ನಿನಗೆ ಅರ್ಥವಾಗಿರುವ ಹಾಗೆ ನಮ್ಮ ರಾಜಕಾರಣಿಗಳಿಗೆ ಮತ್ತಿತರಿಗೆ ತಿಳಿಯದೇ ಇರುವುದು ಬಹಳ ವಿಷಾದಕರ. ಆದರೆ ನಿನ್ನಂಥವರು ಅಲ್ಪಸಂಖ್ಯಾತರು. ನಿನ್ನ ಅಭಿಪ್ರಾಯಕ್ಕೆ ಈಗ ಯಾವ ಬೆಲೆಯೂ ಇಲ್ಲ.''

''ಹೌದು ಸಾರ್, ನನ್ನದೂ ಅದೇ ಅಭಿಮತ. ಇದು ತಪ್ಪು, ಹೀಗೆ ಮಾಡಬೇಡಿ ಎಂದು ಅವರಿಗೆ ಬುದ್ಧಿ ಹೇಳಹೋದರೆ, ನನ್ನನ್ನು ನೋಡಿ, ಇವನೊಬ್ಬ ಹುಚ್ಚ ಎಂದು ಗೇಲಿ ಮಾಡುತ್ತಾರೆ. ಅದಕ್ಕಿಂತ ತೆಪ್ಪಗಿರುವುದೇ ಲೇಸು ಎನ್ನಿಸಿದೆ.''

ಶ್ರೀಮಂತರು ಮಾತಾಡಲಿಲ್ಲ, ಮೌನವಾಗಿಯೇ ಹೆಜ್ಜೆಹಾಕುತ್ತಾ ಸಾಗುತ್ತಿದ್ದರು. ಈ ಬಡಪಾಯಿ ವ್ಯಕ್ತಿ ಹೇಳುವುದರಲ್ಲಿ ಎಷ್ಟು ಸೈಜತೆ ಇದೆ. ಅವನ ವಿಶ್ಲೇಷಣೆ ಎಷ್ಟು ಅರ್ಥಗರ್ಭಿತವಾಗಿದೆ, ಆತನ ತಿಳುವಳಿಕೆ ಎಷ್ಟು ಅಗಾಧವಾಗಿದೆ. ನೋಡುವುದಕ್ಕೆ ಬಡಕಲು ಶರೀರ, ಆದರೆ ಅಸಾಮಾನ್ಯ ಬುದ್ಧಿಶಕ್ತಿ ಎಂದು ಮನಸ್ಸಿನಲ್ಲೇ ಅವನನ್ನು ಶ್ಲಾಘಿಸುತ್ತ ಮುಂದೆ ನಡೆದರು.

ಒಂದೆರಡು ನಿಮಿಷಗಳಾದ ಮೇಲೆ ಬಡಕಲು ವ್ಯಕ್ತಿಯೇ ಮಾತಾಡಿದ.

''ಸಾರ್, ನೀವು ತಪ್ಪು ತಿಳಿದುಕೊಳ್ಳದಿದ್ದರೆ, ಒಂದು ಮಾತು ಕೇಳಬೇಕು ಅಂತಿದೀನಿ... ಕೇಳಲೇ ಸಾರ್?''

''ಕೇಳಪ್ಪ ಅದಕ್ಕೇನು.''

''ನಾನು ಕಣ್ಣಿಲ್ಲದವನು ನಿಜ, ನಿಮ್ಮನ್ನು ನೋಡಿ ಗುರುತಿಸಲಾರೆ, ಆದರೆ ನಿಮ್ಮ ಧ್ವನಿ ನನಗೆ ತುಂಬ ಪರಿಚಿತ, ಬಹಳ ವರ್ಷಗಳ ಹಿಂದೆ ಎಲ್ಲಿಯೋ ಕೇಳಿದ ಜ್ಞಾಪಕ, ...ನೀವ್ಯಾರು ಸಾರ್?'' ಶ್ರೀಮಂತರು ಒಂದು ಕ್ಷಣ ಯೋಚಿಸಿದರು. ತನ್ನ ಗುರುತು ಪರಿಚಯವನ್ನು ಈ ಬಡಕಲು ವ್ಯಕ್ತಿಗೆ ತಿಳಿಸಲೋ ಬೇಡವೋ ಎಂದು ಅನುಮಾನಿಸಿದರು. ಅವರ ಅನುಮಾನಕ್ಕೆ ಕಾರಣ, ಆ ಬಡಕಲು ವ್ಯಕ್ತಿ ಯಾರು ಎಂಬುದೇ ಗೊತ್ತಾಗಲಿಲ್ಲ.




ಅಪರಿಚಿತನಿಗೆ ಯಾಕೆ ತನ್ನ ಪ್ರವರ ಒಪ್ಪಿಸಬೇಕು, ಎಂದು ಕೆಲಕ್ಷಣ ಹಿಂದೇಟು ಹಾಕಿದರು. ಕಡೆಯಲ್ಲಿ ಅವನು ಬಡವನಾದರೇನಂತೆ ಬುದ್ಧಿವಂತನಂತೂ ಹೌದು, ಸಭ್ಯನೂ ಹೌದು, ಹೇಳಿದರೆ ನಷ್ಟವೇನಿಲ್ಲ, ಎಂದು ತೀರ್ಮಾನಿಸಿ, ಹೇಳಿದರು:

''ನೀನು ಕೆಂಪು ಕಟ್ಟಡ ತೋರಿಸಿದೆಯಲ್ಲಾ ನಾನು ಅಲ್ಲೇ ಕೆಲಸ ಮಾಡ್ತಿದ್ದೆ.''

''ಏನು ಕೆಲಸ ಮಾಡುತ್ತಿದ್ದಿರಿ ಸಾರ್.''

''ನಾನು ಜಡ್ಜ್ ಆಗಿದ್ದೆ ಕಣಪ್ಪ.''

''ಹ್ಞಾ ಸಾರ್, ಈಗ ನನಗೆ ಜ್ಞಾಪಕಕ್ಕೆ ಬಂತು. ತಮ್ಮ ಹೆಸರು ಎಲ್ಲಪ್ಪ ಗೌಡ... ಅಲ್ಲವೇ ಸಾರ್?''

''ಹೌದಪ್ಪ ನೀನು ಹೇಗೆ ಊಹಿಸಿದೆ?''

''ನೀವು ಜಡ್ಜ್ ಆಗಿದ್ದಾಗ, ನಾನು ನಿಮ್ಮ ಅಸಿಸ್ಟೆಂಟ್ ಆಗಿದ್ದೆನಲ್ಲ, ಮರೆತುಬಿಟ್ರಾ?''

''ಏನೋಪ್ಪ ಜ್ಞಾಪಕಕ್ಕೆ ಬರುತ್ತಿಲ್ಲ, ನಾನು ರಿಟೈರ್ ಆಗಿ ಇಪ್ಪತ್ತು ವರ್ಷಗಳಾಯಿತು. ಆಗಿನ ಕಾಲದಲ್ಲಿ ನನ್ನ ಬಳಿ ಯಾರ್ಯಾರೋ ಇದ್ದರು, ಏನೇನೋ ಕೆಲಸ ಮಾಡುತ್ತಿದ್ದರು. ಅದೆಲ್ಲ ಮರೆತುಹೋಗಿದೆ. ಅದಿರಲಿ ನೀನು ನಿನ್ನ ಹೆಸರನ್ನೇ ಹೇಳಲಿಲ್ಲವಲ್ಲಾ?''

''ನನ್ನ ಹೆಸರು 'ನ್ಯಾಯ''' ಎಂದಿತು ಆ ವ್ಯಕ್ತಿ.


ಬಿ. ವಿ. ಸುಬ್ಬರಾವ್

೨೨೦೩/ಎಫ್, 'ಶ್ರೀನಿಧಿ', ೨೩ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ ಹತ್ತಿರ

ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

# ಅಪ್ಪ - ನನ್ನಪ್ಪ



ಅಪ್ಪ – ನನ್ನ ಮಟ್ಟಿಗೆ ಎಲ್ಲವೂ ಹೌದಪ್ಪ, ಅದೇ, ಅವ್ವ ನನ್ನ ಪಾಲಿಗೆ ಬರಿದಾದ ಖಾಲಿ ಕೊಡ. ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ ಎನ್ನುವುದನ್ನು ನೀವು ಒಪ್ಪುವುದಾದಲ್ಲಿ ನನ್ನ ಬದುಕು ಉಪ್ಪಿಲ್ಲದ ಸಪ್ಪನೆಯ ಊಟವಾಗಬೇಕಿತ್ತು. ಆದರೆ ಅದು ಹಾಗಾಗಲಿಲ್ಲ. ಹಾಗಾಗದಂತೆ ನೋಡಿಕೊಂಡವ ನನ್ನಪ್ಪ.

ನನ್ನಪ್ಪ ಬರೀ ಅಪ್ಪನಲ್ಲ. ಆತನದು ಬಹುಮುಖಿ ಪಾತ್ರಧಾರಣ, ಅವ್ವನಾಗಿ, ಗುರುವಾಗಿ, ಮಾರ್ಗದರ್ಶಿಯಾಗಿದ್ದವ. ಹೋಲ್ಡಾಲ್ ತರಹ ಒನ್-ಇನ್ ಆಲ್, ಒಬ್ಬ ಸತ್ಯುಳ್ಳ ಗೆಳೆಯನಂತೆ, ಒಡಲಾಳದಲ್ಲಿ ಒಳಿತು ಬಯಸುತ್ತ, ಮುಖದ ಮುಂದೆ ಬಯ್ಯುತ್ತ ನಮ್ಮನ್ನು ಬೆಳೆಸಿದ. ಕಗ್ಗಲ್ಲಿನಂತೆ ಒರಟೊರಟನಾಗಿದ್ದ ಈ ಹೈದನಿಗೆ ಕಕ್ಕುಲಾತಿಯಿಂದ ಒಂದು ರೂಪ ಕೊಟ್ಟವನು. ಬಾಳು ಕಟ್ಟಿಕೊಟ್ಟವನು. ರುಜುಮಾರ್ಗದಲ್ಲಿ ನಡೆಯುವುದನ್ನು, ಸ್ವತಃ ಉದಾಹರಣೆಯಾಗಿ ಬದುಕಿ, ತೋರಿಸಿಕೊಟ್ಟವನು. ಈ ಎಲ್ಲ ಮತ್ತೂ ಇಂಥ ಅನೇಕಾನೇಕ ಸಂಗತಿಗಳಿಂದಾಗಿ ಆತ ನನ್ನ ಮನದಾಳದಲ್ಲಿ ಗಟ್ಟಿಯಾಗಿ ಕುಳಿತುಬಿಡುತ್ತಾನೆ.

ನನ್ನಪ್ಪ ನನಗೆ ಆದರ್ಶ.

''ನಿನ್ನಪ್ಪನ ಬಗ್ಗೆ ಇಲ್ಲಿ ಬರೆಯಹೊರಟರೆ, ಅದು ಆತ್ಮವೃತ್ತಾಂತವಾಗುವುದಿಲ್ಲವೆ ? ಅಪ್ಪ ಯಾರಿಗಿಲ್ಲ ಹೇಳು ? ಅವರವರ ಅಪ್ಪ ಅವರವರಿಗೆ ಇಷ್ಟಪ್ಪ, ಅಂಥದರಲ್ಲಿ ನಿಮ್ಮಪ್ಪಂದೇನಪಾ ಮಹಾ ?'' ಅಂದ್ಕೊಳ್ಳೊರೂ ಇದ್ದಾರು. ''ಹಾಗಾಗಿದ್ದು ಇದು ಪ್ರಬಂಧದ ಚೌಕಟ್ಟಿಗೆ ಎಂತು ಒಗ್ಗೀತು ಮಾರಾಯಾ ?'' ಎಂದು ತಲೆ ಕೆಡಸಿಕೊಳ್ಳುವವರೂ ಇರಬಹುದು. ಐ ಡೊಂಟ್ ಕೇರ್.

ಜೀವನಾನುಭವದ ಫಲವತ್ತಾದ ಭೂಮಿಯ ಮೇಲೆ ತೆಗೆಯುವ, ಅಕ್ಷರ ಕೃಷಿಯ ಫಸಲಿಗೆ ಸಾರ್ವಕಾಲಿಕ ಮೌಲ್ಯ ಇದ್ದೇ ಇದೆ ಎಂಬ ನಂಬಿಕೆ ನನಗಿದೆ. ಆ ಮಾತು ಬೇರೆ.

ಅದ್ಯಾಕೊ ಗೊತ್ತಿಲ್ಲ. ಬಹಳಷ್ಟು ಮಂದಿಗೆ ಅವ್ವ ಸಾಫ್ಟ್‌ವೇರ್, ಅಪ್ಪ ಹಾರ್ಡ್‌ವೇರ್‌ನಂತೆ ಭಾಸವಾಗಿರುವಂತಿದೆ. ಇದ್ದರೂ ಇದ್ದೀತು, ಯಾಕಂದ್ರೆ, ನಮ್ಮ ಅಕ್ಷರೋದ್ಯಮಿಗಳಿಗೆ (ಅಂದ್ರೆ ಕವಿ - ಸಾಹಿತಿ ಮಿತ್ರರಿಗೆ) 'ಅವ್ವ' ಕಾಡಿದಷ್ಟು, 'ಅಪ್ಪ' ಕೆಣಕಿಲ್ಲ. ಎಲ್ಲೊ ಒಂದಿಷ್ಟು ಜನ, ನಮ್ಮ ಪ್ರಬಂಧಕಾರ ಈರಪ್ಪ ಕಂಬಳಿಯಂಥವರಿಗೆ ಅಪ್ಪ, ಸಾಹಿತ್ಯದ ಸರಕಾಗುತ್ತಾನೆ, ವಸ್ತುವಾಗುತ್ತಾನೆ.

*    *    *

ಈ ಭವಲೋಕಕ್ಕೆ ಬಂದು, ಆಗಷ್ಟೆ ನಾನು ಪಿಳಿಪಿಳಿ ಕಣ್ಬಿಡುತ್ತಿದ್ದರೆ, ಅವ್ವ ಅದಾಗಲೇ ಕಣ್ಮುಚ್ಚಿ ಪರಲೋಕ ಸೇರಿಬಿಟ್ಟಿದ್ದಳು. ಆಕೆ ಹಡೆದ ಆರು ಮಕ್ಕಳಲ್ಲಿ ಮೂರು ಅಷ್ಟೊತ್ತಿಗಾಗಲೇ ಶಿವನ ಪಾದ ಸೇರಿಯಾಗಿತ್ತು. ನನಗಿಂತ ಮುಂಚೆ ಹುಟ್ಟಿದ ಅಕ್ಕ, ಅಣ್ಣನ ಸ್ಮೃತಿ ಪಟಲದಲ್ಲಿ ಅವ್ವನ ಚಿತ್ರ ಮಸುಕು ಮಸುಕಾಗಿಯಾದರೂ ಇದ್ದೀತು. ಆದರೆ, ಈ ಬಾಬ್ತಿನಲ್ಲಿ ನಾನಂತೂ ನಿರ್ಭಾಗ್ಯ.

ಫೋಟೋ ತೆಗೆಸಿಕೊಂಡರೆ, ಆಯುಷ್ಯ ಕಮ್ಮಿಯಾಗುತ್ತದೆ ಎಂಬ ಮೂಢ ನಂಬಿಕೆ ಇನ್ನೂ ಜೀವಂತವಾಗಿದ್ದ ಕಾಲದಲ್ಲಿ ನನ್ನವ್ವ ಬದುಕಿದ್ದಳು. ಅದೇ ಕಾರಣವಾಗಿ ಕ್ಯಾಮರಾದ ಮುಂದೆ ನಿಂತು ಪೋಜ್ ಕೊಡಲಿಲ್ಲ. 'ಸ್ಮೈಲ್ ಪ್ಲೀಜ್' ಅಂತಲೂ ಅನಿಸಿಕೊಳ್ಳಲಿಲ್ಲ. ಆದರೇನು, ಮೂವತ್ತಾಗುವುದಕ್ಕಿಂತ ಮುಂಚೆಯೆ ಸಂತೆ ಮುಗಿಸಿ ಹೊರಟುಬಿಟ್ಟಿದ್ದಳು.

ನೋಡಲು ಕೆಂಪು-ಕೆಂಪಗೆ ಸುಂದರಿಯಾಗಿದ್ದ ಸಪೂರದೇಹಿ ಅವ್ವಗೆ, ಅವಳ ಆಪ್ತವಲಯದಲ್ಲಿ 'ಪರಂಗಿ' (ಬ್ರಿಟಿಷರಿಗೆ ಕರೆಯುತ್ತಿದ್ದಂತೆ) ಎಂಬ ಉಪನಾಮವೂ ಇತ್ತಂತೆ. ಹಳೆಯ ಕಳ್ಳುಬಳ್ಳಿ ಸಂಬಂಧವೆಂದು, ಸೋದರಮಾವನ ಮಗಳನ್ನು ಅಪ್ಪ ಮದುವೆಯಾಗಿದ್ದ. ಆಕೆ ಸುಶೀಲೆಯೂ ಸುಗುಣೆಯೂ ಆಗಿದ್ದಳೆಂದು ಅವಳನ್ನು ಬಲ್ಲವರು ಹೇಳುತ್ತಿದ್ದದ್ದನ್ನು ಕೇಳಿದ್ದೇನೆ.

ಅಂಥ ಅವ್ವನನ್ನು ಕೊನೆಯಪಕ್ಷ ಫೋಟೋದಲ್ಲಾದರೂ ಕಂಡು ಸಮಾಧಾನಮಾಡಿಕೊಳ್ಳುವ ಭಾಗ್ಯವೂ ನನಗಿಲ್ಲ. ಈ ಕೊರಗು ಸೃಷ್ಟಿಸಿರುವ ಶೂನ್ಯ ಆಗಾಗ ಶೂಲದಂತೆ ಇರಿಯುತ್ತಿರುತ್ತಲೇ ಇರುತ್ತದೆ. ಹಡೆದವ್ವ ಒಗಟಿನ ಗಂಟಾಗಿ ಉಳಿದುಬಿಟ್ಟಿದ್ದಾಳೆ.

ಅವ್ವ ಸತ್ತಾಗ, ಅಪ್ಪನಿಗೆ ಮೂವತ್ತಾರರ ಹರೆಯ. ಹೈಸ್ಕೂಲ್ ಮಾಸ್ತರನಾಗಿದ್ದ ಅವನಿಗೆ ಮತ್ತೊಂದು ಮದುವೆಯಾಗುವಂತೆ ಗೆಳೆಯರು, ಹಡೆದವರು ದುಂಬಾಲುಬಿದ್ದರು. ''ನನ್ನ ಐಹಿಕ ಸುಖಕ್ಕಾಗಿ ಮಕ್ಕಳಿಗೆ ಮಲತಾಯಿ ತರೋದು ನನಗಿಷ್ಟವಿಲ್ಲ'' - ಅಪ್ಪನ ಒಂದೇ ಮಾತು. ಕಡೆಯ ಮಾತು. ಕೊನೆಯತನಕ ಆತ ಅದನ್ನು ಉಳಿಸಿಕೊಂಡು ಬಂದ. ಆದರೆ, ತಪ್ಪಿಯೂ ಕೂಡ, ಸತ್ತುಹೋದ ನನ್ನವ್ವನ ಬಗ್ಗೆ ಒಂದೂ ಮಾತೂ ಅಪ್ಪ ಆಡಲಿಲ್ಲ.

''ಉಪ್ಪು-ಖಾರ ತಿನ್ನುವ ಸಂಸಾರಸ್ಥನ ಈ ತ್ಯಾಗ ತುಂಬ ದೊಡ್ಡದು. ಅದು ಸಾಮಾನ್ಯರಿಗೆ ಅಸಾಧ್ಯವಾದುದು'' ಎಂದು ಗದುಗಿನ ತೋಂಟದಾರ್ಯ ಸ್ವಾಮಿಗಳು ಅಪ್ಪನ ಬಗ್ಗೆ ಅಭಿಮಾನದಿಂದ ಹೇಳಿದ ಮಾತಿದು. ಇದಕ್ಕಿಂತಲೂ ಹೆಚ್ಚಿನ ವ್ಯಾಖ್ಯೆಯ ಅಗತ್ಯವಿಲ್ಲ.

ತಿಳಿದೊ, ತಿಳಿಯದೆಯೊ, ನಾವು ಮಕ್ಕಳು ತಪ್ಪು ಮಾಡಿದಾಗ, ''ತಾಯಿ ಸತ್ತ ಮಕ್ಕಳು'' ಎಂದು ಆತ ವಿನಾಯಿತಿ ತೋರಿಸುತ್ತಿರಲಿಲ್ಲ. ''ದೊಡ್ಡ ಮನುಷ್ಯ ತನ್ನನ್ನು ತಾನು ನಿಂದಿಸಿಕೊಂಡರೆ, ಸಾಮಾನ್ಯ ಮನುಷ್ಯ ಪರರನ್ನು ನಿಂದಿಸುತ್ತಾನೆ'' ಎನ್ನುತ್ತಾನೆ ಕನ್‌ಫ್ಯೂಷಿಯಸ್. ಹಾಗೆಯೆ, ತನ್ನ ಮಕ್ಕಳ ನಿಂದಿಸುತ್ತಲೆ ಅವರನ್ನು ಬೆಳೆಸಬೇಕೆನ್ನುವ ಆತನ ವಿಚಾರದಿಂದಾಗಿ, ನಮ್ಮ ಎಂಥ ಸಾಧನೆಯೂ ಅಪ್ಪನ ಮೆಚ್ಚುಗೆ ಗಳಿಸುವಲ್ಲಿ ಸೋಲುತ್ತಿತ್ತು.

''ನೀವೇನ ಅಂಥಾ ಮಹಾ ಘನಂದಾರಿ ಕೆಲ್ಸಾ ಮಾಡೀರ್‍ಯೋ ?'' ಎಂದು ನಿರ್ದಯಿ ವಿಮರ್ಶಕನಾಗಿ ಕಟುನುಡಿಯುತ್ತಿದ್ದ. ಕುಟುಕುತ್ತಿದ್ದ. ಅದೊಂದು ನಮೂನೆಯ ನಿಂದಾಸ್ತುತಿ. ಅದೇ ಬೇರೆ ಮಕ್ಕಳ, ಅದರಲ್ಲೂ ತನ್ನ ವಿದ್ಯಾರ್ಥಿಗಳ ಚೂರುಪಾರು ಸಾಧನೆಯನ್ನು ರಾವುಗನ್ನಡಿಯಲ್ಲಿಟ್ಟು ನೋಡಿದವನಂತೆ ಹಾಡಿ ಹೊಗಳುತ್ತಿದ್ದ. ಸ್ವಪ್ರಶಂಸೆ ಯಾವ ಕಾಲಕ್ಕೂ ಆತನಿಗೆ ವರ್ಜ್ಯ. ಬೇರೊಬ್ಬರನ್ನು ಪ್ರಶಂಸಿಸುತ್ತ, ಅವರ ಬೆನ್ನು ತಟ್ಟುವದರಲ್ಲಿಯೆ ಕೃತಾರ್ಥಭಾವ ಕಾಣುತ್ತಿದ್ದ.

**ಮಲ್ಲಿಕಾರ್ಜುನ ಹುಲಗಬಾಳಿ**

ಆತ ಬರೆದ ಒಂದೆರಡು ಲೇಖನಗಳು ಆ ದಿನಗಳಲ್ಲಿ ಮುಂಬೈಯಿಂದ ಬರುತ್ತಿದ್ದ 'ಟೈಮ್ಸ್ ಆಫ್ ಇಂಡಿಯಾ'ದಲ್ಲಿ ಪ್ರಕಟವಾಗಿದ್ದವು. ಹಳ್ಳಿಯೊಂದರ ಹೈಸ್ಕೂಲ್ ಮಾಸ್ತರನಿಗೆ ಇದೇನು ಸಾಮಾನ್ಯ ಸಂಗತಿಯೇ! ಆದರೆ ಆತ ಯಾರ ಮುಂದೆಯೂ ಹೇಳಿಕೊಳ್ಳಲಿಲ್ಲ. ಆ ಪತ್ರಿಕೆಯನ್ನು ಅಪ್ಪ ಅಂಚೆ ಮೂಲಕ ತರಿಸಿಕೊಳ್ಳುತ್ತಿದ್ದ. ಬರುತ್ತಿದ್ದದ್ದೂ ಊರಿಗೆ ಒಂದೇ ಒಂದು ಪ್ರತಿ. ಹೀಗಾಗಿ ಈ ಸಂಗತಿ ಊರಲ್ಲಿ ಯಾರಿಗೂ ತಿಳಿದಿರಲಿಲ್ಲ. ಬಹಳ ದಿನಗಳ ನಂತರ, ಬೇರೊಬ್ಬರಿಂದ ವಿಷಯ ಗೊತ್ತಾದಾಗ ಊರಲ್ಲಿ ಅದು ದೊಡ್ಡ ಸುದ್ದಿಯಾಗಿತ್ತು.

ಅಪ್ಪನಿಂದ ಒಂದಾದರೂ ಪ್ರಶಂಸೆಯ ಮಾತು ಕೇಳಬೇಕೆಂಬ ನನ್ನ ಒಳತುಡಿತ ಕೊನೆಯ ವರೆಗೂ ಈಡೇರಲಿಲ್ಲ. ಪತ್ರಿಕೆಗಳಿಗೆ ಚೂರು-ಪಾರು ಗೀಚುವ ಹವ್ಯಾಸವಿದ್ದ ನನಗೆ ''ಬರೆಯೋದಕ್ಕಿಂತ ಮೊದಲು ಓದು. ಅದು ಬರೆಯುವವನಿಗೆ ಬಂಡವಾಳಾಗ್ತದ'' ಎಂದು ಎಚ್ಚರಿಸಿ, ಸಾಹಿತ್ಯ ಓದಲು ಹಚ್ಚಿದ. ಅವನಿಗೂ ಓದುವ ವಿಪರೀತ ಹುಚ್ಚು. ಅದರಲ್ಲೂ ಶರಣ ಸಾಹಿತ್ಯ, ಭಗವದ್ಗೀತೆ ಅಧ್ಯಯನ ಅಚ್ಚುಮೆಚ್ಚು.

''ಇಂವಾ ಒಟ್ಟೇ ಓದೋದೇ ಇಲ್ಲ'' ನನ್ನ ಬಗ್ಗೆ ಆತನಿಗೆ ಪರ್ಮನಂಟ್ ಅಸಮಾಧಾನ ಇತ್ತು. ಅದನ್ನೆ ತಕರಾರು ಎಂಬಂತೆ ಹಿತೈಷಿಗಳ ಮುಂದಿಡುತ್ತಿದ್ದ. ನಾನು ಹುಡುಗನಾಗಿದ್ದಾಗ ನಸುಕಿನಲ್ಲಿ ಎಬ್ಬಿಸಿ, ಓದು ಎಂದು ಹೇಳಿ, ಬೆಳಗಿನ ವಾಕ್‌ಗೆ ಹೋಗುತ್ತಿದ್ದ. ನಾನೋ ನಿದ್ರಾ ವ್ಯಸನಿ. ಸೋಂಬೇರಿ ಬೇರೆ. ಆತ ಅತ್ತ ಹೋಗುತ್ತಲೆ, ಇತ್ತ ಹಾಸಿಗೆಗೆ ಶರಣಾಗುತ್ತಿದ್ದೆ. ಅಪ್ಪ ವಾಕ್ ಮುಗಿಸಿ ಬಂದಾಗಲೂ, ಹಾಸಿಗೆಯಲ್ಲಿ ಬಿದ್ಕೊಂಡಿರುತ್ತಿದ್ದೆ. ಹುಳ್ಳುಳ್ಳಗೆ ನಕ್ಕು ಸುಮ್ಮ ನಾಗುತ್ತಿದ್ದ. ಮತ್ತೆ ಮರುದಿನವೂ, ಅದೇ ಪುನರಪಿ ಎಬ್ಬಿಸಂ, ಮತ್ತೇ ಅದೇ ಪುನರಪಿ ಮಲಗಂ.

ನನ್ನ ಸೊಟ್ಟಸೊಟ್ಟ ಕೈ-ಬರಹ ಕಂಡರಂತೂ ಕಿಡಿಕಾರುತ್ತಿದ್ದ. ಇದು ಸುಧಾರಿಸೊ ಇಸುಮು ಅಲ್ಲ ಅಂದ್ಕೊಂಡು, ಬರಹ ಶುದ್ಧೀಕರಣ ಯಜ್ಞಕ್ಕೆ ನಾನೇ ಸ್ವತಃ ಕೈಯಾರೆ ನೀರೆರೆದೆ. ಓದುವ ಚಟವೇನೊ ಬೆಳೆಯಿತು. ಆದರೆ ಕೈ-ಬರಹ ಮಾತ್ರ ಹಾಗೆಯೆ ಉಳಿದುಕೊಂಡಿದೆ. (ಅದು ನನ್ನ ಹಣೆಬರಹ, ಯಾರೇನು ಮಾಡಲಾದೀತು!)

ಮೊದಲು ನಮ್ಮದು ಅನುಕೂಲಸ್ಥ ಮನೆತನವಂತೆ. ಅಲ್ಲಿಯವರೆಗೆ ಮನೆಯಲ್ಲಿ ಕಾಲು ಮುರಿದುಕೊಂಡು ಬಿದ್ದಿದ್ದ ಲಕ್ಷ್ಮೀ ಅಪ್ಪ ಹೈಸ್ಕೂಲ್ ಕಟ್ಟೆ ಹತ್ತುವ ವೇಳೆಗೆ ನಮ್ಮ ಮನೆಯಿಂದ ಕಾಲ್ಕಿತ್ತಿದ್ದಳಂತೆ. ಇರೋ ಒಬ್ಬ ಮಗನನ್ನು ಹೇಗಾದರೂ ಓದಿಸಲೇಬೇಕು ಎಂಬುದು ನಮ್ಮ ಅಜ್ಜನ ತಹತಹಿಕೆ. ಅಪ್ಪನಿಗೆ ಓದಬೇಕೆನ್ನುವ ಹಪಾಹಪಿ. ಅಥಣಿಯಲ್ಲಿದ್ದ ದೂರದ ಸಂಬಂಧಿಕರೊಬ್ಬರ ಮನೆಯಲ್ಲಿಟ್ಟು ಓದಿಸಿದ್ದರು.

ಬಡತನದಿಂದಾಗಿ ಕೇವಲ ಮ್ಯಾಟ್ರಿಕ್ (ಇಂದಿನ ಎಸ್ಸೆಸ್ಸೆಲ್ಸಿ) ಕಲ್ತ. ಹುಟ್ಟೂರಿನಲ್ಲಿ 'ಹೈಸ್ಕೂಲ್ ಸಾಲಿ' ಮಾಸ್ತರನಾದ ನಂತರ ಸರಕಾರ ಹೊಸ ನಿಯಮ ತಂದದ್ದರಿಂದ ಎಸ್‌ಟಿಸಿ ಮಾಡಿಕೊಂಡು, ಮಾಸ್ತರಿಕೆ ನೌಕರಿ ಗಟ್ಟಿಮಾಡಿಕೊಂಡ. ಆದರೆ, ಅಷ್ಟಕ್ಕೇ ತೃಪ್ತವಾಗುವ ಜೀವವಲ್ಲ ಅದು.

ಕಲಿಯಬೇಕೆನ್ನುವ ಹಸಿತ ಕೊನೆಯ ದಿನಗಳವರೆಗೂ ಹಸಿಯಾಗಿರುವಂತೆ ನೋಡಿ ಕೊಂಡಿದ್ದ. ಬನಹಟ್ಟಿಯಲ್ಲಿ ಮಾಸ್ತರಿಕೆ ಮಾಡುತ್ತ, ವಾರಾಂತ್ಯದ ಎರಡು ದಿನ ಸೈಕಲ ಮೇಲೆ ಜಮಖಂಡಿಗೆ ಹೋಗಿಬಂದು, ಪುರಾಣಿಕ ಎಂಬ ಪಂಡಿತರಿಂದ ಸಂಸ್ಕೃತ ಕಲಿತು ವಿದ್ಯಾದಾಹ ಹಿಂಗಿಸಿಕೊಂಡ. ಅಲ್ಲಿ ಕಲಿತದ್ದನ್ನೆ ವಿದ್ಯಾರ್ಥಿಗಳಿಗೆ ಬೋಧಿಸಿ, ಅವರಿಂದ ಸೈ ಅನಿಸಿಕೊಂಡ.

ಹಟಕ್ಕೆ ಬಿದ್ದವನಂತೆ ತಾನಾಗಿಯೇ ಕಷ್ಟಗಳನ್ನು ಆಹ್ವಾನಿಸುತ್ತಿದ್ದ. ನಗುನಗುತ್ತ ಅವುಗಳೊಂದಿಗೆ ಸೆಣಸಾಡುತ್ತಿದ್ದ. ಕೊನೆಗೆ ಯಶಸ್ಸೂ ಪಡೆಯುತ್ತಿದ್ದ. ಆತ ಮೊದಮೊದಲು ಬೋಧಿಸುತ್ತಿದ್ದದ್ದು ಇಂಗ್ಲಿಷ್, ಭೂಗೋಳ ಮಾತ್ರ. ಛಲ ಹಿಡಿದು ಸಂಸ್ಕೃತದಲ್ಲಿ ಪರಿಣತಿ ಸಾಧಿಸಿದಂತೆ, ಒಂದು ಕೈ ನೋಡಿಯೆ ಬಿಡೋಣ ಅಂದ್ಕೊಂಡು, ಅಲ್ಜೀಬ್ರಾ, ಜಾಮೇಟ್ರಿಗಳತ್ತ ಕಣ್ಣು ನೆಟ್ಟ. ವಿಜ್ಞಾನದ ವಿಷಯಗಳಾದ ಅವುಗಳನ್ನೂ ಓದಿ ಅರ್ಥೈಸಿ ಕೊಂಡ, ಅರ್ಥವಾಗದ್ದನ್ನು ಸಹೋದ್ಯೋಗಿಗಳಿಂದ ಕೇಳಿ ತಿಳಿದುಕೊಂಡ. ಮುಂದೆ ಅದನ್ನೆ ವಿದ್ಯಾರ್ಥಿಗಳಿಗೆ ಬೋಧಿಸು ವಷ್ಟರ ಮಟ್ಟಿಗೆ ವಿಷಯದ ಮೇಲೆ ಪ್ರಭುತ್ವಗಳಿಸಿಕೊಂಡ. ಕಲಿಯುವ ಮತ್ತು ಕಲಿಸುವ ಪ್ರಕ್ರಿಯೆ ಉಸಿರಿರುವವರೆಗೆ ಉಳಿಸಿಕೊಂಡು ಬಂದ. ಇದು ಆತನ ವಿಶೇಷತೆ.

ಒಂದು ರೀತಿಯ ಶಿಸ್ತಿಗೆ ಬದುಕನ್ನು ಒಡ್ಡಿಕೊಂಡಿದ್ದ. ಮಾಸ್ತರಿಕೆ ಅಂಬೋದು ಆತನಿಗೆ ಪವಿತ್ರ ಕಾಯಕ. ಪಾಠ ಮಾಡಲು ವರ್ಗಕೋಣೆಯೊಳಗೆ ಪ್ರವೇಶಿಸುವದಕ್ಕೆ ಮುಂಚೆ, ಬಾಗಿಲು ಹೊರಗೆ ಚಪ್ಪಲಿ ಕಳೆದು, ಹೋಗುತ್ತಿದ್ದ. ಕೈಗೆ ಗಡಿಯಾರ ಕಟ್ಟದಿದ್ದರೂ, ಸಮಯ ಪಾಲನೆ ಎಂದೂ ಹೇರಾಫೇರಿಯಾಗಲಿಲ್ಲ. ಅದೇ ಖಾದಿ ಅಂಗಿ, ಧೋತರ, ಸುರುವಿನಲ್ಲಿದ್ದ ರುಮಾಲು ಜಾಗೆಯಲ್ಲಿ ಗಾಂಧಿಟೊಪ್ಪಿಗೆ ಬಂದದ್ದು ಬಿಟ್ಟರೆ, ವೇಷಭೂಷಣದಲ್ಲಿ ಅಂಥ ಬದಲಾವಣೆ ಆಗಿರಲಿಲ್ಲ. ಬರುತ್ತಿದ್ದ ಪಗಾರ ಬಹಳ ಕಮ್ಮಿ. ಆರು ಜನರ ಸಂಸಾರದ ಭಾರ ತೂಗಿಸಿಕೊಂಡು ಹೋಗುವದು ಸಸಾರವಾಗಿರಲಿಲ್ಲ. ಮಿಕ್ಕ ವೇಳೆಯಲ್ಲಿ ಮನೆಯಲ್ಲಿ ಟ್ಯೂಶನ್ ಹೇಳಬೇಕಾಯಿತು. ಅದು ಇಂದಿನವರ ಮನೆಪಾಠ ರೀತಿಗಿಂತ ಭಿನ್ನವಾದುದು.

ಫೀ ಇಷ್ಟೇ ಎಂದೇನೂ ಇರುತ್ತಿರಲಿಲ್ಲ. ಕೊಡಿರೆಂದು ಯಾರಿಗೂ ಕೇಳಿದವನಲ್ಲ. ಕಷ್ಟವಿದ್ದಾಗ್ಯೂ ಬಾಯಿಬಿಟ್ಟವನಲ್ಲ. ಅವರು ತಮ್ಮ ಶಕ್ತ್ಯಾನುಸಾರ ಕೊಟ್ಟದ್ದನ್ನು ಎಣಿಸಿ ಕೊಳ್ಳದೆ, ಕಿಸೆಗಿಳಿಸುತ್ತಿದ್ದ. ಉಳ್ಳವರು ತಮಗೆ ತಿಳಿದಷ್ಟು ಕೊಡುತ್ತಿದ್ದರು. ಬಡವರಿಗೆ, ಮಾಸ್ತರರ ಮಕ್ಕಳಿಗೆ, ಜಂಗಮ ಹುಡುಗರಿಗೆ ಫೀ ಎಂಬುದು ಫ್ರೀ.

ಅಬ್ಬಬ್ಬಾ, ಆ ಟ್ಯೂಶನ್ ಸಮಯವೋ...! ಒಮ್ಮೊಮ್ಮೆ ಅದು ಬೆಳಗು ಜಾವದ ಮೂರಕ್ಕೆ ಸುರುವಾಗುತ್ತಿತ್ತು. ರಾತ್ರಿ ಹನ್ನೊಂದು - ಹನ್ನೊಂದೂವರೆ ತನಕ ನಡೆದಿರೋದು. ಅಂಥ ಅಪವೇಳೆಯಲ್ಲೂ, ಟ್ಯೂಶನ್ ಹೇಳಿಸಿಕೊಳ್ಳಲು ಹುಡುಗರು (ಹನ್ನೆರಡು ಮೈಲಿ ದೂರದ ಜಮಖಂಡಿಯಿಂದಲೂ ಕೆಲವರು) ಬರುತ್ತಿದ್ದರೆಂದರೆ ಅಪ್ಪನ 'ಕಲಿಸುವಿಕೆ' ಎಂಥದ್ದೆಂಬುದರ ಕಲ್ಪನೆ ಬಂದೀತು!

ಟ್ಯೂಶನ್‌ದಲ್ಲಿ ಪಾಠ ಬೋಧನೆಗಿಂತ, ಬದುಕಿನ ರೀತಿ-ನೀತಿಯೆ ಮುಂದಾಗಿರೋದು. ಟ್ಯೂಶನ್ನಕ್ಕೆ ಬರುವ ಹುಡುಗರು ಗಾಂಧಿ ಟೊಪ್ಪಿಗೆ ಧರಿಸಿರಬೇಕು. ಇದು ಆತನ ಮೊದಲ ಕಂಡಿಶನ್. ಕಲಿಯುವವನಿಗೆ ತಲೆಯ ಒಳಗೆ ತುಂಬಿಕೊಳ್ಳುವದು ಮುಖ್ಯವಾಗಿರಬೇಕೆ ಹೊರತು, ತಲೆಯ ಮೇಲಿನ ಕೂದಲಲಂಕಾರವಲ್ಲ, ಹಾಗಂತ ನಂಬಿದ್ದ!

ಆದರೆ, ಮಜಾ ಅಂದ್ರೆ, ಕೆಲ ಷೋಕಿಲಾಲರು, ನಮ್ಮ ಮನೆಯೊಳಗೆ ಕಾಲಿಡುತ್ತಿದ್ದಂತೆ ಟೋಪಿಧಾರಿಗಳಾಗುತ್ತಿದ್ದರು. ಅಂದಿನ ಪಾಠ ಮುಗಿಸಿ ಹೊಸ್ತಿಲು ದಾಟಿದರೋ, ಟೋಪಿ ಮತ್ತೆ ಚೊಣ್ಣದ ಜೇಬಿಗೆ ದಾಟಿಸುತ್ತಿದ್ದವರೂ ಇದ್ದರು. ದೇಸಾಯಿ ಎಂಬ ಕ್ರಿಸ್ತಿಯನ ಡಾಕ್ಟರನ ಮಕ್ಕಳಿಬ್ಬರು ಹ್ಯಾಟು ಹಾಕಿಕೊಂಡು ಬರುತ್ತಿದ್ದ ನೆನಪು.

ಗುರು-ಶಿಷ್ಯ ಸಂಬಂಧಕ್ಕೆ ವಾತ್ಸಲ್ಯದ ಬೆಸುಗೆ ಹಾಕಿದ್ದ. 'ತಮ್ಮಾ, ಬಾಳಾ, ಅಪ್ಪಾ, ಅಕ್ಕಮ್ಮಾ, ತಂಗೆವ್ವ' ಅಂತಃಕರಣ ತುಂಬಿದ ಪದಗಳು ಆ ಬೆಸುಗೆಯನ್ನು ಇನ್ನಷ್ಟು ಗಟ್ಟಿಗೊಳಿಸಿದ್ದವು. ಅವರೂ ಕೂಡ ನಮ್ಮ ಕುಟುಂಬದವರಲ್ಲಿ ಒಬ್ಬರಾಗಿ ಹೋಗುತ್ತಿದ್ದರು.

ಈ ಅನುಬಂಧ ಒಂದು ತಲೆಮಾರಿಗೆ ಮಾತ್ರ ಮಿತಿಗೊಂಡದ್ದಲ್ಲ. ಹಿಂದೊಮ್ಮೆ ವಿದ್ಯಾರ್ಥಿಗಳಾಗಿದ್ದವರ ಮಕ್ಕಳು-ಮರಿಗಳ ಬಗ್ಗೆ ವಿಚಾರಿಸುವಾಗ, ''ಈಗ ಏನ್ಮಾಡ್ತಾರಪಾ ನನ್ನ ಮೊಮ್ಮಕ್ಕಳು'' ಎಂಬಲ್ಲಿ ವಾತ್ಸಲ್ಯದ ಬೇರುಗಳು, ಅಂತಃಕರಣದ ತಳ ಮುಟ್ಟುತ್ತಿದ್ದವು.

ವಿದ್ಯಾರ್ಥಿಗಳನ್ನು ಅಡ್ಡಹೆಸರಿನಿಂದ ಗುರುತಿಸದೆ, ಅವರ ಮೊದಲ ಹೆಸರಿನಿಂದ ಕರೆಯುತ್ತಿದ್ದ. ಡಾ|| ಸ. ಜ. ನಾಗಲೋಟಿಮಠ ಆತನಿಗೆ ಯಾವಾಗಲೂ 'ಸದಾ'. ಹಿರಿಯ ಪೊಲೀಸಾಧಿಕಾರಿಯಾಗಿದ್ದ ಬಿ. ಎಮ್. ಯಶವಂತಗೋಳ 'ಭೀಮು' ಆಗಿ ಹತ್ತಿರ ಬರು ತ್ತಿದ್ದರು. ಹೀಗೆ, ಹೃದಯದ ತುಂಬ ಇನ್ನೂ ಇನ್ನೂ ತುಂಬಿಕೊಂಡಿತ್ತು ಅವನ ಬಳಗ... !

ಒಮ್ಮೊಮ್ಮೆ ಆತನಿಗೆ ಸಿಟ್ಟು ಬರುತ್ತಿತ್ತು. ಆದರದು, ಸಾತ್ವಿಕ ಸಿಟ್ಟು. ಒಮ್ಮೆ ಹೀಗಾಯಿತು. ಪ್ರಾಥಮಿಕ ಶಾಲೆಯಲ್ಲಿ ಅಪ್ಪನ ಸಹಪಾಠಿಯಾಗಿದ್ದ ಒಬ್ಬ ಹಿರಿಯರು ಮನೆಗೆ ಬಂದಿದ್ದರು. ಬಹಳ ವರ್ಷಗಳ ನಂತರದ ಭೆಟ್ಟಿ. ಬಾಲ್ಯದ ಸವಿನೆನಪು ಹಂಚಿಕೊಳ್ಳುತ್ತಿದ್ದರು. ಅದು ಇದು ಮಾತಾಡುತ್ತ ಮಾತಾಡುತ್ತ, ಬಂದಿದ್ದ ಆ ಹಿರಿಯರು, ತಮ್ಮ ಮತ್ತೊಬ್ಬ ಸಹಪಾಠಿ, ಆ ನಂತರ ಇಟ್ಟುಕೊಂಡಿದ್ದ ಒಂದು ಅನೈತಿಕ ಸಂಬಂಧದ ವಿಷಯ ತೆಗೆದರು.

ಮೊದಲು ಕಸವಿಸಿಗೊಂಡರೂ, ನಂತರ ಸಿಟ್ಟಿಗೆದ್ದ ಅಪ್ಪ 'ನೋಡಪ್ಪಾ, ಬಾಳ ದಿವಸ ಮ್ಯಾಗ ಬಂದೀ, ಛಲೋ ಒಂದ್ನಾಲ್ಕ ಮಾತ ಹೇಳಾಂವಿದ್ದರ ಕುಂದ್ರು, ಇಲ್ಲಿಕ್ಕಂದ್ರ ಎದ್ದ ಹೋಗ್ಬಿಡು' ನಿಷ್ಠುರವಾಗಿ ಹೇಳಿಬಿಟ್ಟ.

ಸರಿಯಾಗಿ ಅಭ್ಯಾಸ ಮಾಡದವರಿಗೆ ದಡ್ಡ ಹುಡುಗರಿಗೆ 'ಗೋಪಾಳಪ್ಪಗೊಳರ್‍ಯಾ' (ಅಂದ್ರೆ, ದನಾ ಕಾಯುವವರು) ಎಂಬ ಶಿಷ್ಟ-ಬೈಗುಳ ಬಳಸುತ್ತಿದ್ದ. ಅದೇ ನಮ್ಮನ್ನು, ಅಂದ್ರೆ ಸ್ವಂತ ಮಕ್ಕಳನ್ನು ''ಹಮಾಲಿ ಮಾಡಾಕ ಹೋಗ್ರಿ. ಹಮಾಲೀ'' ಅಂತ ಬೈಯುತ್ತಿದ್ದ. ಅದು ಸಿಟ್ಟಿನ ಮ್ಯಾಕ್ಸಿಮಮ್ ಪಾಯಿಂಟ್. ಆದರಾಚೆ ಮೀರಿದ ಬೈಗುಳ ಆತನಿಗೆ

## ಪರದಾಟ

ಜಲ ಪ್ರಳಯದಿಂದ
ಹಾಳಾದ ಹಳ್ಳಿಯಲಿ
ಹದ್ದು ಕಾಗೆಗಳ ಚೆಲ್ಲಾಟ
ಹರಿದು ಬಂದ
ಪರಿಹಾರದಿಂದ
ಕನಸಿನ ಹೊಸೂರಿನಲ್ಲಿ
ನೆಲೆಗಾಗಿ ಜನಗಳ ಪರದಾಟ.

ರವಿ ಸೋ. ದೇವರಡ್ಡಿ
ಹೇಮರಡ್ಡಿ ಮಲ್ಲಮ್ಮ ನಗರ, ಮುಂಡರಗಿ, ಗದಗ ಜಿಲ್ಲೆ

ಗೊತ್ತಿರಲಿಲ್ಲವಂತಲ್ಲ. ಆದರೆ ಬಳಸುತ್ತಿರಲಿಲ್ಲ. ಅಪ್ಪಿತಪ್ಪಿ ಅಸಭ್ಯ-ಅಶ್ಲೀಲ ಶಬ್ದಗಳು ಕಿವಿಗೆ ಬಿದ್ದವೊ... ಮುಖ ಕಿವುಚುತ್ತ, ಕಣ್ಮುಚ್ಚಿಕೊಂಡು ''ಶಿವ ಶಿವಾ, ಬಸವಣ್ಣಾ...'' ಎನ್ನುತ್ತ, ಅಬದ್ಧ ಕೇಳಿದ್ದರ ಪಾಪ ಪರಿಹರಿಸಿಕೊಳ್ಳುತ್ತಿದ್ದ.

ಅವನ ಶಿಷ್ಯ ಬಳಗವೋ ರಾಶಿ ರಾಶಿ, ಖಂಡುಗಗಟ್ಟಲೆ ದೊಡ್ಡದು. 'ಒಬ್ಬೊಬ್ಬ ಶಿಷ್ಯನ ಮನ್ಯಾಗ ಒಂದೊಂದೇ ದಿವ್ಸ ಇದ್ದರೂ ಸಾಕು. ಆಯುಷ್ಯ ಪೂರ್ತಿ ಕಳೀತೀನಿ' ಎನ್ನುತ್ತಿದ್ದ. ಮತ್ತು ಅದರಲ್ಲಿ ಸತ್ಯವೂ ಇತ್ತು.

ಜೀವಿತದ ಕೊನೆಯ ದಿನಗಳಲ್ಲಿ ತನ್ನ ಕೈಯಲ್ಲಿ ಕಲಿತ ನೆಚ್ಚಿನ ಶಿಷ್ಯರ ಹೆಸರು, ಇಂದಿನ ಅವರ ವೃತ್ತಿಯ ವಿವರಗಳನ್ನೆಲ್ಲ ಎರಡು ದೊಡ್ಡ ದೊಡ್ಡ ಕಾರ್ಡ್‌ಬೋರ್ಡ್ ಫಲಕಗಳಲ್ಲಿ ಪೇಂಟ್‌ನಿಂದ ಬರೆಯಿಸಿ, ಅದಕ್ಕೆ 'ಶಿಷ್ಯ ಸಂಪದ' ಎಂದು ಹೆಸರಿಟ್ಟ, ತನ್ನ ಕೋಣೆಯಲ್ಲಿ ಆ ಫಲಕಗಳನ್ನಿರಿಸಿಕೊಂಡು 'ಐವತ್ತು ವರ್ಷದ ಮಾಸ್ತರಿಕೆಯೊಳಗೆ ಇದೊಂದೇ ಸಂಪತ್ತ ನೋಡ್ರಿ ನಾ ಗಳಿಸಿದ್ದಂದ್ರ' ಬಂದವರ ಮುಂದೆ ಎದೆಯುಬ್ಬಿಸಿ ಹೇಳುತ್ತಿದ್ದ. ಎಪ್ಪತ್ತರಾಚೆಯ ಇಳಿದಿನಗಳಿಂದ ತಾನು ಸಾಯುವವರೆಗೂ ಆ ಫಲಕಗಳನ್ನು ತನ್ನ ಕೋಣೆಯಲ್ಲಿ ಕಣ್ಣೆದುರಿಗೆ ಇಟ್ಟುಕೊಂಡ.




ಎಂದೋ, ಯಾವ ಕಾಲದಲ್ಲೊ ಕಲಿತು, ಮಕ್ಕಳು ಮೊಮ್ಮಕ್ಕಳಾಗಿದ್ದವರು, ಇಳಿವಯಸ್ಸಿನ ಅಪ್ಪನ ಭೆಟ್ಟಿಗೆ ಬಂದು, ಆಶೀರ್ವಾದ ಪಡೆಯುತ್ತಿದ್ದರು. ತಾಸಾನುತಾಸುಗಟ್ಟಲೆ ಕುಂತು, ಸುಖ-ದುಃಖ ಹಂಚಿಕೊಳ್ಳೋರು. ಆಗ ಅಪ್ಪ ಮೈಯೆಲ್ಲ ಕಿವಿಮಾಡಿಕೊಂಡು, ಸಂಭ್ರಮದಿಂದಲೂ, ಸಂತಾಪ ದಿಂದಲೂ ಆಲಿಸುತ್ತಿದ್ದ. ಶಿಥಿಲಗೊಂಡಿರುವ ಗುರು-ಶಿಷ್ಯ ಬಾಂಧವ್ಯದ ಕೊಂಡಿಯ ಮಧ್ಯೆ, ಇಂದು ಮಾಸ್ತರಿಕೆ ಮಾಡುತ್ತಿರುವ ನನ್ನಂಥವರಿಗೆ ದಿಗಿಲಾಗುವದು ಸಹಜ.

ಭಾವಜೀವಿಯಾಗಿದ್ದಂತೆ, ಆತ ಭಾವುಕ ಜೀವಿಯೂ ಕೂಡ.

ಊರ ಆರಾಧ್ಯದೈವ ಕಾಡಸಿದ್ದೇಶ್ವರನಲ್ಲಿ ಶ್ರದ್ಧೆ ಇಟ್ಟುಕೊಂಡವ, ಪ್ರತಿದಿನ ಸಂಜೆ ಗುಡಿಗೆ ಹೋಗಿ, ದೇವರ ದರ್ಶನ ಮಾಡಿಕೊಂಡು ಬರುವ ವಾಡಿಕೆ ಎಂಥ ಪ್ರಸಂಗದಲ್ಲೂ ಅದು ತಪ್ಪು ವಂತಿರಲಿಲ್ಲ. ಬಿದ್ದು, ಕಾಲು ಉಳುಕಿದ್ದರೂ, ಕುಂಟುತ್ತಲೆ, ಮೈಲು ದೂರದಲ್ಲಿದ್ದ ಗುಡ್ಡದ ಮೇಲಿನ ಗುಡಿಗೆ ಹೋಗಿದ್ದ. ವಿದ್ಯಾರ್ಥಿಗಳ ಕಷ್ಟ-ನಷ್ಟದ ಸಮಯದಲ್ಲಿ ಅವರಿಗೆ ಸಮಾಧಾನದ ಮಾತು ಹೇಳುತ್ತ, ''ಎಲ್ಲವೂ ದೇವರಾಟಾ, ಆ ದೇವರ ಇಚ್ಛಾ, ದೇವರ ಮೇಲೆ ಭಾರ ಹಾಕಿ ನೀ ಪ್ರಯತ್ನ ಮಾಡು ತಮ್ಮಾ, ಮನಸು ಛಲೂ ಇತ್ತಂದ್ರ, ದೇವರು ಛಲೋ ಮಾಡೇ ಮಾಡ್ತಾನ'' – ಹೀಗೆ ಮಾತು ಮಾತಿಗೆ 'ದೇವರ'ನ್ನು ಎಳೆದುತರುತ್ತಿದ್ದ. ಈ ಪರಿಯ ದೇವಭಕ್ತಿಯಿಂದಾಗಿ, ಅಪ್ಪನಿಗೆ 'ದೇವ್ರೂ' ಎಂಬ ನಿಕ್‌ನೇಮ್ ಗೌರವಪೂರ್ವಕವಾಗಿ ದಯಪಾಲಿಸಿತ್ತು ಶಿಷ್ಯಕೋಟಿ.

ಆತ ಅಥಣಿಯಲ್ಲಿ ಓದುತ್ತಿರುವಾಗಿನ ಪ್ರಸಂಗ: ನಮ್ಮ ಪೂರ್ವಜರಿದ್ದ ಪಕ್ಕದ ಹೊಸೂರಲ್ಲಿ ಒಂದು ದರ್ಗಾ ಇದೆ. ಪ್ರತಿವರ್ಷ ನಡೆಯುವ ಉರುಸ್‌ನಲ್ಲಿ, ನಮ್ಮ ಮನೆತನದವರು ಬಟ್ಟೆಯ ಫಲೀಪ್ ಹೊಲಿಸಿ ಹಾಕುವುದು ಮೊದಲಿನಿಂದ ಬಂದ ವಾಡಿಕೆ.

ಮನೆಯಲ್ಲಿ ಎರಡು ಹೊತ್ತಿನ ಊಟಕ್ಕೂ ಆಗ ಕಷ್ಟವಿತ್ತು. ಹನ್ನೆರಡು ಮೀಟರ್ ಬಟ್ಟೆ ಕೊಂಡು, ಫಲೀಪ್ ಹೊಲಿಸಿ ಹಾಕುವುದು ಹೇಗೆಂದು ಅಜ್ಜ-ಅಜ್ಜಿ ಒದ್ದಾಡುತ್ತಿದ್ದರು. ಅಥಣಿಯಿಂದ ನಾಲ್ವತ್ತು ಮೈಲು ಕಾಲ್ನಡಿಗೆಯಲ್ಲಿ ಬಂದು, ಅಪ್ಪ ತನ್ನ ಬೆಳ್ಳಿಯ ಉಡುದಾರ ಮಾರಿ, ಫಲೀಪ್ ಹಾಕಿದ್ದ.

ಹಾಗೆ ನೋಡಿದರೆ, ಆತ ತೀರ ಸಂಪ್ರದಾಯ ಶರಣನೇನಲ್ಲ. ವಿಧವಾ ವಿವಾಹ, ಅನ್ಯಜಾತಿ ವಿವಾಹ ಮಾಡಿಕೊಂಡ ತನ್ನ ಶಿಷ್ಯರಿದ್ದಲ್ಲಿ ಹೋಗಿ, ಬೆನ್ನು ತಟ್ಟಿ, ಮೆಚ್ಚುಗೆಯ ಮಾತು ಆಡಿಬರುವ ವಿಶಾಲ ಮನಸ್ಸು ಆತನಿಗಿತ್ತು.

ಒಂದು ಕಪ್ ಖಡಕ್ ಚಹಾ, ಟೈಮ್ಸ್ ಆಫ್ ಇಂಡಿಯಾ, ಇವೆರಡು ಅಪ್ಪನ ವೀಕ್‌ನೆಸ್‌ಗಳು. ಎಂಬತ್ತು ಎಂಬತ್ತೆರಡು ವರ್ಷಗಳಾಗಿದ್ದರೂ, ಅವೆರಡನ್ನೂ ಬಿಡಲಾಗಿರಲಿಲ್ಲ. ನೋಡಿದವರಿಗೆ ಚಸ್ಮಾ ಇಲ್ಲದೆ 'ಟೈಮ್ಸ್...' ಓದುತ್ತಿದ್ದದ್ದು ವಿಸ್ಮಯವಾಗಿತ್ತು.

ತಾರುಣ್ಯದಲ್ಲಿ ಸಿನೇಮಾ ನೋಡುವ ಚಟವಿತ್ತು. 'ಝುಣಕ್ ಝುಣಕ್ ಪಾಯಲ್ ಬಾಜೆ' ಹಿಂದಿ ಸಿನೇಮಾ ಆತನಿಗೆ ಬಹಳ ಹಿಡಿಸಿತ್ತೆಂದು, ಮೂರನೆಯ ಸಲವೊ, ನಾಲ್ಕನೆಯ ಸಲವೊ ನೋಡಲು, ನಮ್ಮೂರಿನ ಅರುಣ ಟಾಕೀಜ್‌ಗೆ ಹೋಗಿದ್ದನಂತೆ. ಅದನ್ನು ಗಮನಿಸಿದ ಇವನ ಹೈಸ್ಕೂಲ್ ವಿದ್ಯಾರ್ಥಿಯೊಬ್ಬ, 'ಏಽಽಽ... ನೋಡೋ, ನಮ್ ಮಾಸ್ತರ್ ಇವತ್ತೂ ಸಿನೇಮಾ ನೋಡಾಕೆ ಬಂದಾನ್ರ್ಯೋ...' ಎಂದು ತನ್ನ ಗೆಳೆಯರಿಗೆ ಹೇಳುತ್ತಿದ್ದದ್ದು, ಕಿವಿಗೆ ಬಿತ್ತು. ಟಿಕೇಟ್ ತೆಗೆಸಿದ್ದರೂ, ಸಿನೇಮಾ ನೋಡದೆ ಸೀದಾ ಮನೆಗೆ ಬಂದಿದ್ದ. ಅದೇ ಕೊನೆ. ಮುಂದೆ ಅಪ್ಪ ಸಿನೇಮಾ ಥೇಟರ್‌ನತ್ತ ಮುಖ ಮಾಡಲಿಲ್ಲ.

* * *

ಆತನ ಅಂತ್ಯವಂತೂ, ಈಗಲೂ ಕಣ್ಣು ಮುಂದೆ ಕಟ್ಟಿದಂತಿದೆ. ಮೊದಲೇ ತಯ್ಯಾರಿ ಮಾಡಿಕೊಂಡವನಂತೆ, ಸಡಗರದಿಂದ ಸಾವನ್ನು ಸ್ವೀಕರಿಸಿದ. ಕಾಣಬೇಕಾದ ತನ್ನ ಪ್ರಿಯ ಶಿಷ್ಯ ಬಳಗಕ್ಕೆ ಹೇಳಿಕಳಿಸಿದ. ಕಣ್ತುಂಬ ನೋಡಿ ಸಂತಸಪಟ್ಟ, ಮನತಣೀ ಮಾತನಾಡಿದ.

ಆವಾಗಲೆ ನೆನಪಾಗಿದ್ದು, ಹಿಂದೆ ಯಾರಿಗೋ ಕೊಡಬೇಕಾಗಿದ್ದ ಸಾಲ. ಕೊಟ್ಟವರನ್ನು ಮನೆಗೆ ಕರೆಯಿಸಿ, ಅವರ ಮುಂದೆ ದುಡ್ಡಿಟ್ಟ ''ಸರ್, ನೀವು ವಾಪಸ್ಸು ಮಾಡಿದಾಂಗದ'' ಅವರಿಗೂ ಅನುಮಾನ, ಹಣ ತೆಗೆದುಕೊಳ್ಳಲು ಹಿಂಜರಿದರು.

ಅವ್ರು ಎಂದು ಕೊಟ್ಟಿದ್ದರೊ... ? ಇವ್ನ ಯಾವಾಗ ಇಸಿದುಕೊಂಡಿದ್ದನೊ ? ಪಾಪ, ಕೊಟ್ಟಾತಂಗೂ ನೆನಪಿಲ್ಲ. ಆದರೆ, ಇಸ್ಗೊಂಡ ಈ 'ಇರಭದ್ರ' ಕೇಳ್ಬೇಕಲ್ಲ.

''ನೋಡ ತಮ್ಮಾ, ತಿರುಗಿ ಕೊಟ್ಟನ್ಯೋ ಇಲ್ಲೊ ಅಂಬೋದು ಆ ಬಸವಣ್ಣಗೇ ಗೊತ್ತು. ಸುಮ್ನೆ ಸಂಶಯಾಕಪಾ, ಇದ್ನ ತುಗೊಂಡು ನನ್ ಋಣ ಮುಕ್ತ ಮಾಡಪ್ಪಾ, ಇರ್ಲಿ ಕಂದ್ರ ಮುಂದಿನ ಜನ್ಮದಾಗ ನಾ ನಿಮ್ಮ ಮನಿಯೊಳಗ ಎಮ್ಮೀ ಆಗಿ ಹುಟ್ಟ ಋಣ ತೀರಿಸುವಂಗಾಗ್ತದ'' ಕೈ ಜೋಡಿಸಿದ್ದ. ನಿರುತ್ತರರಾಗಿ, ಅವರು ದುಡ್ಡು ಸ್ವೀಕರಿಸಬೇಕಾಯಿತು.

ಸಾಯುವ ಹಿಂದಿನ ದಿನ, ತನ್ನ ಅಂತ್ಯಕ್ರಿಯೆ ಹೇಗಾಗಬೇಕು ಎಂದು ಹೇಳಿ ಬರೆಸಿದ. ಯಾರಿಗಾಗಿಯೂ ಕಾಯದೆ, ಯಾರಿಗೂ ತೊಂದರೆ ಕೊಡದೆ, ಆದಷ್ಟು ಬೇಗ ಮಣ್ಣು ಮಾಡಿ ಮುಗಿಸುವಂತೆ ಹೇಳಿದ.

ಮಲಗಿದ್ದಲ್ಲಿಂದಲೆ, ಒಮ್ಮೆ 'ಶಿಷ್ಯಸಂಪದ' ಫಲಕ ಗಳನ್ನು ನೋಡುತ್ತ, ಮತ್ತೊಮ್ಮೆ ಎದುರಿಗಿನ ಗೋಡೆಯ ಮೇಲಿದ್ದ ಬಸವಣ್ಣನ ಭಾವಚಿತ್ರದತ್ತ ಕಣ್ಣಾಲಿ ಹೊರಳಿಸುತ್ತ, ಶರಣರ ವಚನಗಳ ಕ್ಯಾಸೆಟ್ ಆಲಿಸುತ್ತಾ ಆಲಿಸುತ್ತ, 'ಬಸವಾ... ಬಸವಾ...' ಎನ್ನುತ್ತ ಶಿವಲೋಕ ಸೇರಿದ.

ಅಪ್ಪ ಸಾಯುವ ಹೊತ್ತಿಗೆ ಸರಿಯಾಗಿ, ಆತನ ಆರಾಧ್ಯ ದೈವ ಕಾಡಸಿದ್ದೇಶ್ವರರ ತೇರು, ಅತ್ತ ಜಾತ್ರೆಯಲ್ಲಿ ಹೊರಟಿದ್ದು ಕಾಕತಾಳೀಯವೆ! ಜಾತ್ರೆಗೆಂದು ಬಂದವರು, ಅಪ್ಪನ 'ಯಾತ್ರೆ'ಯಲ್ಲಿ ಭಾಗವಹಿಸಬೇಕಾಯಿತು.

ಅವ್ವ-ಅಪ್ಪರನ್ನು ಏಕಕಾಲಕ್ಕೆ ಕಳೆದುಕೊಂಡ ಅನಾಥ ಭಾವ, ಆ ನಂತರ ಬಹಳ ದಿನಗಳವರೆಗೆ ನನ್ನನ್ನು ಕಾಡಿತು.

ಹೌದು, ಅಪ್ಪ - ನನಗಂತೂ ಎಲ್ಲವೂ ಹೌದಪ್ಪ.

ಮಲ್ಲಿಕಾರ್ಜುನ ಹುಲಗಬಾಳಿ
ಬಸವ ಸಂಪದ, ಬನಹಟ್ಟಿ (ಜಿ. ಬಾಗಲಕೋಟೆ)



# ದುರುಗಮಾರಿಯ ದುರುಗನ ಕಥೆ

'ಛಟೀರ್...' ಎಂದು ತನ್ನ ಮೈಯಿಗೆ ತಾನೇ ಚಾಟಿಯಿಂದ ಬೀಸಿ ಬಡಿದುಕೊಂಡು ಚಾಕುವಿನಿಂದ ಮೈಯ ರಕ್ತವನ್ನು ಚೆಲ್ಲುವ ದುರುಗಮಾರಿಯ ದುರುಗನನ್ನು ಸಂತೆಯಲ್ಲಿ ಕಂಡರೆ ಸಾಕು, ಮಕ್ಕಳು ಮರಿಗಳೆಲ್ಲ ಅವ್ವನ ಸೆರಗಿನ ಹಿಂದೆ ಅವಿತುಕೊಳ್ಳುತ್ತಿದ್ದರು. ದಪ್ಪ ಮೀಸೆ ಉದ್ದನೆಯ ಜಡೆಯ ಬಿಟ್ಟು ತೆರೆದೆದೆಯ ಅವನ ತೊಡೆಯ ಸುತ್ತಿದ ಅದ್ಯಾವುದೋ ಕಲರ್‌ಕಲರಿನ ಬಟ್ಟೆ, ಕೈದೋಳಿಗೆ ಕಟ್ಟಿದ ನಮ್‌ನಮೂನೆಯ ಬಣ್ಣಬಣ್ಣದ ತಾಯತಗಳು. ಹಣೆಯ ಮೇಲೆ ಕಾಸಿನಗಲದ ಕುಂಕುಮ, ಅದರ ಸುತ್ತಲೂ ಹಚ್ಚಿದ ಭಂಡಾರ ಸಾಲದೆಂಬಂತೆ ಮೈಸೋರುವ ರಕ್ತ, ಅವನಲ್ಲಿ ಇನ್ನಷ್ಟು ಹುಮ್ಮಸ್ಸು ತುಂಬುವಂತೆ ಬಾರಿಸುವ ಆಕೆ.

ಉರುಮಿಯ ಸದ್ದಿಗೆ ದುರುಗಮಾರಿಯನಿಳಿಸಿ ದುರುಗಮಾರಿಯ ಪರಾಕ್ರಮ ಘೋಷಣೆಯಾಗುವಾಗ ಹಾಸಿದ ಹರಿದ ಸೀರೆಯ ಮೇಲೆ ಬಿದ್ದ ಕಾಸನ್ನೇ ಎಣಿಸುವಂತೆ ನೋಡುತ್ತಿದೆ ಮಗುವೊಂದು. ಚಾಟಿಯೇಟಿನ ಸದ್ದಿಗೆ ಗೊಳ್ಳೆಂದು ನಕ್ಕು ಸುರಿವ ರಕ್ತದ ಕೈಗಳನ್ನೇ ನೋಡುತ್ತಾ ಆಟವಾಡುತ್ತಿದೆ.

ದುರುಗ ಹೀಗೆ ಸಂತೆಯಲ್ಲಿ ಹೊರಟರೆ ಸಾಕು ಆಕೆ ದುರುಗಮಾರಿಯ ಹೊತ್ತು ಉರುಮಿ ಬಾರಿಸಬೇಕು. ಕೊರಳಿಗೆ ಕಟ್ಟಿದ ಹಳೆಯ ಸೀರೆಯೊಳಗಿಂದ ಮಗು ನಿಶ್ಚಿಂತವಾಗಿ ನಿದ್ರಿಸುತ್ತಿತ್ತು. ಆ ಸಂತೆಯ ಗದ್ದಲದಲ್ಲಿ ಮಗು ಅತ್ತನೋ ಇಲ್ಲ ನಕ್ಕನೋ ಎಂಬುದು ಆ ದುರುಗಮಾರಿಗೇ ಗೊತ್ತು.

ಸಂಜೆ ಸೂರ್ಯ ಮುಳುಗುವ ಹೊತ್ತು. ಸಂತೆಯು ಮುಗಿದುಹೋದೀತೆಂದು ಕೂಲಿ ಕೆಲಸಕ್ಕೆಂದು ಹೋಗಿ ದಡದಡನೆ ಬರುವ ಹೆಂಗಸರು. ಅವ್ವ ಏನಾದರೂ ಕೊಡಿಸುತ್ತಾಳೆಂದು ಸೆರಗು ಹಿಡಿದು ಹಿಂದ್ಹಿಂದೆಯೇ ಬರುವ ಮಕ್ಕಳು, ಸಂತೆಯ ಸಾಮಾನು ಮಾರಿ ಗಂಟು ಕಟ್ಟುವ ಸಮಯ ಎದುರಿಗೆ ಬಂದು ನಿಂತ ತರಕಾರಿ ದಲ್ಲಾಳಿಗಳು. ರೊಕ್ಕ ಎಣಿಸಿ ಎಣಿಸಿ ಅವನ ಕೈಗಿಟ್ಟಾಗ ಉಳಿದದ್ದು ೧೦ ರೂಪಾಯಿ ನೋಟು. ಹಸಿದ ಒಡಲು ಕಡಲಾದಂತೆ ಹತ್ತು ರೂಪಾಯಿ ಅಣಕಿಸಿದಂತೆ ತೋರುತ್ತದೆ. ಅಷ್ಟೊತ್ತಿಗೆ ಸೂರ್ಯ ಆಗಲೇ ತಪ್ಪಿಸಿಕೊಂಡು ಓಡಿಹೋಗಿದ್ದ.

ಜೋಳಿಗೆಯಲ್ಲಿ ಬಿದ್ದ ಸಾಮಾನುಗಳಲ್ಲಿ ಒಂದಷ್ಟು ಹುಳುಕು ಬದನೆಕಾಯಿ, ಟೊಮ್ಯಾಟೋಗಳು, ಕೊಳೆತು ನಾರುವ ಕೋಸುಗಡ್ಡೆ, ಅಲ್ಲಿ ಇಲ್ಲಿ ಬಿದ್ದು ಒದ್ದಾಡುವ ಉಳ್ಳಾಗಡ್ಡಿ, ಕಾಡಿ ಬೇಡಿ ತಂದ ಕೊತ್ತಂಬರಿ ಸೊಪ್ಪು ಎಲ್ಲಾ ಇದ್ದವು. ಅಲ್ಲಿ ಇಲ್ಲಿ ಬಿದ್ದ ಜೋಳದ ದಂಟು ಕಟ್ಟಿಗೆ ಪುಳ್ಳಿಯನ್ನು ಆರಿಸಿ ತಂದ ಆಕೆ ಮೂರು ಕಲ್ಲುಗಳನ್ನಿಟ್ಟು ಬೆಂಕಿ ಹಚ್ಚಿದರೆ ಸಾಕು ಒಡಲ ತಾಪದ ಮುಂದೆ ಈ ಬೆಂಕಿಯ ತಾಪ ಏನೇನೂ ಅಲ್ಲವೆನಿಸುತ್ತಿತ್ತು.

ದುರುಗಮಾರಿಯ ಚಾಟಿಯೇಟು ತಿಂದ ದೇಹ ಸುಕ್ಕು ಸುಕ್ಕಾಗಿಹೋಗಿದೆ. ಬಿಳಿ ಗಡ್ಡ, ಬಿಳಿ ಮೀಸೆ, ಜೋತುಬಿದ್ದ ಚರ್ಮ ''ವಯಸ್ಸಾಯಿತು ನಿನಗೆ'' ಎಂದು ಸಾರಿ ಸಾರಿ ಹೇಳುತ್ತಿವೆ.

ಕುಂತ ನೆಲದ ಮೇಲಿನ ಮರದಿಂದ ಒಣಗಿದ ಎಲೆಗಳು ಫಳಫಳ ಸಪ್ಪಳ ಮಾಡುತ್ತಲೇ ಉದುರುತ್ತಿವೆ.

ದುರುಗಮಾರಿಯ ಜೊತೆಗೆ ಆಟವಾಡಿದ ಬಾಲಕನ ಕೈಗಳೀಗ ಚಾಟಿ ಹಿಡಿದಿವೆ.

ಆತನ ಹಿಂದೆ ದುರುಗಮಾರಿಯನ್ನೊತ್ತು ಉರುಮಿ ಬಾರಿಸುತ್ತ ಸಾಗುವ ಹೊಸ ಹುಡುಗಿಯಿದ್ದಾಳೆ. ಉರುಮಿ ಬಾರಿಸುತ್ತಲೇ ಸಂತೆಯಲ್ಲಿದ್ದ ಜಿಲೇಬಿಯ ಕಡೆಗೆ ಕಣ್ಣು ಹಾಯಿಸುತ್ತಿದ್ದಾಳೆ.

ಆ ಮುದುಕನೀಗ ಕುಳಿತಲ್ಲಿಯೇ ಕುಳಿತಿರುತ್ತಾನೆ. ಹಾಗಂತ ಆತ ಸುಮ್ಮನೇ ಕೂತಿರುವುದಿಲ್ಲ. ಬೇಡಬೇಡವೆಂದರೂ ಜಿಲೇಬಿ ತಿಂದಂತೆ, ಮೈಸೂರು ಪಾಕು ತಿಂದಂತೆ, ಚಿಕ್ಕಮಕ್ಕಳಿಗೆ ಬೀಳುವ ಹಾಗೆ ಕನಸು ಬೀಳುತ್ತದೆ.

ಉರುಮಿ ಬಾರಿಸಿ ಬಾರಿಸಿ ಸೋತುಹೋದ ಕೈಗಳ ಆಕೆಯನ್ನು ಹೂತಿದ್ದು ಯಾವೂರ ಗುದ್ದು ಎಂಬುದೂ ಆತನಿಗೀಗ ನೆನಪಿಲ್ಲ.

ಆದರೆ ಉರುಮಿ ಬಾರಿಸುವುದು ಮಾತ್ರ ಕೇಳಿಸುತ್ತಿದೆ. ಸುತ್ತು ನೆರೆದ ಜನರು ಚಿಲ್ಲರೆಯಿಲ್ಲವೆಂದು ಕೈಯಾಡಿಸುತ್ತ ನಡೆವ ಜನರ ಮುಂದೆ ತಲೆಕೆರೆದುಕೊಳ್ಳುತ್ತ ನಿಂತ ಮಗನನ್ನೇ ಆತ ನೋಡುತ್ತಿದ್ದಾನೆ.

ಉರುಮಿಯ ಸದ್ದು ಸಂತೆಯೆಲ್ಲೆಲ್ಲಾ ಮಾರ್ದನಿಸುತ್ತಿದೆ. ಮುಗಿದ ಸಂತೆಯಲ್ಲಿ ಬಿದ್ದ ಹುಳುಕು ಬದನೆ, ಕೊಳೆತ ಟೊಮ್ಯಾಟೋವನ್ನು ಆ ಪುಟ್ಟ ಹುಡುಗನೀಗ ಆರಿಸುತ್ತಿದ್ದಾನೆ.

ಗುದ್ದಿನಲ್ಲಿ ಮಲಗಿರುವ ಆಕೆಯಂತೆಯೇ ಆ ಹುಡುಗಿಯೀಗ ದಂಟುಪುಳ್ಳೆಗಳಿಗಾಗಿ ಹುಡುಕುತ್ತಿದ್ದಾಳೆ.

ಇನ್ನೇನು ಬೆಂಕಿ ಹೊತ್ತಬಹುದು.

ಒಡಲು ತುಂಬಹುದು.

ಕಣ್ಣುಗಳು ಅತ್ತಲೇ ನೋಡುತ್ತಿವೆ.

ಬಿ. ಶ್ರೀನಿವಾಸ
ಶಿರಸ್ತೇದಾರ್, ಜಿಲ್ಲಾ ನ್ಯಾಯಾಲಯ
ಹಾವೇರಿ - ೫೮೧ ೧೧೦

ಯಾರು ಮೊದಲು ಒಂದು ಸರಕನ್ನು ಕಂಡುಹಿಡಿದರೋ, ಅಭಿವೃದ್ಧಿಪಡಿಸಿದರೋ ಅವರು ಅದನ್ನು ಪೇಟೆಂಟ್ ಮಾಡಿಕೊಂಡರೆ ಆಗ ಆ ಸರಕಿಗೆ ಒಂದು ವಿಶಿಷ್ಟ ಸೌಲಭ್ಯ ದೊರೆಯುತ್ತದೆ. ಇಂಥ ಸರಕು ಸೇವೆಗಳ ಅದಲುಬದಲು ಅಗತ್ಯ ವ್ಯಾಪಾರಕ್ಕೆ ಅವಕಾಶ ಕಲ್ಪಿಸುತ್ತದೆ. ನಮ್ಮ ದೇಶದ ಕೃಷಿಕ್ಷೇತ್ರ ಮಿಕ್ಕವರೊಡನೆ ಪೈಪೋಟಿಗೆ ನಿಲ್ಲಲಾರದಷ್ಟು ದುರ್ಬಲವಾಗಿದ್ದರೆ, ಆಗ ಬೇರೆಯವರ ಕೃಷಿ ಉತ್ಪನ್ನಗಳನ್ನು ತಡೆಯಿಲ್ಲದೆ ಒಳಗೆ ಬರಲು ಬಿಟ್ಟರೆ ಅದು ನಮ್ಮ ಕೃಷಿಕ್ಷೇತ್ರವನ್ನೇ ನಾಶ ಮಾಡುತ್ತದೆ. ಹೀಗೆ ಹಲವಾರು ಕಾರಣಗಳಿಂದ ಮುಕ್ತವಾಗಿ ಅಂತರರಾಷ್ಟ್ರೀಯ ಸರಕುಗಳನ್ನು ಒಳಗೆ ಬಿಡಲು ಬರುವುದಿಲ್ಲ. ಒಂದು ಮಿತಿಯೊಳಗೆ ಹಾಗೂ ತೆರಿಗೆ ವಿಧಿಸಿ ನಿಯಂತ್ರಿಸುವುದು ರಾಷ್ಟ್ರೀಯ ಹಿತಕ್ಕೆ ಅಗತ್ಯವಾಗುತ್ತದೆ, ಕೇವಲ ವಾಣಿಜ್ಯ ಕಾರಣಕ್ಕೆ ಅಲ್ಲದೆ ರಾಜಕೀಯ ಕಾರಣಗಳಿಗೂ ಇಂಥ ಗೋಡೆಗಳನ್ನು ನಿಲ್ಲಿಸಿದಾಗ ಅದು ದೇಶದೇಶಗಳ ನಡುವೆ ಬಿಕ್ಕಟ್ಟು ಉಂಟುಮಾಡಿ, ಯುದ್ಧಕ್ಕೂ ಎಡೆಮಾಡಿಕೊಟ್ಟಿದೆ.

### ಒಂದಿಷ್ಟು ಅರ್ಥಶಾಸ್ತ್ರ

# ಬಂಡವಾಳಶಾಹಿ ವ್ಯವಸ್ಥೆಯ ಅಡಿಪಾಯ ಮಾರುಕಟ್ಟೆ

**ಮಾ**ರುಕಟ್ಟೆ – ಕೊಳ್ಳುವವ ಮತ್ತು ಮಾರುವವ ಸಂಧಿಸುವ ಜಾಗ. ಇದು ಸಂತೆ ಕಟ್ಟೆ ಇರಬಹುದು, ಷೇರುಪೇಟೆ ಇರಬಹುದು, ಅಂತರ್ಜಾಲವಿರಬಹುದು; ಅತ್ಯಂತ ಸರಳ ಸಂದರ್ಭ ಅಂಗಡಿ. ಮಾರುವವನ ಬಳಿಗೆ ಕೊಳ್ಳುವವ ತಾನೆ ಹೋಗಬಹುದು. ಅವನನ್ನು ಹುಡುಕಿಕೊಂಡು ಮಾರುವವನೇ ಬರಬಹುದು. ಅಂತರ್ಜಾಲದಲ್ಲಿ ಮುಖಾಮುಖಿಯಾಗದೆ ಅಥವಾ ಆಗಿ ವ್ಯವಹರಿಸಬಹುದು. ಮಾರಲು 'ಸರಕು'ಬೇಕು. ಕೊಳ್ಳಲು 'ಹಣ' ಬೇಕು. 'ಸರಕು' ಯಾವಾಗಲೂ ಇದ್ದದ್ದೆ. ಕೆಲವು ಶತಮಾನಗಳ ಹಿಂದೆ 'ಹಣ'ವೇ ಇರಲಿಲ್ಲ. ಅಂದು 'ಸರಕು' ಗಳನ್ನೆ ಅದಲುಬದಲು ಮಾಡಿಕೊಳ್ಳುತ್ತಿದ್ದರು. ಉತ್ಪಾದನೆಯ ವ್ಯವಸ್ಥೆ ಸಂಕೀರ್ಣಗೊಂಡಂತೆ, ಸರಕುಗಳ ಸಂಖ್ಯೆ ಅಪಾರವಾಗಿ ಹೆಚ್ಚುತ್ತಿದ್ದಂತೆ ಈ ಅದಲುಬದಲು ವಿಧಾನ ತೀರ ತೊಡಕಿನದ್ದಾಗಿ, 'ಹಣ'ವೆಂಬ ಮಧ್ಯವರ್ತಿಯ ಪ್ರವೇಶವಾಯಿತು. ಈ ಹಣಕ್ಕೆ ಚಲಾವಣೆ ಇದೆ, ಅದು ಅದಲುಬದಲಿನ, ಎಕ್ಸ್‌ಚೇಂಜಿನ ಮಾಧ್ಯಮ. ವಾಸ್ತವದಲ್ಲಿ ಚಲಾವಣೆ ನಾಣ್ಯದ್ದಲ್ಲ, ನೋಟಿನದ್ದಲ್ಲ. ಸರಕುಗಳದ್ದೇ. ಆದರೂ ಈ ಚಲಾವಣೆಯ ಮಾಧ್ಯಮವಾದ ನಾಣ್ಯಕ್ಕೆ ಆಂಗ್ಲದಲ್ಲಿ 'ಕರೆನ್ಸಿ' – ಚಲಾಯಿಸುವ ಎಂತಲೇ ಪ್ರಯೋಗವಿದೆ.

ಕಂಡಕಂಡದ್ದೆಲ್ಲಾ ನಾಣ್ಯವಾಗುವುದಿಲ್ಲ. ಅದರ ಹಿಂದೆ ಸಾರ್ವಭೌಮತೆಯ, ರಿಸರ್ವ್ ಬ್ಯಾಂಕಿನ ವಾಗ್ದಾನದ ಆಶ್ವಾಸನೆ ಇದೆ. ಇದೂ ಎಂದೆಂದೂ ಹೀಗೇ ಇದ್ದದ್ದಲ್ಲ. ಕವಡೆ, ಕಲ್ಲು, ಸೀಸ, ಗುಲಗಂಜಿ, ಕಬ್ಬಿಣ, ಚಿನ್ನ ಹೀಗೆಲ್ಲಾ ಇದ್ದವು. ನಮ್ಮ ಮಹಮದ್ ಬಿನ್ ತುಘಲಕ್ ಇಂಥದೊಂದು ಮಾಧ್ಯಮದ ಅಗತ್ಯವನ್ನು ಸಾಕಷ್ಟು ಹಿಂದೆಯೆ ಗ್ರಹಿಸಿದ ಬುದ್ಧಿವಂತ. ಕೊಳೆತುಹೋಗುವ ಚರ್ಮದ ಮೇಲೆ ನೋಟು ಮಾಡಿಸಿದ ಅವನ ಅಧಿಕಾರಿಗಳ ಪಿತೂರಿಯನ್ನು ಮುಂದು ಮಾಡಿ ಅವನನ್ನು ಗೇಲಿಮಾಡುವುದು ವಸಾಹತು ರಾಜಕೀಯದ ಇತಿಹಾಸಜ್ಞರ ಕಿತಾಪತಿ. ಅವುಗಳೆಲ್ಲವುಗಳ ಹಿಂದೆ ಸಾರ್ವಭೌಮ ಆಶ್ವಾಸನೆ ಇರಲಿಲ್ಲ. ಆದರೆ ಆರ್ಥಿಕ ಸಂಕೀರ್ಣತೆ ಹೆಚ್ಚಾದಂತೆ ಸರಳವಾದ ಅದಲುಬದಲು ಮಾಧ್ಯಮದ ಅಗತ್ಯ ಮನಗಂಡಂತೆ, ಈ ಸಾರ್ವಭೌಮ ಆಶ್ವಾಸನೆಯ ಪ್ರತೀಕವಾದ ನೋಟು ನಾಣ್ಯಗಳು ಬಂದುವು. ಒಂದಷ್ಟು ದಿವಸ ಈ ಆಶ್ವಾಸನೆಯ ಹಿಂದೆ ಚಿನ್ನ ಬೆಳ್ಳಿಯಂಥ ಮೌಲಿಕ ವಸ್ತುಗಳ ನಿಕ್ಷೇಪವೂ ಇರುತ್ತಿತ್ತು. ಈಗ ಇವೆಲ್ಲಾ ಗೌಣವಾಗಿ, ಅಂತರರಾಷ್ಟ್ರೀಯ ಒಪ್ಪಂದ ವ್ಯವಸ್ಥೆಗಳ ಆಶ್ವಾಸನೆಯ ಆಧಾರದ ಮೇಲೆ ಕರೆನ್ಸಿಗಳು ನಿಂತಿವೆ. ವಿವಿಧ ದೇಶಗಳ ವಿವಿಧ ನಾಣ್ಯ ವ್ಯವಸ್ಥೆಗಳು ಆಯಾಯ ದೇಶದ ಆರ್ಥಿಕ ಸ್ಥಿರತೆ, ಸಂಪತ್ತಿನ ಮಟ್ಟವನ್ನು ಪ್ರತಿಬಿಂಬಿಸುವಂಥ ಲೆಕ್ಕಾಚಾರಗಳ ಮೇಲೆ ನಿಂತಿವೆ. ಇಂಥ ಲೆಕ್ಕಗಳನ್ನು ಮಾಡುವ ತಾಂತ್ರಿಕ ವಿಷಯಗಳೂ ಹುಟ್ಟಿಕೊಂಡಿವೆ. ಸಂಖ್ಯಾಶಾಸ್ತ್ರ, ಮಾಪನ ಅರ್ಥಶಾಸ್ತ್ರ (ಎಕನಾಮಿಟ್ರಿಕ್ಸ್) ಮುಂತಾದ ಅಭ್ಯಸನೀಯ ಶಿಸ್ತುಗಳು, ಕಂಪ್ಯೂಟರ್‌ಗಳ ಆಗಮನ ಇವನ್ನೆಲ್ಲಾ ಸಾಧ್ಯವಾಗಿಸಿವೆ. 'ಸರಕು' ಎಂದರೆ ಮಾರುಕಟ್ಟೆಯಲ್ಲಿ ನಾವು ಪ್ರತಿದಿನ ಬಳಕೆ ಮಾಡುವ ಉಪಯುಕ್ತ ವಸ್ತುಗಳು ಮಾತ್ರವಲ್ಲ, ಇದರ ಅರ್ಥವ್ಯಾಪ್ತಿ ಅಪಾರವಾಗಿ ವಿಸ್ತರಿಸಿದೆ. ಇಂದಿನ ಮಾರುಕಟ್ಟೆಯಲ್ಲಿ ವಸ್ತುಗಳನ್ನೇ ಅಲ್ಲದೆ ಇನ್ನೂ ಏನೇನೋ ಮಾರುತ್ತಾರೆ. ಷೇರುಗಳನ್ನು, ಬಾಂಡುಗಳನ್ನು, ವಾಯಿದೆ ಪತ್ರಗಳನ್ನು, ಕರೆನ್ಸಿಗಳನ್ನು, ಆಹಾರಧಾನ್ಯಗಳಿಗೆ, ಲೋಹಗಳಿಗೆ ಮುಂತಾದುವುಗಳ ಬಗ್ಗೆ ಭವಿಷ್ಯತ್ತಿನ ಊಹಾಪೋಹಗಳನ್ನು (!) ಮಾರುತ್ತಾರೆ, ಕೊಳ್ಳುತ್ತಾರೆ. ಅಂಥವುಗಳಿಗೇ ಮೀಸಲಾದ ವಿಶಿಷ್ಟ ಮಾರುಕಟ್ಟೆಗಳಿವೆ. ಷೇರುಮಾರುಕಟ್ಟೆ, ಲೋಹ ಮಾರುಕಟ್ಟೆ, ಭವಿಷ್ಯ ಮಾರುಕಟ್ಟೆ, ಪತ್ರಗಳ ಮಾರುಕಟ್ಟೆ, ಕರೆನ್ಸಿ ಮಾರುಕಟ್ಟೆ, ವಿದೇಶೀ ವಿನಿಮಯ ಮಾರುಕಟ್ಟೆ, ವಸ್ತುಗಳ ಮಾರುಕಟ್ಟೆ, ಪ್ರತ್ಯುತ್ಪನ್ನ (ಡಿರೈವೇಟೀವ್ಸ್) ಮಾರುಕಟ್ಟೆ... ಹೀಗೆಲ್ಲಾ ಹುಟ್ಟಿಕೊಂಡಿವೆ.

ಮಾರುಕಟ್ಟೆಯಲ್ಲಿ 'ಬೇಡಿಕೆ', 'ಪೂರೈಕೆ'ಗಳು 'ಬೆಲೆ'ಯ ಮಧ್ಯವರ್ತಿ ಪ್ರಕ್ರಿಯೆಯಲ್ಲಿ, ಪರಸ್ಪರ ಸಮತೋಲನ ಸ್ಥಾಪಿಸಿದರೆ ಆ ಮಾರುಕಟ್ಟೆ ತುಂಬ ಸಮರ್ಥವಾದ ಮಾರುಕಟ್ಟೆ. ಕೊಳ್ಳುವವರಿಗೆ ಬೇಡುವಷ್ಟು, ಉತ್ತಮ ಬೆಲೆಯಲ್ಲಿ ದೊರಕಬೇಕು. ಆ ಬೇಡಿಕೆಗೆ ತಕ್ಕಂತೆ ಪೂರೈಸಲು, ಉತ್ಪಾದಕನಿಗೆ ಸಾಕಷ್ಟು ಲಾಭ ನೀಡುವಂಥ ಉತ್ಪಾದನೆ ನಡೆಯಬೇಕು. ಉತ್ಪಾದಿಸಿದ್ದೆಲ್ಲಾ ಮಾರಾಟವಾಗಬೇಕು, ಬೇಡಿದಷ್ಟೂ ಸರಕು ಒದಗಬೇಕು. ಹೀಗಾದಾಗ ಆ ವ್ಯವಸ್ಥೆ ಸಮತೋಲನವನ್ನು ಸಾಧಿಸಿದೆ ಎನ್ನಬಹುದು. ಇದೊಂದು ಆದರ್ಶಮಯ ಕಲ್ಪನೆ. ಕೊಳ್ಳುವವನ ಸಾಮರ್ಥ್ಯ ಸಶಕ್ತವೋ ದುರ್ಲಭವೋ, ಉತ್ಪಾದಿಸುವವ, ಮಧ್ಯವರ್ತಿ ವಿಪರೀತ ಲಾಭಕೋರನೆ, ಬೇಕಂತಲೇ ಪೂರೈಕೆಯನ್ನು ತಡೆ ಹಿಡಿದು, ಬೆಲೆ ಏರಿಸುತ್ತಾನೋ, ಬೇಡಿಕೆಯ ಅಂದಾಜು ಮಾಡಲಾಗದೆ, ಅಥವಾ ಅನಿರೀಕ್ಷಿತವಾಗಿ ಬೇಡಿಕೆ ಕುಸಿದು, ಬೇಕಂತಲೇ ಉತ್ಪಾದನೆ ಕಡಿದು, ಅಂದಾಜು ಮಾಡಲಾಗದೆ ಅಂದರೆ ಬೇಡಿಕೆ, ಪೂರೈಕೆ, ಉತ್ಪಾದನೆ, ಸರಬರಾಜು ವ್ಯವಸ್ಥೆಗಳನ್ನು ಕುರಿತ ಸಾಕಷ್ಟು ಸಮರ್ಥ ಮಾಹಿತಿ ವ್ಯವಸ್ಥೆ ಇಲ್ಲದೆ, ವಿಪರೀತ ಉತ್ಪಾದನೆ ಅಥವಾ ತೀರ ಕಡಿಮೆ ಉತ್ಪಾದನೆಯಾಗುವುದು ಹೀಗೆಲ್ಲಾ ಹಲವಾರು ಹಂತಗಳಲ್ಲಿ ಮಾರುಕಟ್ಟೆಯು ವಿಕೃತವಾಗಿ, ಎಲ್ಲ ಹಂತದಲ್ಲೂ ಎಲ್ಲರೂ ಅದರ ಕೆಟ್ಟಪರಿಣಾಮವನ್ನು ಅನುಭವಿಸುವಂತಾಗಬಹುದು. ಮನುಷ್ಯ ಸ್ವಭಾವ ಯಾವಾಗಲೂ ಸಕಾರಣವಾಗಿಯೇ ನಡೆದುಕೊಳ್ಳುವುದಿಲ್ಲ. ಬಾಜಿ ಕಟ್ಟುವುದು, ಅಪಾಯಕರ ಸಾಹಸ ಪ್ರವೃತ್ತಿ, ಆಸೆ ಬುರುಕುತನ, ಹೇಡಿತನ, ಹಿಂಜರಿಕೆ ಹೀಗೆಲ್ಲಾ ಮನುಷ್ಯ ಸಹಜ ಸ್ವಭಾವಗಳೇ.

**ಕೆ. ಎಸ್. ಪಾರ್ಥಸಾರಥಿ**

ಮುಕ್ತ ಮಾರುಕಟ್ಟೆಯಲ್ಲಿ ಆರ್ಥಿಕ ಮೂಲ ವಸ್ತುಗಳು ಸಮರ್ಥವಾಗಿ ವಿವಿಧ ಉದ್ದೇಶಗಳಲ್ಲಿ ತೊಡಗಿಕೊಳ್ಳುವುದು ಸಾಧ್ಯ ಎನ್ನುವುದು ಕೇವಲ ಪುಸ್ತಕಸ್ಥ ಆದರ್ಶ ಕಲ್ಪನೆಯಾಗಿ ಉಳಿದುಕೊಂಡಿದೆ. ಹಲವು ರೀತಿಯಲ್ಲಿ ಬಲಶಾಲಿಯಾದ ವ್ಯಕ್ತಿ, ಉದ್ಯಮಿ ಅಥವಾ ಅವರ ಒಕ್ಕೂಟ ಮಾರುಕಟ್ಟೆಯ ಪ್ರಕ್ರಿಯೆಯನ್ನು ಅಸಹಜವಾಗಿ ನಿಯಂತ್ರಿಸಿ, ತಮಗೆ ಮಾತ್ರ ವಿಪರೀತ ಲಾಭ ತಂದುಕೊಡುವ ರೀತಿಯಲ್ಲಿ ಮಾರುಕಟ್ಟೆ ವರ್ತಿಸಿ, ಏಕಸ್ವಾಮ್ಯಗಳ ಸೃಷ್ಟಿಯಾಗುತ್ತಿರುವುದು ಅರ್ಥ ಶಾಸ್ತ್ರದಲ್ಲಿರುವವನಿಗೂ ಅನುಭವ ವೇದ್ಯ. ಏಕಸ್ವಾಮ್ಯವು ಪ್ರಜಾಪ್ರಭುತ್ವ ವಿರೋಧಿ ಹಾಗೂ ಮುಕ್ತಮಾರುಕಟ್ಟೆ ತತ್ವ ವಿರುದ್ಧವಾದುದು. ಮುಕ್ತಮಾರುಕಟ್ಟೆಯ ಪೈಪೋಟಿಯಲ್ಲಿ ಕೇವಲ ಬಲಶಾಲಿಗಳೆ ಉಳಿದು, ಏಕಸ್ವಾಮ್ಯ ಉಂಟಾಗುತ್ತದೆ. ಇಲ್ಲಿ ಬಲಶಾಲಿ ಪದಕ್ಕೆ ಬಹಳ ವಿಸ್ತಾರವಾದ, ಶ್ಲಾಘನೀಯ ವಲ್ಲದ ಅರ್ಥವ್ಯಾಪ್ತಿ ಇದೆ.

ಮುಕ್ತ ಮಾರುಕಟ್ಟೆ ಅಂದರೆ ಹೀಗೆ : ಅಲ್ಲಿ ಸರ್ಕಾರದ, ವ್ಯಕ್ತಿಗಳ, ಸಂಸ್ಥೆಗಳ ಯಾವ ನಿಯಂತ್ರಣವೂ ಯಾರ ಮೇಲೂ ಇರುವುದಿಲ್ಲ. ಮುಕ್ತ 'ಪೈಪೋಟಿ' ಅಲ್ಲಿ ಇದ್ದು, ಕೊಳ್ಳುವವನಿಗೆ ಸರಿಯಾದ ಬೆಲೆಗೆ ಸರಕು ಸಾಕಷ್ಟು ಸಿಗುತ್ತದೆ. ಮಾರುವವನಿಗೂ ಸರಿಯಾದ ಲಾಭ ತರುವ ಅಂದರೆ ಅತೀ ಹೆಚ್ಚು ಅಥವಾ ಅತೀ ಕಡಿಮೆ ಇಲ್ಲದ ಲಾಭಕಾರಕ ಉದ್ಯಮವಾಗಿರುತ್ತದೆ. ಕೊಳ್ಳುವವನಿಗೆ ಸಾಕಷ್ಟು ಪ್ರಮಾಣದಲ್ಲಿ, ಸರಿಯಾದ ಬೆಲೆಯಲ್ಲಿ ಸರಕು ದೊರೆಯುತ್ತದೆ. ಮುಕ್ತ ಪೈಪೋಟಿ ಎಂದರೆ ಹಲವಾರು ವರ್ತಕರು ಸರಿಯಾದ ಬೆಲೆಗಳ ಮೂಲಕ ಕೊಳ್ಳುವವರನ್ನು ತಮ್ಮ ಕಡೆ ಆಕರ್ಷಿಸಲು ಬಹಿರಂಗವಾಗಿ ಪ್ರಯತ್ನಿಸುತ್ತಾರೆ. ಅಲ್ಲಿ ಯಾವೊಬ್ಬನೂ ಇಡೀ ಮಾರುಕಟ್ಟೆಯನ್ನು ಪ್ರಭಾವಿಸುವಷ್ಟು ಶಕ್ತಿಶಾಲಿಯಾಗಿರುವುದಿಲ್ಲ, ಏಕಸ್ವಾಮ್ಯ ಇರುವುದಿಲ್ಲ. ಇಲ್ಲಿ ಬಳಕೆದಾರ ಅಶಕ್ತನಲ್ಲ. ಯಾವುದೇ ಮುಚ್ಚು ಮರೆಯಿಲ್ಲ. ಯಾರೂ ನಾಶವಾಗುವುದಿಲ್ಲ. ಅವನು ಸಮರ್ಥನಿರಬೇಕು ಅಷ್ಟೆ. ಇದು ಸೈದ್ಧಾಂತಿಕ ವಿವರಣೆ. ಬಂಡವಾಳ ವ್ಯವಸ್ಥೆಯಲ್ಲಿ ಆರ್ಥಿಕ ಮೂಲವಸ್ತುಗಳು, ಉತ್ಪಾದಕ ಸರಕುಗಳು ಮುಕ್ತ ಮಾರುಕಟ್ಟೆಯಲ್ಲಿ, ಮುಕ್ತ ಪೈಪೋಟಿಯಲ್ಲಿ, ಯಾವಯಾವ ವಿಭಾಗಕ್ಕೆ ಎಷ್ಟೆಷ್ಟು ಎಂದು ತಮ್ಮಷ್ಟಕ್ಕೆ ತಾವೆ ಹಂಚಿಕೊಳ್ಳುತ್ತವೆ. ಸಮಾಜವಾದೀಯ ಅಥವಾ ಯೋಜನಾಬದ್ಧ ವ್ಯವಸ್ಥೆಯಲ್ಲಿ, ಸರ್ಕಾರ ಅಥವಾ ಒಂದು ಕೇಂದ್ರೀಯ ಸಂಸ್ಥೆ ಈ ಉತ್ಪಾದಕ ಸರಕುಗಳನ್ನು, ಪೂರ್ವಯೋಜಿತ ಸಾಮಾಜಿಕ ರಾಜಕೀಯ ಉದ್ದೇಶಗಳ ಅನ್ವಯ ನಿರ್ದೇಶಕವಾಗಿ ಹಂಚಲಾಗುತ್ತದೆ. ಇಂತಿಂಥವನ್ನು ಇಷ್ಟಿಷ್ಟು ಉತ್ಪಾದಿಸಬೇಕು, ಇಂತಿಂಥವರಿಗೆ ಇಷ್ಟಿಷ್ಟು ಹಂಚಬೇಕು ಮುಂತಾಗಿ ನಿರ್ದೇಶಿಸುತ್ತದೆ ಯೋಜನೆ. ಈ ಎರಡೂ ಸಿದ್ಧಾಂತದ ಮಾತುಗಳು.

ಅರ್ಥಶಾಸ್ತ್ರದಲ್ಲಿ ಇಂಗ್ಲಿಷಿನಲ್ಲಿ ಬಳಕೆಯಾಗುವ ಕೆಲವು ಮಾರುಕಟ್ಟೆಗೆ ಸಂಬಂಧಪಟ್ಟ ಪದಗಳು : ಮಾರ್ಕೆಟ್, ಮಾರ್ಕೆಟಬಲ್ ಸೆಕ್ಯೂರಿಟಿ, ಮಾರ್ಕೆಟ್ ಅಕ್ಸೆಸ್, ಮಾರ್ಕೆಟ್ ಕ್ಯಾಪಿಟಲೈಸೇಷನ್, ಮಾರ್ಕೆಟ್ ಕ್ಲಿಯರಿಂಗ್, ಮಾರ್ಕೆಟ್ ಕಾಂಡಕ್ಟ್, ಮಾರ್ಕೆಟ್ ಇಕಾನಮಿ, ಮಾರ್ಕೆಟ್ ಎಂಟ್ರಿ, ಎಂಟ್ರಿ ಡೆಟರೆನ್ಸ್, ಫ್ರೀಎಂಟ್ರಿ, ಹಿಟ್ ಅಂಡ್ ರನ್ ಎಂಟ್ರಿ, ಇನ್ನೊಸೆಂಟ್ ಎಂಟ್ರಿ ಬ್ಯಾರಿಯರ್ಸ್, ಎಂಟ್ರಿ ಬ್ಯಾರಿಯರ್ಸ್, ಸ್ಟ್ರ್ಯಾಟೆಜಿಕ್ ಎಂಟ್ರಿ ಡೆಟರೆನ್ಸ್, ಮಾರ್ಕೆಟ್ ಈಕ್ವಿಲಿಬ್ರಿಯಂ, ಮಾರ್ಕೆಟ್ ಫೆಲ್ಯೂರ್, ಮಾರ್ಕೆಟ್ ಫೋರ್ಸಸ್, ಗೇಮ್ ಥಿಯರಿ. ಪ್ಯಾರಿಟಿ ಪ್ರಿನ್ಸಿಪಲ್ಸ್ ಮಾರ್ಕೆಟಿಂಗ್, ಮಾರ್ಕೆಟ್ ಮೇಕರ್, ಮಾರ್ಕೆಟ್ ಪವರ್, ಮಾರ್ಕೆಟ್ ಪ್ರೈಸಸ್, ಮಾರ್ಕೆಟ್ ರಿಸ್ಕ್, ಮಾರ್ಕೆಟ್ ಷೇರ್, ಮಾರ್ಕೆಟ್ ಸ್ಟ್ರಕ್ಚರ್, ಇನ್ನೂ ಹಲವಾರು ಪದಪುಂಜಗಳು. ಇವುಗಳ ಅರ್ಥಗಳನ್ನು ದಕ್ಕಿಸಿಕೊಂಡು, ಕನ್ನಡದಲ್ಲಿ ಪರ್ಯಾಯ ಪದಗಳನ್ನು ಸೃಷ್ಟಿಸಿಕೊಂಡು, ಕನ್ನಡದಲ್ಲಿ ಬೂರ್ಷ್ವಾ ಜಗತ್ತಿನ ಮಾರುಕಟ್ಟೆಯ ಸಿದ್ಧಾಂತವನ್ನು ಹೇಳಬೇಕಾದರೆ ಒಂದು ಇಡೀ ಹೊತ್ತಿಗೆ ಬೇಕು.

ಮಾರುಕಟ್ಟೆ ಸುಲಭ ಸಾಫ್ ಸೀದಾ ವಿಷಯವಲ್ಲ. ಮಾರುಕಟ್ಟೆಗೆ ಎಲ್ಲವನ್ನೂ ಬಿಡಿ ಅನ್ನುವವರ ಹುನ್ನಾರ ಇದರಿಂದ ಸ್ಪಷ್ಟವಾದೀತು. ಮಾರ್ಕೆಟ್ ಫಾರ್ ಲೆಮನ್ಸ್ ಎಂಬ ಒಂದು ಪದಪುಂಜವಿದೆ. ಅದರ ಅರ್ಥ ಹೀಗೆ : ಎಲ್ಲಾ ನಿಂಬೆ ಹಣ್ಣುಗಳೂ ಒಂದೇಥರ ಮೇಲ್ನೋಟಕ್ಕೆ ಕಂಡರೂ, ಕೊಂಡ ಮೇಲೇನೇ ಅದರ ಗುಣ ಗೊತ್ತಾಗುವುದು. ಅಂದರೆ ಮೋಸಹೋದ ಅನುಭವ ಖಾತರಿ. ಹಳೆಯ ಕಾರು ಕೊಂಡಾಗ, ಮಾರಿದಾಗ ಈ ಅನುಭವ ಆಗುತ್ತದೆ. ಯಾವಾಗಲೂ ಸಂಪೂರ್ಣ ತೃಪ್ತಿ ಕೊಡದು. ನಮ್ಮ ಮ್ಯೂಚುಯಲ್ ಫಂಡ್ ಮಾರುಕಟ್ಟೆ ಇದೇ ಅನುಭವದ್ದು ಅಲ್ಲವೆ ?

ಮುಕ್ತ ಮಾರುಕಟ್ಟೆಯ ಬೂರ್ಷ್ವಾ ಬಂಡವಾಳ ವ್ಯವಸ್ಥೆ ಈಗಷ್ಟೆ ಮಾರುಕಟ್ಟೆಯನ್ನು ಜಾಗತಿಕವಾಗಿ ಅಸ್ತವ್ಯಸ್ತ ಮಾಡಿ, ನಾಚಿಕೆ ಇಲ್ಲದೆ ಸರ್ಕಾರದ ಮಧ್ಯಪ್ರವೇಶವನ್ನು

ಒತ್ತಾಯಿಸಿ, ಬದುಕುಳಿಯಿತು. ಇಂದಿನ ಮಾರುಕಟ್ಟೆ ಅನಾಯಕ. ಅದನ್ನು ನಿಯಂತ್ರಿಸದೆ ಪ್ರಜಾಪ್ರಭುತ್ವ ವ್ಯವಸ್ಥೆ ಉಳಿಯಲಾರದು. ಬಹುರಾಷ್ಟ್ರೀಯ ಏಕಸ್ವಾಮ್ಯಗಳನ್ನು ಸೃಷ್ಟಿಸುತ್ತಾ ಬೆಳೆಯುತ್ತಿರುವ ಬಂಡವಾಳ ವ್ಯವಸ್ಥೆಯನ್ನು ನೋಡಿ, ಅದರ ಅಧ್ವರ್ಯು ಆ್ಯಡಂ ಸ್ಮಿತ್ ಮುಮ್ಮಲ ಮರುಗಿಯಾನು. ಅವನು ಹೇಳಿದ ಬಂಡವಾಳ ವ್ಯವಸ್ಥೆಯಲ್ಲಿ, ಸಂಪೂರ್ಣ ಪ್ರಜಾಪ್ರಭುತ್ವ, ಮುಕ್ತ ಮಾರುಕಟ್ಟೆ, ಮುಕ್ತ ಪೈಪೋಟಿ, ಮುಕ್ತ ಉದ್ಯಮ ಎಲ್ಲ ಇದ್ದುವು. ಆದರೆ ಅವನು ಜಾಗತಿಕವಾಗಿ ಅಂದು ಯೋಚಿಸಿದನೆ? ಅವನ ದೇಶ ಇಂಗ್ಲೆಂಡ್ ವಸಾಹತುಗಳನ್ನು ಆಕ್ರಮಿಸಿಕೊಂಡು, ಅಲ್ಲಿಂದ ಸಂಪತ್ತು ಲೂಟಿ ಮಾಡಿ ತಂದು ತನ್ನ ಕೈಗಾರಿಕಾ ಕ್ರಾಂತಿಯ ಅಡಿಪಾಯವನ್ನು ನಿರ್ಮಿಸಿಕೊಳ್ಳುತ್ತಿದ್ದಾಗ ಅದು ಅವನಿಗೆ ಶೋಷಣೆಯಾಗಿ ಕಾಣಲಿಲ್ಲ. ಇಂಗ್ಲೆಂಡಿನ ಜನ ಸುಖವಾಗಿದ್ದು, ಪ್ರಜಾಪ್ರಭುತ್ವದ, ಕವಿತೆ, ನಾಟಕಗಳ ಚಿಂತೆಯಲ್ಲಿ ತೊಡಗಿದ್ದರಲ್ಲಾ! ಸ್ವಾತಂತ್ರ್ಯದ ಮೇಲೆ ಸಿದ್ಧಾಂತಗಳನ್ನು ತುಂಬಿದ ಹೊಟ್ಟೆಯಿಂದ ರಚಿಸಿದ ಸಮಯ ಅದು. ಇನ್ನೊಂದು ವಿಷಯ ಹೇಳಿ ಮಾರುಕಟ್ಟೆ ಕುರಿತ ಅಷ್ಟೇನೂ ಸರ್ವಾಂಗೀಣವಲ್ಲದ ಈ ಟಿಪ್ಪಣಿಯನ್ನು ನಿಲ್ಲಿಸಬಹುದು. ನಾವೆಲ್ಲ ಇತ್ತೀಚೆಗೆ ಕೇಳಿಸಿಕೊಂಡಿರುವ ಮಾರುಕಟ್ಟೆಯ ಪದ ಸಬ್ ಪ್ರೈಂ ಮಾರುಕಟ್ಟೆಯ ಬಿಕ್ಕಟ್ಟು. ಮಾರುಕಟ್ಟೆಯಲ್ಲಿ ಈಗಾಗಲೆ ಗಮನಿಸಿದಂತೆ ಕೇವಲ ಭೌತಿಕವಾದ, ಮುಟ್ಟಿ ನೋಡಬಹುದಾದ ಸರಕುಗಳು ಮಾತ್ರ ಇಲ್ಲ. ಅಲ್ಲಿ ಭ್ರಾಮಕ, ಊಹಾಪೋಹದ ಸೆಕ್ಯೂರಿಟಿ ಎಂದು ಹೇಳುವ ಬಾಂಡು, ಪತ್ರಗಳು, ಭವಿಷ್ಯ ಮಾರುಕಟ್ಟೆ, ಪ್ರತ್ಯುತ್ಪನ್ನ ಮಾರುಕಟ್ಟೆ ಮುಂತಾದುವೆಲ್ಲಾ, ಹಣಕಾಸು ಪ್ರಪಂಚದ ಮಾರುಕಟ್ಟೆಗಳೂ ಇವೆ. ಇವು ನೇರವಾಗಿ ಬೇಳೆ, ಬಟ್ಟೆ, ತರಕಾರಿಯಂಥ ಸರಕುಗಳ ಮಾರುಕಟ್ಟೆಯಲ್ಲ. ಆದರೂ ಅವುಗಳನ್ನೆಲ್ಲ ಪ್ರಭಾವಿಸುವ, ಅವಕ್ಕೆ ಅಗತ್ಯವಾದ ಹಣದ ಹೊಳೆಯನ್ನು ಬಂಡವಾಳವನ್ನು ಹರಿಸುವ, ತಡೆಗಟ್ಟುವ, ಹಾಳುಗೆಡಹುವ ಮಾರುಕಟ್ಟೆ. ಸಬ್ ಪ್ರೈಂ – ಮುಖ್ಯ-ಮೂಲದ ಆಧಾರಿತ ಮರು ಪತ್ರಗಳು – ಒಂದು ಆನ್ ಡಿಮಾಂಡ್ ಪತ್ರವಿದೆ ಎಂದರೆ, ಆ ಪತ್ರವನ್ನೇ ಅಡವಾಗಿಟ್ಟುಕೊಂಡು ಮತ್ತೊಬ್ಬ ಇನ್ನಷ್ಟು ಹಣ ಸಾಲ ನೀಡಿದರೆ, ಈ ಎರಡನೆಯದು ಸಬ್ ಪ್ರೈಂ ವ್ಯಾಪಾರ. ಮನೆ ಕೊಳ್ಳಲು, ಕಟ್ಟಲು ಸಾಲ ನೀಡಿದರು. ಆ ಮನೆಯ ಮಾರುಕಟ್ಟೆಯ ಬೆಲೆಯೇ ಸಾಲಕ್ಕೆ ಆಧಾರ. ಮನೆಯ ಬೆಲೆ ಮಾರುಕಟ್ಟೆಯಲ್ಲಿ ಯಾವಾಗಲೂ ಏರುತ್ತಲೇ ಹೋಗುತ್ತದೆ ಎಂಬ ವಿಶ್ವಾಸ ಅದರ ಆಧಾರ. ಈ ಸಾಲ ಪತ್ರ ಒಂದು ವಿಶ್ವಾಸಾರ್ಹ ಪತ್ರ. ಅದನ್ನು ವಿಶ್ವಾಸಾರ್ಹತೆಯ ಪತ್ರಕ್ಕಾಗಿ, ಅದರಲ್ಲಿ ಹಣ ಹೂಡುವುದಕ್ಕಾಗಿ ಕಾಯುತ್ತಿರುವ ಸ್ಥಳೀಯ, ವಿದೇಶೀ ಹೂಡಿಕೆದಾರರು, (ಅದರಲ್ಲಿ ವಿದೇಶೀ ಸರ್ಕಾರಗಳು ಸೇರಿವೆ) ಆ ಪತ್ರವನ್ನು ಒಂದು ಲೆಕ್ಕದಲ್ಲಿ ಕೊಳ್ಳುವುದು. ಈಗ ಸಾಲವನ್ನು ಮನೆಯ ಮಾಲಿಕ ಮರುಪಾವತಿ ಮಾಡಲಿಲ್ಲ. ಅವನಿಗೆ ಪಾವತಿ ಮಾಡುವ ಶಕ್ತಿ ಇದೆಯೇ ಎಂದು ಪರೀಕ್ಷಿಸಿಯೇ ಇರಲಿಲ್ಲ. ಮರುಪಾವತಿ ಮಾಡದೆ ಆದರ ಪತ್ರ, ಅದರ ಆಧಾರದ ಮರುಪತ್ರ ಬೆಲೆ ಕಳೆದುಕೊಂಡುವು. ವಿಶ್ವಾಸ ಕಳೆದುಕೊಂಡವರು ಒಂದಿಷ್ಟು ನಷ್ಟವಾದರೂ ಸರಿಯೆ ತಮ್ಮ ಕೈಯಲ್ಲಿರುವ ಪತ್ರವನ್ನು ಹಿಂತಿರುಗಿಸಲು ಮುಂದಾದುದು ಒಂದು ಕಡೆ. ಮತ್ತೊಂದು ಕಡೆ ಸಾಲಕೊಟ್ಟವರು ಮನೆಯನ್ನು ತಮ್ಮ ಸುಪರ್ದಿಗೆ ತೆಗೆದುಕೊಂಡು ಮಾರುಕಟ್ಟೆಯಲ್ಲಿ ಮಾರಲು ಇಟ್ಟರು. ಆದರೆ ಬೇಡಿಕೆಗೆ ಮೀರಿದಷ್ಟು ಮನೆಗಳು ಲಭ್ಯವಾಗಿದ್ದುದು ಹಾಗೂ ಈಗಾಗಲೇ ಇನ್ನೂ ಹಲವು ವಿಭಿನ್ನ ಕಾರಣಗಳಿಂದಾಗಿ ನಿರುದ್ಯೋಗ, ಬೆಲೆ ಏರಿಕೆ, ಹಣದ ಅಪಮೌಲ್ಯಕ್ಕೆ ಒಳಗಾಗಿದ್ದ ಬಳಕೆದಾರ ಇಂಥ ಮನೆಗಳು ಆಕರ್ಷಕವಾಗಿದ್ದರೂ ಕೊಳ್ಳುವ ಸಾಮರ್ಥ್ಯವೇ ಇಲ್ಲದೆ, ಅಂಥವರಿಗೆ ಹೊಸ ಸಾಲ ನೀಡಲು ಅಂಥ ಬ್ಯಾಂಕುಗಳಲ್ಲಿ ನಗದು ಇಲ್ಲದೆ ಮನೆಯ ಮಾರುಕಟ್ಟೆ ಪಾತಾಳಕ್ಕೆ ಕುಸಿಯಿತು. ಮನೆಯ ರೂಪದಲ್ಲಿ ಬೆಲೆಬಾಳುವ ಆಸ್ತಿ ಇದ್ದರೂ ಅದು ನಗದಾಗಲಿಲ್ಲ (ಲಿಕ್ವಿಡಿಟಿ). ಬಿಕ್ಕಟ್ಟು, ಹೆದರಿಕೆ, ಸಮರ್ಥಿಸಲಾಗದ ಸಾಮೂಹಿಕ ಪ್ರತಿಕ್ರಿಯೆಗಳೂ ಎಲ್ಲ ಸೇರಿ ಅಂತರರಾಷ್ಟ್ರೀಯವಾಗಿ ಈ ಜಾಲದಲ್ಲಿ ಸಿಕ್ಕಿಕೊಂಡವರೂ ಸೇರಿ ಎಲ್ಲರಿಗೂ ಇದರ ಬಿಸಿ ತಗುಲಿತು. ಈ ಸಬ್ ಪ್ರೈಂ ಮಾರುಕಟ್ಟೆ, ಯಾರ ನಿಯಂತ್ರಣಕ್ಕೂ ಒಳಪಡದಿದ್ದು, ಸಂಬಂಧಪಡದವರಿಗೂ ಬಿಕ್ಕಟ್ಟು ಒಡ್ಡಿತು.

ಇದರಲ್ಲಿ ಮತ್ತೆರಡು ಭಾಗಿಗಳಿದ್ದಾರೆ. ಕ್ರೆಡಿಟ್ ರೇಟಿಂಗ್ ಎಂಬ ಸಂಸ್ಥೆಗಳು ಮಾರುಕಟ್ಟೆಯಲ್ಲಿ ಹುಟ್ಟಿಕೊಂಡಿವೆ – ನಮ್ಮ ಕ್ರಿಸಿಟ್ ಥರದವು. ಇವು ಹಲವಾರು ವಿಷಯಗಳನ್ನು ಗಮನಿಸಿ ವಿವಿಧ ಪತ್ರಗಳ ಬಾಂಡುಗಳ ಇತ್ಯಾದಿಗಳ ವಿಶ್ವಾಸಾರ್ಹತೆಯ ಬಗ್ಗೆ ಬೆಲೆ ನೀಡುತ್ತವೆ. ಪರವಾಗಿಲ್ಲ, ಚೆನ್ನಾಗಿವೆ, ತುಂಬಾ ಚೆನ್ನಾಗಿವೆ, ಚೆನ್ನಾಗಿಲ್ಲ, ಸ್ವಲ್ಪ ಕಡಿಮೆ ಹೀಗೆಲ್ಲಾ ಇವುಗಳಿಗೆ ಇವುಗಳ ಮೌಲ್ಯಮಾಪನ ಸಾಮರ್ಥ್ಯಕ್ಕೆ, ಅವುಗಳು ಬಾಜಿ ಆಡುತ್ತಿಲ್ಲ ಎನ್ನುವುದಕ್ಕೆ ಮನ್ನಣೆ ನೀಡುವ ವ್ಯವಸ್ಥೆ ಇಲ್ಲ. ಅವುಗಳದ್ದೂ ಮುಕ್ತ ಮಾರುಕಟ್ಟೆಯ ಅನಾಯಕತೆ. ಇವು ಈ ಸಬ್ ಪ್ರೈಂ ಪತ್ರಗಳ ಬೆಲೆಯನ್ನು ವಿಶ್ವಾಸಾರ್ಹವೆಂದು ಅತಿ ಹೆಚ್ಚಿನ ಅಂಕ ನೀಡಿದ್ದವು. ಅದನ್ನು ಹೂಡಿಕೆದಾರರು ನಂಬಿದ್ದರು. ಬ್ಯಾಂಕುಗಳು ಬ್ಯಾಂಕಿನ ವ್ಯವಹಾರ ಮಾಡುವುದಕ್ಕೆ ಸೀಮಿತವಾಗಬೇಕು. ಆದರೆ ಇತ್ತೀಚಿಗೆ ಇವುಗಳೂ ತಾವೇ ಹೂಡಿಕೆದಾರರೂ ಆದರು. ಇಲ್ಲಿ ವೈರುಧ್ಯಮಯ ಹಿತಾಸಕ್ತಿಗಳು ಕೆಲಸ ಮಾಡಿ, ಯಥಾರ್ಥವಾದ ತೀರ್ಮಾನಕ್ಕೆ ಧಕ್ಕೆ ಬರುತ್ತದೆ. ಹೀಗಾಗಿ ಏಕಕಾಲದಲ್ಲಿ ಮಾರುಕಟ್ಟೆ, ಬ್ಯಾಂಕುಗಳು, ಕ್ರೆಡಿಟ್ ರೇಟಿಂಗ್ ಸಂಸ್ಥೆ ಮುಂತಾದುವೆಲ್ಲ ವಿಶ್ವಾಸ ಕಳೆದುಕೊಂಡವು. ಇಷ್ಟೆಲ್ಲಾ ತಿಳಿದ ಮೇಲೆ ಮಾರುಕಟ್ಟೆ, ಮುಕ್ತ ಮಾರುಕಟ್ಟೆ, ಮಾರುಕಟ್ಟೆಯ ಶಕ್ತಿಗಳು, ಮುಕ್ತ ಪೈಪೋಟಿ ಮುಂತಾದವೆಲ್ಲ ಹೇಗೆ ಮರುಳು ಮಾತುಗಳು ಎಂದು ಸ್ಪಷ್ಟ. ಮಾರುಕಟ್ಟೆ ಬೇಕು. ಅವುಗಳ ಮೇಲೆ ಸತತ ನಿಗಾ ಇಡಬೇಕು ಎನ್ನುವುದು ಸ್ಪಷ್ಟವಾಗುತ್ತದೆ. ಮಾರುಕಟ್ಟೆ ಎಂದರೆ ಜನಸಮೂಹದಿಂದ, ಯಾವ ನೈತಿಕ ಕಟ್ಟುಪಾಡೂ ಇಲ್ಲದೆ, ನಿರಂತರ ಬಂಡವಾಳ ಸಂಗ್ರಹಿಸುವ ಮಾಧ್ಯಮ ಎಂದಾದರೆ ಅದು ಬೂರ್ಷ್ವಾ ವ್ಯವಸ್ಥೆಗೇ ಆಪತ್ತು ತರುತ್ತದೆ ಎನ್ನುವುದು ಪದೇಪದೇ ಸ್ಪಷ್ಟವಾಗಿದೆ. ಮಾರ್ಕೆಟ್ ಸಾಫ್‌ಸೀದ ಅಲ್ಲ ಅನ್ನುವುದನ್ನು ಸೂಚಿಸುವ ಮಾರುಕಟ್ಟೆಗೆ ಸಂಬಂಧಪಟ್ಟ ಈ ಪದಗಳನ್ನು ನೋಡಿ : ಎಂಟ್ರಿ ಡೆಟರೆನ್ಸ್, ಫ್ರೀಎಂಟ್ರಿ, ಹಿಟ್ ಅಂಡ್ ರನ್ ಎಂಟ್ರಿ, ಹಾಗೂ ಇನ್ನೊಸೆಂಟ್ ಎಂಟ್ರಿ. ಮಾರುಕಟ್ಟೆಗೆ ಒಬ್ಬ ಮಾರುವ ಸರಕುಳ್ಳವನು ಅಥವಾ ಕೊಳ್ಳುವವನು ಮುಕ್ತವಾಗಿ ಯಾವ ಅಡ್ಡಿಯೂ ಇಲ್ಲದೆ ಪ್ರವೇಶ ಮಾಡಬಲ್ಲನೆ ? ಅದಕ್ಕೆ ಇರುವ ಅಡಚಣೆಗಳ ಸ್ವರೂಪ ಎಂಥದು ಮುಂತಾದುವು, ಅಡಚಣೆ ಯಾಕೆ ಮಾಡುತ್ತಾರೆ, ಇವನ್ನೆಲ್ಲ ಈ ಪದಗಳೂ ಸೂಚಿಸುತ್ತವೆ. ಒಳ್ಳೆಯ ಅವಕಾಶಕ್ಕೆ ಕಾಯುತ್ತಿದ್ದು, ಮಾರುಕಟ್ಟೆಯ ಒಳಹೊಕ್ಕು ಅಪಾರ ಲಾಭ ಮಾಡಿಕೊಂಡು ದಿಢೀರನೆ ಹೊರಗೆ ಬರುವವರು – ರೈಡರ್ಸ್ – ದರೋಡೆಕೋರರಂಥವರು – ತೊಂಭತ್ತರ ದಶಕದಲ್ಲಿ ಪೂರ್ವಏಷ್ಯ ಷೇರು ಮಾರುಕಟ್ಟೆಯೊಳಗೆ ಜಾರ್ಜ್ ಸೋರೋಸ್ ಒಳಹೊಕ್ಕು ಅಸ್ತವ್ಯಸ್ತ ಮಾಡಿದ್ದು – ಇವೆಲ್ಲಾ ಏನು ಸೂಚಿಸುತ್ತವೆ ? ಮಾರುಕಟ್ಟೆ ಮುಕ್ತವೆನ್ನುವುದು ಬರೀ ಸುಳ್ಳು. ದರೋಡೆಕೋರರು, ಏಕಸ್ವಾಮಿಗಳು ಮಾರುಕಟ್ಟೆಯನ್ನು ಪ್ರತ್ಯಕ್ಷ ಪರೋಕ್ಷವಾಗಿ ನಿಯಂತ್ರಿಸುವುದಾದರೆ, ಸಾಮಾಜಿಕ ಹಿತದೃಷ್ಟಿಯಿಂದ ಕಾನೂನುಬದ್ಧವಾಗಿ ಒಂದಿಷ್ಟು ನಿಯಂತ್ರಿಸಿದರೆ ಫ್ರೀ ಎಂಟರ್‌ಪ್ರೈಸಸ್‌ನ ಸ್ವಾತಂತ್ರ್ಯಕ್ಕೇನೂ ಧಕ್ಕೆಯಾಗುವುದಿಲ್ಲವಷ್ಟೆ!

ಹಾಗೆಯೇ ಮಾರುಕಟ್ಟೆಗೆ ಬ್ಯಾರಿಯರ್ – ಅಡಚಣೆಗಳನ್ನು ಒಡ್ಡುತ್ತಾರೆ, ಒಡ್ಡ ಬೇಕಾಗುತ್ತದೆ. ಹಾಗೆ ಉದ್ದೇಶಿಸದೆಯೂ ಅಡೆಚಣೆಯಾಗುವ ವಾಣಿಜ್ಯನೀತಿಗಳು ತಲೆದೋರಬಹುದು. ವಿಶ್ವವ್ಯಾಪಾರ ಸಂಸ್ಥೆ ದೇಶದೇಶಗಳ ನಡುವೆ ಯಾವುದೇ ಅಡಚಣೆಗಳಿಲ್ಲದೆ ಮುಕ್ತ ವ್ಯಾಪಾರ ಬೇಕು ಎನ್ನುತ್ತದೆ. ಇಲ್ಲಿಯವರೆಗಿನ ಅಂತರರಾಷ್ಟ್ರೀಯ ವಾಣಿಜ್ಯ ಅರ್ಥಶಾಸ್ತ್ರದ ಅಭಿಪ್ರಾಯಕ್ಕೆ ವಿರುದ್ಧವಾದುದು ಇದು. ಎಲ್ಲ ದೇಶಗಳಿಗೂ ತಮ್ಮದೇ ಆದ ವಿಶಿಷ್ಟ ಸರಕು, ಸೇವಾಕ್ಷೇತ್ರಗಳಲ್ಲಿ ಮಿಕ್ಕವರಿಗಿಂತ ಕೆಲವು ಸೌಲಭ್ಯಗಳಿರುತ್ತವೆ. ಉದಾಹರಣೆಗೆ, ಎಲ್ಲರೂ ಶ್ರೀಗಂಧವನ್ನೋ, ಕಾಫಿಯನ್ನೋ ಬೆಳೆಯಲಾರರು. ಇದು ತಾಂತ್ರಿಕ ಜ್ಞಾನಕ್ಕೂ ಅನ್ವಯಿಸಬಹುದು. ಯಾರು ಮೊದಲು ಒಂದು ಸರಕನ್ನು ಕಂಡು ಹಿಡಿದರೋ, ಅಭಿವೃದ್ಧಿಪಡಿಸಿದರೋ ಅವರು ಅದನ್ನು ಪೇಟೆಂಟ್ ಮಾಡಿಕೊಂಡರೆ ಆಗ ಆ ಸರಕಿಗೆ ಈ ಸೌಲಭ್ಯ ದೊರೆಯುತ್ತದೆ. ಇಂಥ ಸರಕು ಸೇವೆಗಳ ಅದಲುಬದಲು ಅಗತ್ಯ ವ್ಯಾಪಾರಕ್ಕೆ ಅವಕಾಶ ಕಲ್ಪಿಸುತ್ತದೆ. ನಮ್ಮ ದೇಶದ ಕೃಷಿಕ್ಷೇತ್ರ ಮಿಕ್ಕವರೊಡನೆ ಪೈಪೋಟಿಗೆ ನಿಲ್ಲಲಾರದಷ್ಟು ದುರ್ಬಲವಾಗಿದ್ದರೆ, ಆಗ ಬೇರೆಯವರ ಕೃಷಿ ಉತ್ಪನ್ನಗಳನ್ನು ತಡೆಯಿಲ್ಲದೆ ಒಳಗೆ ಬರಲು ಬಿಟ್ಟರೆ ಅದು ನಮ್ಮ ಕೃಷಿಕ್ಷೇತ್ರವನ್ನೇ ನಾಶ ಮಾಡುತ್ತದೆ. ಹೀಗೆ ಹಲವಾರು ಕಾರಣಗಳಿಂದ ಮುಕ್ತವಾಗಿ ಅಂತರರಾಷ್ಟ್ರೀಯ ಸರಕುಗಳನ್ನು ಒಳಗೆ ಬಿಡಲು ಬರುವುದಿಲ್ಲ. ಒಂದು ಮಿತಿಯೊಳಗೆ ಹಾಗೂ ತೆರಿಗೆ ವಿಧಿಸಿ ನಿಯಂತ್ರಿಸುವುದು ರಾಷ್ಟ್ರೀಯ ಹಿತಕ್ಕೆ ಅಗತ್ಯವಾಗುತ್ತದೆ. ಕೇವಲ ವಾಣಿಜ್ಯ ಕಾರಣಕ್ಕೆ ಅಲ್ಲದೆ ರಾಜಕೀಯ ಕಾರಣಗಳಿಗೂ ಇಂಥ ಗೋಡೆಗಳನ್ನು ನಿಲ್ಲಿಸಿದಾಗ ಅದು ದೇಶ ದೇಶಗಳ ನಡುವೆ ಬಿಕ್ಕಟ್ಟು ಉಂಟುಮಾಡಿ, ಯುದ್ಧಕ್ಕೂ ಎಡೆಮಾಡಿಕೊಟ್ಟಿವೆ. ಟ್ರೇಡ್ ವಾರ್ – ವ್ಯಾಪಾರದ ಯುದ್ಧ ಎನ್ನುವುದು ಈ ಸಂದರ್ಭಕ್ಕೆ. ತಮ್ಮ ಸರಕುಗಳನ್ನು ಮಾರುವ ಸಲುವಾಗಿ ಹೊರಟವರು ವಸಾಹತು ಮಾಡಿಕೊಂಡರು ಅಂದು. ಇಂದು ಸರಕಾರಗಳ ಸಾರ್ವಭೌಮತೆಗೂ ಸವಾಲೆಸೆಯುವಷ್ಟು ಪ್ರಬಲವಾದ ಬಹುರಾಷ್ಟ್ರೀಯ ಕಂಪನಿಗಳು ತಮಗೆ ಬೇಕಾದ ಮಾರುಕಟ್ಟೆಗಳನ್ನು ಬೇಕಾದೆಡೆ ನಿರ್ಮಿಸಿಕೊಳ್ಳುತ್ತಿವೆ. ವಸಾಹತು ಇಲ್ಲದೆಯೇ ಬಡ ರಾಷ್ಟ್ರಗಳು ಇವುಗಳ ಅಧೀನವಾಗುವ ಪರಿಸ್ಥಿತಿ ಬರುತ್ತಿದೆ. ಹೀಗೆ 'ಮಾರುಕಟ್ಟೆ' ಎಂಬುದು ಆಧುನಿಕ ಬೂರ್ಷ್ವಾ ಅರ್ಥಶಾಸ್ತ್ರದ ಅಭ್ಯಾಸದ ಕೇಂದ್ರ ಎಂದು ತಿಳಿಯಬೇಕು.

ಕೆ. ಎಸ್. ಪಾರ್ಥಸಾರಥಿ
೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು-೫೬೨೧೫೭

ಹೊಸ ಓದು



### ಸಂಸ್ಕೃತಿ ಸಂಕಥನ

ಡಾ|| ವೀರೇಶ ಬಡಿಗೇರ

**ಪುಟ : xiv + ೨೬೨**

**ಬೆಲೆ : ರೂ. ೧೨೦**

**ಮಯ ಪ್ರಕಾಶನ,**

ಕಮಲಾಪುರ - ೫೮೩ ೨೨೧

ಇವು ಜಾನಪದ ಸಂಸ್ಕೃತಿಗಳ ಬಗ್ಗೆ ವಿಸ್ತಾರವಾಗಿ ಅಧ್ಯಯನ ಕೈಗೊಂಡು ನಡೆಸಿದ ಸಂಶೋಧನಾ ಬರಹಗಳು. ಜನಪದರ ಪ್ರಾದೇಶಿಕ ಭಿನ್ನತೆ, ಆಚರಣೆಗಳು, ನಂಬಿಕೆಗಳು ಇವನ್ನೆಲ್ಲ ಕೃತಿಯಲ್ಲಿ ದಾಖಲಿಸಿದ್ದು, ಇಂದಿನ ಫ್ಯಾಷನ್ ಯುಗದ ನಾಗರಿಕರಿಗೆ ಕಳೆದುಹೋದ ಸಂಸ್ಕೃತಿಯ ಪರಿಚಯ ನೀಡುತ್ತಿವೆ. ಒಂದು ಜನಾಂಗ ಒಂದು ಕಾಲದಿಂದ ಇನ್ನೊಂದಕ್ಕೆ ಬದಲಾಗುವ ಸಂದರ್ಭದಲ್ಲಿ ಬಿಟ್ಟುಕೊಡುವ ಹಾಗೂ ಗಳಿಸಿಕೊಳ್ಳುವ ಮೌಲ್ಯಗಳು ಯಾವ ನೆಲೆಯಲ್ಲಿದ್ದರೆ ಚೆನ್ನ ಎಂಬುದು ತುಂಬ ಮಹತ್ವದ ಸಂಗತಿ. ಇಲ್ಲಿ ಎಚ್ಚರ ತಪ್ಪಿದರೆ ನಿಷ್ಪ್ರಯೋಜಕ ಸಂಸ್ಕೃತಿಯೊಂದರ ಉದಯವಾಗುತ್ತದೆ. ಇಂಥ ಅರಿವಿನೊಂದಿಗೆ ಈ ಲೇಖನಗಳನ್ನೋದುವ ಅಗತ್ಯವಿದೆ. ಎಲ್ಲವೂ ಸಂಸ್ಕೃತಿಗಳನ್ನು ಪರಿಚಯಿಸುವ ಲೇಖನಗಳಾಗಿದ್ದು ''ಜಾನಪದ ಮತ್ತು ಜಾಗತೀಕರಣ'' ಎಂಬ ಲೇಖನ ಮಾತ್ರ ಸ್ವಲ್ಪ ಭಿನ್ನವಾಗಿ ಚಿಂತಿಸುತ್ತಿದೆ.



### ಎಂ. ಎಸ್. ಪುಟ್ಟಣ್ಣ ಹೇಮಲತರಾಜಕುಮಾರ ಚರಿತ್ರೆ (ಷೇಕ್ಸ್‌ಪಿಯರನ ಹ್ಯಾಮ್ಲೆಟ್ ನಾಟಕದ ರೂಪಾಂತರ)

ಸಂಗ್ರಹ-ಸಂಪಾದನೆ : ಡಾ|| ಎಚ್. ಎಸ್. ಸುಜಾತಾ

**ಪುಟ : xxxii + ೧೯೨**

**ಬೆಲೆ : ರೂ. ೨೦೦**

**ಸುಹಾಸ ಪ್ರಕಟಣೆಗಳು,** ೫೩, ೪ನೇ ಮುಖ್ಯರಸ್ತೆ, ಮಾರುತಿ ದೇವಸ್ಥಾನದ ಬೀದಿ, ಕುವೆಂಪು ನಗರ, ಮೈಸೂರು - ೫೭೦ ೦೦೯

'ಹ್ಯಾಮ್ಲೆಟ್' ಷೇಕ್ಸ್‌ಪಿಯರ್‌ನ ಬಹುಜನಪ್ರಿಯ, ಬಹು ಚರ್ಚಿತ ದುರಂತ ನಾಟಕ. ಇದರ ಕನ್ನಡ ಅನುವಾದಗಳು ಇತರರಿಂದ ಸಾಕಷ್ಟು ಬಂದಿವೆ. ಪಾಶ್ಚಾತ್ಯ ನಾಗರಿಕ ಅರಸು ಮನೆತನದಲ್ಲಿನ ನಿಷಿದ್ಧ ಸಂಬಂಧ, ಅನಾಚಾರ, ಕೊಲೆ ಇವೆಲ್ಲ ವಿಜೃಂಭಿಸುತ್ತ ಕೊನೆಗೆ ಎಲ್ಲವೂ ನಾಶವಾಗುವ ಕಥಾವಸ್ತುವಿದು. ಸುಮಾರು ನೂರೈವತ್ತು ವರ್ಷಗಳ ಹಿಂದೆ ಕೂಡ ಸಾಂಪ್ರದಾಯಿಕ ಭಾರತಕ್ಕೆ ಸಹಿಸಲಾಗದ ಕಥಾವಸ್ತು ಇರುವ 'ಹ್ಯಾಮ್ಲೆಟ್' ಅನ್ನು ಪುಟ್ಟಣ್ಣ ಅವರು ೧೯೨೦ರಲ್ಲಿಯೇ ರೂಪಾಂತರಿಸಿದ್ದರು. ಸೋಜಿಗವೆಂದರೆ ಇದುವರೆಗೂ ಈ ಕೃತಿ ಹಸ್ತಪ್ರತಿಯಲ್ಲಿಯೇ ಉಳಿದಿತ್ತೆಂದೂ, ತಮ್ಮ ಸಂಶೋಧನೆಯ ಕಾಲದಲ್ಲಿ ಕಣ್ಣಿಗೆ ಬಿದ್ದು ಇದೀಗ ಸಂಗ್ರಹಿಸಿ ಪ್ರಕಟಿಸಿದ್ದಾಗಿ ಡಾ|| ಎಚ್. ಎಸ್. ಸುಜಾತಾ ಹೇಳಿದ್ದಾರೆ. ಪುಟ್ಟಣ್ಣನವರು ಸಮಾಜದಲ್ಲಿ ಹಿರಿಯ ಸಜ್ಜನರಾಗಿದ್ದು, ವಿದ್ಯಾವಂತರೂ, ಬಹುಭಾಷಾ ಪ್ರವೀಣರೂ ಆಗಿದ್ದರು.

### ಕೊಂದವರಾರು (ನಾಟಕ)

ಪ್ರಸನ್ನ

**ಪುಟ : ೧೨೦**

**ಬೆಲೆ : ರೂ. ೧೦೦**

**ಒಂಟಿದನಿ ಪ್ರಕಾಶನ,** ಕವಿ-ಕಾವ್ಯ, ಹೆಗ್ಗೋಡು - ೫೭೭ ೪೧೭, ಸಾಗರ

ಕಳೆದ ಶತಮಾನದ ಸ್ವರಾಜ್ಯ ಚಳುವಳಿ ಮತ್ತು ಜಾಗತಿಕ ಮಹಾಯುದ್ಧಗಳ ಕಾಲದಲ್ಲಿ ನಮ್ಮೊಂದಿಗೆ ನೈತಿಕ ಬೆಂಬಲ, ನಾಯಕತ್ವ ನೀಡಲು ಮಹಾತ್ಮಾ ಗಾಂಧೀಜಿಯವರಿದ್ದರು. ಮಹಾತ್ಮರ ಅಹಿಂಸಾ ಮಾರ್ಗ ಸೂರ್ಯ ಮುಳುಗೋದೇ ಇಲ್ಲವೆಂದು ಭಾವಿಸಿದ್ದ ಸಾಮ್ರಾಜ್ಯಶಾಹಿಯೊಂದನ್ನು ಮಣಿಸಿದ್ದು ಸುಳ್ಳಲ್ಲ. ದೇಶ ವಿಭಜನೆಯನ್ನು ಸಾಧ್ಯವಾದಷ್ಟೂ ತಡೆಹಿಡಿಯಲು ಶಕ್ತಿಮೀರಿ ಪ್ರಯತ್ನಿಸಿದಾಗ ಅವರು ಮುಸ್ಲಿಮರನ್ನು ಓಲೈಸುತ್ತಿದ್ದಾರೆಂಬ ಮತಾಂಧ ಶಕ್ತಿಗಳ ಕೂಗು ಕೊನೆಗೆ ಅವರನ್ನೇ ಬಲಿ ತೆಗೆದುಕೊಂಡಿತು. ''ಈ ದೇಶದಲ್ಲಿ ಹಿಂದೂಗಳು ಹಾಗೂ ಮುಸಲ್ಮಾನರಿಗೆ ಒಟ್ಟಿಗೆ ಬದುಕೋದಲ್ಲದೆ ಬೇರೆ ದಾರಿಯಿದೆಯೇನು ?'' ಎನ್ನುವ ಈ ನಾಟಕದಲ್ಲಿನ ಗಾಂಧಿಪಾತ್ರದ ಮಾತುಗಳು ದೇಶ ವಿಭಜನೆಯಿಂದ ಉಂಟಾದ ಕೋಮು ವೈಮನಸ್ಯಗಳು ಇಂದಿಗೂ ಜೀವಂತವಾಗಿರುವುದರ ಕಡೆ ಕೈ ತೋರಿಸುತ್ತವೆ. ಪ್ರಸಿದ್ಧ ನಾಟಕಕಾರ ಪ್ರಸನ್ನರ ಈ ನಾಟಕ 'ಗಾಂಧಿ' ಹೆಸರಿನಲ್ಲಿ ೧೮ ವರ್ಷಗಳ ಹಿಂದೆಯೇ ದೆಹಲಿಯಲ್ಲಿ ಪ್ರದರ್ಶಿಸಲ್ಪಟ್ಟಿತ್ತು. ಗಾಂಧೀಜಿ ತಿರಸ್ಕರಿಸಿದ್ದ ಯಂತ್ರ ನಾಗರಿಕತೆ, ಅವರು ಪ್ರತಿಪಾದಿಸಿದ್ದ ಸ್ವಾವಲಂಬನೆ ಇವೆಲ್ಲ ಇಂದಿನ ಅಗತ್ಯಗಳಾಗಿ ಇಲ್ಲಿ ಪ್ರತಿಪಾದಿತವಾಗಿದೆ.



### ಗೀತಾ ನಾಗಭೂಷಣ

ಡಾ|| ಎನ್. ಗಾಯತ್ರಿ

**ಪುಟ : ೯೬** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೫೯, ಬೆಂಗಳೂರು - ೫೬೦ ೦೦೧

ತಮ್ಮ 'ಬದುಕು' ಕಾದಂಬರಿಗಾಗಿ 'ಕೇಂದ್ರ ಸಾಹಿತ್ಯ ಅಕಾಡೆಮಿ' ಪ್ರಶಸ್ತಿಗೆ ಅರ್ಹರೆಂದು ಗುರುತಿಸಲ್ಪಟ್ಟು ಕಡೆಗೂ ಆಯ್ಕೆಯಾದ ಮೊದಲ ಕನ್ನಡ ಲೇಖಕಿ ಶ್ರೀಮತಿ ಗೀತಾ ನಾಗಭೂಷಣ. ಸಾಧಿಸಿದ ಈ ಹಿರಿಮೆ ಅವರಿಗೆ ಸುಲಭವಾಗೇನೂ ದಕ್ಕಿಲ್ಲ. ಶೋಷಣೆಯ ದಳ್ಳುರಿಯಲ್ಲಿ ಸ್ವತಃ ಬೆಂದು, ಸುತ್ತಲೂ ಅಂಥವರನ್ನೇ ಕಣ್ಣಾರೆ ಕಂಡು ಶೋಷಿತ ಸ್ತ್ರೀಪರ ನಿಂತು ನಿರ್ಭಿಡೆಯಿಂದ ಬರೆಯತೊಡಗಿದರು. ದನಿಯೆತ್ತರಿಸಿ ಮಾತನಾಡಿದರು. ಸ್ತ್ರೀ ಶೋಷಣೆಯ ಅನೇಕ ಮಗ್ಗಲುಗಳನ್ನು ಪುರುಷ ನಿರ್ಮಿತ ವ್ಯವಸ್ಥೆಯೊಳಗೆ ಕಂಡು, ಯಾವ ಮುಲಾಜೂ - ಯಾರ ಭಯವೂ ಇಲ್ಲದೆ ಅದನ್ನು ತಮ್ಮ ಕೃತಿಗಳ ಮೂಲಕ ಬಯಲಿಗೆಳೆದರು. ಹೆಣ್ಣುಮಕ್ಕಳ ಕೆಲದೌರ್ಬಲ್ಯಗಳನ್ನು ಸಮಯ ಸಾಧಕರು ಹೇಗೆ ಬಳಸಿಕೊಳ್ಳುತ್ತಾರೆ ಎಂದು ಚಿತ್ರಿಸುವ ಅವರ ಕೃತಿಗಳನ್ನು ಕೆಲವು ಜಾಣ ಕುರುಡರಿನ್ನೂ ಓದಿಲ್ಲ; ಆ ದನಿಯನ್ನು ಕೆಲವು ಜಾಣ ಕಿವುಡರು ಕೇಳಿಸಿಕೊಂಡಿಲ್ಲ... ನವಕರ್ನಾಟಕ ಸಾಹಿತ್ಯ ಸಂಪದ ಮಾಲೆಗಾಗಿ ಗೀತಾ ಅವರನ್ನು ಪರಿಚಯಿಸಿದ ಡಾ|| ಎನ್. ಗಾಯತ್ರಿ ಮಹಿಳಾ ಪರ ಚಿಂತಕಿ. 'ಮಹಿಳೆ ಬಿಡುಗಡೆಯ ಹಾದಿಯಲ್ಲಿ' ಎಂಬ ಅಪೂರ್ವ ಕೃತಿ ಹಾಗೂ 'ಅಚಲ' ಪತ್ರಿಕೆಯ ಮೂಲಕ ಮಹಿಳೆಯಲ್ಲಿ ಜಾಗೃತಿ ಮತ್ತು ಆತ್ಮವಿಶ್ವಾಸ ತುಂಬಿದ್ದಾರೆ. ಹೆಣ್ಣಿಗೆ ಆರ್ಥಿಕ-ಸಾಮಾಜಿಕ ಭದ್ರತೆಗಾಗಿ ವಿದ್ಯೆ-ಉದ್ಯೋಗ ಅವಶ್ಯವೆಂದು ಅವರ ನಿಲುವು.



### ಬಾಧೆಯ ವೃಕ್ಷದಲ್ಲಿ ಬೋಧಿಯ ಪರಿಮಳ (ಗಝಲುಗಳ ಸಂಕಲನ)

ಜಂಬಣ್ಣ ಅಮರಚಿಂತ

**ಪುಟ : xx + ೧೦೪** **ಬೆಲೆ : ರೂ. ೧೦೦**

**ಪ್ರಗತಿ ಗ್ರಾಫಿಕ್ಸ್,** ನಂ. ೧೧೯, ೩ನೇ ಅಡ್ಡರಸ್ತೆ, ೮ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು - ೫೬೦ ೧೦೪

ಮೂಲತಃ ಉರ್ದುವಿನಲ್ಲಿ ರಚಿಸಲಾದ ಗಝಲ್ ಎಂಬ ಕಾವ್ಯಪ್ರಕಾರ ಅಲ್ಲಿಂದ ಇತರ ಭಾಷೆಗಳಿಗೂ ಬಂದಿದ್ದು ಜನಪ್ರಿಯವಾಗಿದೆ. ಅದರ ರಚನೆಗೆ ಸಾಂಪ್ರದಾಯಿಕ ಚೌಕಟ್ಟಿದ್ದು ಪ್ರಾರಂಭ, ಮುಕ್ತಾಯ, ಪ್ರಾಸಬದ್ಧತೆ ಮತ್ತು ಅರ್ಥವಂತಿಕೆಗಳು ಮೇಳೈಸಿರಬೇಕು ಮಾತ್ರವಲ್ಲ, ಶುಷ್ಕವಲ್ಲದ ಭಾವನೆಗಳು ಹಾಡುತ್ತಿರುವಾಗ ಸ್ಫುರಿಸುತ್ತಿರಬೇಕೆಂಬ ನಿಯಮಗಳು ಅದಕ್ಕಿವೆ. ಕವಿಯೇ ಗಾಯಕನಾದಾಗ ಮಾತ್ರ ಇಂತಹ ಅಪೂರ್ವ ಕ್ಷಣಗಳು ಉಂಟಾದಾವು. ಇಂತಹ ನಿಯಮಬದ್ಧ ಕಡ್ಡಾಯಗಳು ಉತ್ತಮ ಕಾವ್ಯಕ್ಕೆ ದಕ್ಕುವ ಸಾರ್ವತ್ರಿಕ ಮನ್ನಣೆಗಳಾದರೂ ಕಾವ್ಯವೊಂದು ಅಂತಹ ಉಸಿರುಗಟ್ಟುವ ಸ್ಥಳದಲ್ಲಿ ಬಹುಕಾಲ ಬಾಳಲಾರದು. ಬದಲಾದ ಸನ್ನಿವೇಶದಲ್ಲಿ ಸಂದರ್ಭಕ್ಕೆ ತಕ್ಕಂತೆ ಅಂದಂದಿನ ತುರ್ತುಗಳನ್ನು ಗಮನಿಸಿ ಅದು ಜನರನ್ನು ತಲುಪುತ್ತದೆ. ಗಝಲ್‌ನ ಆ ಕಾಲದ ಗುರಿಗಳೇನೇ ಇರಲಿ, ಈ ಕೃತಿಯಲ್ಲಿದು ಸಾಮಾಜಿಕ - ಆಧುನಿಕ ತುಡಿತಗಳಿಗೆ ಸ್ಪಂದಿಸಿ ಇಂದಿನ ಪ್ರಚಲಿತ ಸಮಸ್ಯೆಗಳಿಗೆ ಪರಿಹಾರ ಹುಡುಕುವಲ್ಲಿ ಯೋಚಿಸುತ್ತಿದೆ. ಕವಿ ಜಂಬಣ್ಣ ಅಮರಚಿಂತರು ಇಂದಿನ ಆತಂಕ - ತಲ್ಲಣಗಳನ್ನು ಗಮನಿಸಿ ಗಝಲ್‌ಗೆ ಹೊಸ ರೂಪವೊಂದನ್ನು ಕೊಟ್ಟು ಹೊಸ ಪ್ರಯೋಗ ಮಾಡಿದ್ದಾರೆನ್ನಬಹುದು.

– ಇಂದಿರಾಕುಮಾರಿ

೩೪/೧೧, ೨ನೇ ಕ್ರಾಸ್, ಬಾಂಬೆ ಡ್ರೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨

# ಭವಿಷ್ಯತ್ತನ್ನು ಅರಿತಿದ್ದ ವ್ಯಕ್ತಿ



**೧೯೪೬ರ ಏಪ್ರಿಲ್ ತಿಂಗಳಲ್ಲಿ ಬ್ರಿಟಿಷ್ ಸಚಿವ ಸಂಪುಟದ ನಿಯೋಗವೊಂದು ಭಾರತಕ್ಕೆ ಬಂದಿತ್ತು. ಅದರ ಕಲಾಪಗಳು ದೆಹಲಿ ಮತ್ತು ಶಿಮ್ಲಾಗಳಲ್ಲಿ ನಡೆಯುತ್ತಿದ್ದವು. ಆಗ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಮೌಲಾನಾ ಅಬುಲ್ ಕಲಾಂ ಆಜ್ಹಾದ್ ಲಾಹೋರ್‌ನ ಉರ್ದು ನಿಯತಕಾಲಿಕ 'ಚಟ್ಟಾನ್'ಗೆ ಸಂದರ್ಶನವೊಂದನ್ನು ನೀಡಿದ್ದರು. ಶೋರಿಶ್ ಕಾಶ್ಮೀರಿ ಎಂಬ ಪತ್ರಕರ್ತರೊಂದಿಗೆ ನಡೆದ ಆ ಸಂದರ್ಶನದ ವೇಳೆ ಭವಿಷ್ಯದ ಕುರಿತಾಗಿ ಮೌಲಾನಾ ಆಜ್ಹಾದ್ ಹೇಳಿದ ಕೆಲವು ಮಾತುಗಳು ಬೆಚ್ಚಿಬೀಳಿಸುವಂತಿವೆ. ಅವರ ಅನೇಕ ಭವಿಷ್ಯವಾಣಿಗಳು ನಿಜವಾಗಿರುವುದಕ್ಕೆ ನಂತರದ ಘಟನೆಗಳೇ ಸಾಕ್ಷಿಯಾಗಿವೆ.**

---

**ಶೋರಿಶ್ ಕಾಶ್ಮೀರಿ** : ಹಿಂದೂ, ಮುಸ್ಲಿಂ ಮತಭೇದಗಳು ಎಷ್ಟೊಂದು ತೀವ್ರತೆ ಪಡೆದುಕೊಂಡಿವೆ ಎಂದರೆ ಈಗ ಅದನ್ನು ಸಂಧಾನದ ಮೂಲಕ ಬಗೆಹರಿಸಲು ಅಸಾಧ್ಯವೆಂದಾಗಿದೆ. ಇಂತಹದೊಂದು ಪರಿಸ್ಥಿತಿಯಲ್ಲಿ ಪಾಕಿಸ್ತಾನ ರೂಪುದಾಳುವುದು ಅನಿವಾರ್ಯವೆಂದು ನಿಮಗನಿಸುವುದಿಲ್ಲವೇ ?

**ಮೌಲಾನಾ ಅಬುಲ್ ಕಲಾಂ ಆಜ್ಹಾದ್** : ಹಿಂದೂ, ಮುಸ್ಲಿಂ ಸಮಸ್ಯೆಗೆ ಪಾಕಿಸ್ತಾನವೇ ಪರಿಹಾರ ಎಂದಿದ್ದರೆ ಅದಕ್ಕೆ ನನ್ನ ಬೆಂಬಲವಿರುತ್ತಿತ್ತು. ಈಗ ಹಿಂದೂಗಳ ಒಂದು ವರ್ಗದ ಅಭಿಪ್ರಾಯ ಅದರ ಪರವಾಗಿ ನಿಲ್ಲುತ್ತಿದೆ. ವಾಯವ್ಯ ಸರಹದ್ದಿನ ಪ್ರಾಂತ, ಸಿಂಧ್, ಬಲೂಚಿಸ್ತಾನ, ಪಂಜಾಬಿನ ಅರ್ಧ ಭಾಗ ಮತ್ತು ಆ ಕಡೆ ಬಂಗಾಳದ ಅರ್ಧದಷ್ಟನ್ನು ಬಿಟ್ಟುಕೊಟ್ಟರೆ ಕೋಮು ಸಮಸ್ಯೆಗಳಿರದ ಮಿಕ್ಕ ದೊಡ್ಡ ಭಾಗವೊಂದು ತಮ್ಮದಾಗಲಿದೆಯೆಂದು ಅವರು ಭಾವಿಸುತ್ತಿದ್ದಾರೆ. ಮುಸ್ಲಿಂ ಲೀಗ್‌ನ ಪರಿಭಾಷೆಯಲ್ಲಿ ಹೇಳುವುದಾದರೆ ಈ ನೂತನ ಭಾರತ ವ್ಯಾವಹಾರಿಕವಾಗಿ ಮತ್ತು ಭಾವನಾತ್ಮಕವಾಗಿ ಒಂದು ಹಿಂದೂ ದೇಶವಾಗಲಿದೆ. ಇದು ಪ್ರಜ್ಞಾಪೂರ್ವಕವಾಗಿ ತೆಗೆದುಕೊಂಡ ನಿರ್ಧಾರದ ಪ್ರಕಾರವಲ್ಲ, ಅದರ ಸಾಮಾಜಿಕ ವಾಸ್ತವಗಳ ತಾರ್ಕಿಕ ಪರಿಣಾಮದಿಂದ ಆಗಲಿದೆ. ಶೇಕಡ ೯೦ರಷ್ಟು ಹಿಂದೂಗಳಿರುವ ಸಮಾಜವೊಂದು ತನ್ನ ಸಂಸ್ಕೃತಿ ಮತ್ತು ಮೌಲ್ಯಗಳೊಂದಿಗೆ ಅನಾದಿ ಕಾಲದಿಂದಲೂ ಬದುಕಿ ಬಾಳಿದೆ. ಇಂತಹ ಸಮಾಜವೊಂದು ಭಿನ್ನವಾಗಿ ಬೆಳೆಯುತ್ತದೆಂದು ನಿರೀಕ್ಷಿಸುವುದಾದರೂ ಹೇಗೆ ?

ಭಾರತೀಯ ಸಮಾಜದಲ್ಲಿ ಇಸ್ಲಾಮಿನ ನೆಲೆಯನ್ನು ಸ್ಥಾಪಿಸಿ ಅದಕ್ಕೆ ಪ್ರಬಲ ಅನುಯಾಯಿಗಳನ್ನು ಸೃಷ್ಟಿಸಿದ ಅಂಶಗಳಿಂದು ವಿಭಜನೆಯ ರಾಜಕೀಯದ ಬಲಿಪಶುಗಳಾಗಿವೆ. ಇದರಿಂದಾಗಿ ಹುಟ್ಟಿರುವ ಕೋಮು ದ್ವೇಷ ಇಸ್ಲಾಮನ್ನು ಬೋಧಿಸುವ, ಹಬ್ಬಿಸುವ ಸಾಧ್ಯತೆಯನ್ನು ಚಿವುಟಿಹಾಕಿದೆ. ಈ ಕೋಮು ರಾಜಕಾರಣದಿಂದ ಧರ್ಮಕ್ಕೆ ಅಪಾರ ಹಾನಿಯಾಗಿದೆ. ಮುಸ್ಲಿಮರು ಕುರಾನ್‌ನಿಂದ ದೂರವಾಗಿದ್ದಾರೆ. ಅವರು ಕುರಾನ್ ಮತ್ತು ಪೂಜ್ಯ ಪ್ರವಾದಿಯ ಜೀವನದಿಂದ ಪಾಠ ಕಲಿತಿರುತ್ತಿದ್ದರೆ, ಧರ್ಮದ ಹೆಸರಲ್ಲಿ ಕೋಮು ರಾಜಕಾರಣ ಮಾಡದಿರುತ್ತಿದ್ದರೆ ಇಸ್ಲಾಂನ ಬೆಳವಣಿಗೆ ನಿಂತುಹೋಗುತ್ತಿರಲಿಲ್ಲ. ಮೊಘಲರ ಆಳ್ವಿಕೆ ಕ್ಷೀಣಿಸಿದಾಗ ಭಾರತದಲ್ಲಿ ಮುಸ್ಲಿಮರ ಸಂಖ್ಯೆ ೨.೨೫ ಕೋಟಿಗೂ ಮಿಕ್ಕಿತ್ತು ಅಂದರೆ ಇಂದಿನ ಜನಸಂಖ್ಯೆಯ ಸುಮಾರು ಶೇಕಡ ೬.೫ರಷ್ಟಿತ್ತು. ನಂತರ ಅದು ಅಧಿಕವಾಗುತ್ತಾ ಬಂದಿತ್ತು. ಮುಸ್ಲಿಂ ರಾಜಕಾರಣಿಗಳು ಕೋಮು ಸಂಬಂಧಗಳನ್ನು ಕಹಿಯಾಗಿಸುವ ಹೊಲಸು ಭಾಷೆಯನ್ನು ಬಳಸದಿರುತ್ತಿದ್ದರೆ ಮತ್ತು ಬ್ರಿಟಿಷರ ಹಿತಾಸಕ್ತಿಯ ಏಜೆಂಟರಂತೆ ನಡೆದುಕೊಂಡ ಮತ್ತೊಂದು ವರ್ಗ ಉಭಯ ಸಮುದಾಯಗಳ ನಡುವಿನ ಕಂದಕವನ್ನು ಇನ್ನಷ್ಟು ಅಗಲಿಸುವ ಕೆಲಸ ಮಾಡದಿರುತ್ತಿದ್ದರೆ ಭಾರತದಲ್ಲಿ ಮುಸ್ಲಿಮರ ಸಂಖ್ಯೆ ಇನ್ನಷ್ಟು ಹೆಚ್ಚಾಗುತ್ತಿತ್ತು.

ಇಸ್ಲಾಂ ಅಂದರೆ ಮಾನವ ಆತ್ಮದ ಪರಿವರ್ತನೆಗಾಗಿರುವ ಮೌಲ್ಯ ವ್ಯವಸ್ಥೆ. ಆದರೆ ಧರ್ಮದ ಹೆಸರಿನಲ್ಲಿ ನಾವು ಸೃಷ್ಟಿಸಿದ ರಾಜಕೀಯ ಮತಭೇದಗಳು ಇಸ್ಲಾಮನ್ನು ರಾಜಕೀಯ ಶಕ್ತಿಯ ಒಂದು

— ಸುರೇಶ್ ಭಟ್ ಬಾಕ್ರಬೈಲ್ —

ಉಪಕರಣವೆಂದು ಬಿಂಬಿಸಿವೆ. ಬ್ರಿಟಿಷರ ಪ್ರಭಾವಕ್ಕೊಳಗಾಗಿ ನಾವು ಇಸ್ಲಾಮನ್ನು ಒಂದು ಸೀಮಿತ ವ್ಯವಸ್ಥೆಯಾಗಿಸಿದ್ದೇವೆ. ಯಹೂದ್ಯ, ಪಾರಸಿ ಮತ್ತು ಹಿಂದೂ ಸಮುದಾಯಗಳ ಸಂಪ್ರದಾಯಗಳನ್ನು ಅನುಕರಿಸಿ ನಮ್ಮನ್ನೊಂದು ವಂಶಾನುಗತ ಸಮುದಾಯವಾಗಿ ಪರಿವರ್ತಿಸಿದ್ದೇವೆ. ಭಾರತದ ಮುಸ್ಲಿಮರು ಇಸ್ಲಾಂ ಹಾಗೂ ಅದರ ಸಂದೇಶವನ್ನು ನಿಂತನೀರಾಗಿಸಿ ತಮ್ಮನ್ನು ಹಲವಾರು ಪಂಗಡಗಳಾಗಿ ವಿಂಗಡಿಸಿಕೊಂಡಿದ್ದಾರೆ. ಇವುಗಳಲ್ಲಿ ಕೆಲವನ್ನು ವಸಾಹತುಶಾಹಿ ಆಡಳಿತದ ಸೂಚನೆಯಂತೆ ಸೃಷ್ಟಿಸಲಾಗಿದೆ. ಪರಿಣಾಮವಾಗಿ ಚಲನಶೀಲತೆ ಮತ್ತು ಕ್ರಿಯಾಶೀಲತೆ ಕಳೆದುಕೊಂಡಿರುವ ಈ ಪಂಥಗಳು ಇಸ್ಲಾಮಿನ ಮೌಲ್ಯಗಳಲ್ಲಿ ನಂಬಿಕೆ ಕಳೆದುಕೊಂಡಿವೆ.

ಮುಸ್ಲಿಂ ಅಸ್ತಿತ್ವದ ಶ್ರೇಷ್ಠತೆಯನ್ನು ಕಠಿಣ ಪರಿಶ್ರಮದಿಂದ ಗುರುತಿಸಲಾಗುತ್ತದೆ. ಆದರೆ ಇಂದು ಅವರಿಗೆ ಈ ಪದದ ಪರಿಚಯವೇ ಇಲ್ಲ. ಅವರು ಖಂಡಿತ ಮುಸ್ಲಿಮರೇ ಆದರೂ ತಮ್ಮದೇ ಚಪಲ ಮತ್ತು ಆಕಾಂಕ್ಷೆಗಳ ಬೆನ್ನು ಹಿಡಿದಿದ್ದಾರೆ. ಯಥಾರ್ಥದಲ್ಲಿ ಇಂದು ಅವರು ರಾಜಕೀಯ ಅಧಿಕಾರಕ್ಕೆ ಮಣಿಯುವಷ್ಟು ಸುಲಭದಲ್ಲಿ ಇಸ್ಲಾಮಿನ ಮೌಲ್ಯಗಳಿಗೆ ತಲೆಬಾಗುವುದಿಲ್ಲ. ಇಂದು ಅವರಿಗೆ ಬೇಕಿರುವುದು ರಾಜಕಾರಣದ ಧರ್ಮ, ಕುರಾನ್‌ನ ಧರ್ಮ ಅಲ್ಲ. ಪಾಕಿಸ್ತಾನ ಒಂದು ರಾಜಕೀಯ ನಿಲುವಾಗಿದೆ. ಅದು ಭಾರತೀಯ ಮುಸ್ಲಿಮರ ಸಮಸ್ಯೆಗಳಿಗೆ ಪರಿಹಾರವೇ ಎಂಬುದರ ಪರಿವೆಯಿಲ್ಲದೆ ಅದನ್ನು ಇಸ್ಲಾಮಿನ ಹೆಸರಿನಲ್ಲಿ ಕೇಳಲಾಗುತ್ತಿದೆ. ಜನರ ನಂಬಿಕೆ, ಅಪನಂಬಿಕೆಗಳ ಆಧಾರದಲ್ಲಿ ಅವರನ್ನು ನೆಲೆಗೊಳಿಸುವುದಕ್ಕಾಗಿ ಪ್ರದೇಶಗಳನ್ನು ವಿಭಜಿಸಬೇಕೆಂದು ಇಸ್ಲಾಂ ಎಂದು ಮತ್ತು ಎಲ್ಲಿ ಹೇಳಿದೆಯೆನ್ನುವ ಪ್ರಶ್ನೆ ಇದೆ. ಇದಕ್ಕೆ ಕುರಾನ್‌ನಲ್ಲಾಗಲೀ ಪೂಜ್ಯ ಪ್ರವಾದಿಯ ಪರಂಪರೆಯಲ್ಲಾಗಲೀ ಅನುಮೋದನೆ ಇದೆಯೇ? ಈ ಆಧಾರದ ಮೇಲೆ ದೇವರ ಸಾಮ್ರಾಜ್ಯವನ್ನು ವಿಭಜಿಸಿದ ಇಸ್ಲಾಮಿಕ್ ಪಂಡಿತರು ಯಾರು?

ತತ್ವಶಃ ಈ ವಿಭಜನೆಯನ್ನು ನಾವು ಒಪ್ಪಿಕೊಂಡರೂ ಇಸ್ಲಾಂ ಒಂದು ಸಾರ್ವತ್ರಿಕ ವ್ಯವಸ್ಥೆಯೆಂಬ ತತ್ವದೊಂದಿಗೆ ಅದನ್ನು ಸರಿಹೊಂದಿಸುವುದಾದರೂ ಹೇಗೆ? ಭಾರತವನ್ನೂ ಒಳಗೊಂಡಂತೆ ಮುಸ್ಲಿಮೇತರ ನಾಡುಗಳಲ್ಲಿ ಮುಸ್ಲಿಮರ ಇರುವಿಕೆ ಹೆಚ್ಚುತ್ತಿರುವುದನ್ನು ಹೇಗೆ ವಿವರಿಸಬಹುದು? ಇಸ್ಲಾಂ ಈ ವಿಭಜನೆಯ ತತ್ವವನ್ನು ಅನುಮೋದಿಸಿದ್ದರೆ ಅದರ ಅನುಯಾಯಿಗಳಿಗೆ ಮುಸ್ಲಿಮೇತರ ನಾಡುಗಳಿಗೆ ಹೋಗಲು ಅನುಮತಿ ಸಿಗುತ್ತಿರಲಿಲ್ಲ ಮತ್ತು ಈಗ ಪಾಕಿಸ್ತಾನ ರಚನೆಯನ್ನು ಬೆಂಬಲಿಸುತ್ತಿರುವವರ ಪೈಕಿ ಅನೇಕರ ಪೂರ್ವಜರು ಇಸ್ಲಾಂಮತವನ್ನು ಸ್ವೀಕರಿಸುತ್ತಲೂ ಇರಲಿಲ್ಲ. ಈ ವಿಷಯ ಅವರಿಗೆ ಹೊಳೆದಿದೆಯೇ? ಧರ್ಮದ ಆಧಾರದಲ್ಲಿ ಪ್ರದೇಶಗಳನ್ನು ಒಡೆಯುವ ತಂತ್ರ ಮುಸ್ಲಿಂ ಲೀಗ್‌ನ ಸೃಷ್ಟಿ. ಅದರ ರಾಜಕೀಯ ಅಜೆಂಡಾದ ಭಾಗವಾಗಿ ಆ ಗುರಿ ಸಾಧಿಸಲು ಹೊರಡಬಹುದಾದರೂ ಅದನ್ನು ಇಸ್ಲಾಂ ಆಗಲೀ ಕುರಾನ್ ಆಗಲೀ ಅನುಮೋದಿಸುವುದಿಲ್ಲ. ಓರ್ವ ಧರ್ಮನಿಷ್ಠ ಮುಸ್ಲಿಮನ ಹೃದಯದಲ್ಲಿರುವ ಗುರಿಯೇನು? ಇಸ್ಲಾಮಿನ ಬೆಳಕನ್ನು ಎಲ್ಲೆಡೆ ಪಸರಿಸುವುದೇ ಅಥವಾ ರಾಜಕೀಯ ಮಹತ್ವಾಕಾಂಕ್ಷೆಗಳ ಬೆಂಬತ್ತಿ ಧಾರ್ಮಿಕ ನೆಲೆಯಲ್ಲಿ ದೇಶಗಳನ್ನು ಒಡೆಯುವುದೇ?

ಪಾಕಿಸ್ತಾನಕ್ಕಾಗಿ ಆಗ್ರಹಿಸುತ್ತಿರುವುದರಿಂದ ಮುಸ್ಲಿಮರಿಗೆ ಯಾವ ವಿಧದಲ್ಲೂ ಪ್ರಯೋಜನವಾಗಿಲ್ಲ. ಪಾಕಿಸ್ತಾನದಿಂದ ಇಸ್ಲಾಮಿಗೆ ಹೇಗೆ ಪ್ರಯೋಜನ ಒದಗಲಿದೆ ಎನ್ನುವುದು ಚರ್ಚಾಸ್ಪದ ಪ್ರಶ್ನೆ. ಅದು ಬಹುತೇಕವಾಗಿ ಅವಲಂಬಿಸಿರುವುದು ಪಾಕಿಸ್ತಾನಕ್ಕೆ ದೊರೆಯುವ ನಾಯಕತ್ವದ ಪ್ರಕಾರದ ಮೇಲೆ. ಪಾಶ್ಚಿಮಾತ್ಯ ಚಿಂತನೆ ಮತ್ತು ತತ್ವಶಾಸ್ತ್ರಗಳು ಬೀರಿರುವ ಪರಿಣಾಮ ಬಿಕ್ಕಟ್ಟನ್ನು ಇನ್ನಷ್ಟು ತೀವ್ರಗೊಳಿಸಿದೆ. ಮುಸ್ಲಿಂಲೀಗ್‌ನ ನಾಯಕತ್ವದ ನಡತೆಯಿಂದಾಗಿ ಪಾಕಿಸ್ತಾನದಲ್ಲಿ ಮತ್ತು ಭಾರತದ ಮುಸ್ಲಿಮರಲ್ಲಿ ಇಸ್ಲಾಂ ಒಂದು ಅಪರೂಪದ ವಸ್ತುವಾಗಿ ಪರಿಣಮಿಸಲಿದೆ. ಇದೊಂದು ಊಹನೆ. ಭವಿಷ್ಯದ ಗರ್ಭದಲ್ಲಿ ಏನೆಲ್ಲ ಅಡಗಿದೆಯೋ ಆ ದೇವನೇ ಬಲ್ಲ. ಪಾಕಿಸ್ತಾನ ಅಸ್ತಿತ್ವಕ್ಕೆ ಬಂದಾಗ ಅದು ಮತೀಯ ಸಂಘರ್ಷಗಳನ್ನು ಎದುರಿಸಲಿದೆ. ನನ್ನ ಅಭಿಪ್ರಾಯದಲ್ಲಿ ಅಧಿಕಾರದ ಸೂತ್ರ ಹಿಡಿಯಲಿರುವ ಮಂದಿಯಿಂದ ಇಸ್ಲಾಮಿಗೆ ಗಂಭೀರ ಹಾನಿ ಬಂದೊದಗಲಿದೆ. ಅವರ ನಡತೆಯ ಪರಿಣಾಮವಾಗಿ ಸಂಪೂರ್ಣವಾಗಿ ಪ್ರತ್ಯೇಕಿಸಲ್ಪಡುವ ಪಾಕಿಸ್ತಾನದ ಯುವಜನತೆ ಧರ್ಮೇತರ ಚಳುವಳಿಗಳಿಗೆ ಸೇರಿಕೊಳ್ಳಬಹುದು. ಇಂದು ಮುಸ್ಲಿಮರು ಅಲ್ಪಸಂಖ್ಯಾತರಾಗಿರುವಲ್ಲಿಯೇ ಮುಸ್ಲಿಂ ಯುವಜನತೆ ಧರ್ಮಕ್ಕೆ ಹೆಚ್ಚು ಅತುಕೊಂಡಿದ್ದಾರೆಯೇ ಹೊರತು ಮುಸ್ಲಿಮರು ಬಹುಸಂಖ್ಯಾತರಾಗಿರುವಲ್ಲಿ ಅಲ್ಲ. ಪಾಕಿಸ್ತಾನದಲ್ಲಿ ಉಲೇಮಾಗಳಿಗೆ ಹೆಚ್ಚಿನ ಪಾತ್ರವಿದ್ದರೂ ಧರ್ಮ ಅದರ ಸೆಳೆತ ಕಳೆದುಕೊಳ್ಳುವುದನ್ನು ನೋಡಲಿರುವಿರಿ.

**ಪ್ರಶ್ನೆ: ಆದರೆ ಅನೇಕ ಉಲೇಮಾಗಳು ಖೈದ್-ಎ-ಅಜ಼ಂ (ಎಂ. ಎ. ಜಿನ್ನಾ) ಜೊತೆಗಿದ್ದಾರೆ.**

**ಉತ್ತರ:** ಅಕ್ಬರ್-ಎ-ಅಜ಼ಂ ಜೊತೆಗೂ ಅನೇಕ ಉಲೇಮಾಗಳು ನಿಂತಿದ್ದರಲ್ಲದೆ ಆತನಿಗಾಗಿ ಹೊಸದೊಂದು ಧರ್ಮವನ್ನೂ ಸೃಷ್ಟಿಸಿದ್ದರು. ವ್ಯಕ್ತಿಗಳ ಬಗ್ಗೆ ಚರ್ಚೆ ಬೇಡ. ಪ್ರತಿಯೊಂದು ಯುಗದಲ್ಲಿ, ಪ್ರತಿಯೊಂದು ಕಾಲಘಟ್ಟದಲ್ಲಿ ಇಸ್ಲಾಮಿಗೆ ಅಪಕೀರ್ತಿ ಮತ್ತು ಅವಮಾನ ತಂದಿರುವ ಉಲೇಮಾಗಳ ನಡತೆಯ ಕತೆಗಳಿಂದ ನಮ್ಮ ಚರಿತ್ರೆಯ ಪುಟಗಳು ತುಂಬಿತುಳುಕುತ್ತಿವೆ. ಸತ್ಯವನ್ನು ಎತ್ತಿಹಿಡಿದವರಿದ್ದರೆ ಅಂತಹವರು ಕೇವಲ ಅಪವಾದಗಳು. ಕಳೆದ ೧೩೦೦ ವರ್ಷಗಳ ಇತಿಹಾಸದಲ್ಲಿ ಗೌರವಯುತವಾಗಿ ಉಲ್ಲೇಖಿಸಲ್ಪಟ್ಟಿರುವ ಉಲೇಮಾಗಳ ಸಂಖ್ಯೆ ಎಷ್ಟಿದೆ? ಒಬ್ಬ ಇಮಾಂ ಹನ್‌ಬಲ್, ಮತ್ತೊಬ್ಬ ಇಬ್ನ್ ತೈಮಿಯ್ಯ. ಭಾರತದಲ್ಲಿ ಶಾ ವಲಿಯುಲ್ಲ ಮತ್ತು ಆತನ ಕುಟುಂಬವನ್ನು ಹೊರತುಪಡಿಸಿ ಬೇರೆ ಯಾರ ಹೆಸರನ್ನೂ ನಾವು ಸ್ಮರಿಸುವುದಿಲ್ಲ. ಅಲ್ಫ್ ಸಾನಿಯ ಕೆಚ್ಚು ಸಂಶಯಾತೀತ. ಆದರೆ ಆಸ್ಥಾನಕ್ಕೆ ದೂರು ಸಲ್ಲಿಸಿ ಆತನನ್ನು ಸೆರೆಮನೆಗೆ ತಳ್ಳಿದವರೂ ಉಲೇಮಾಗಳೇ. ಈಗ ಅವರೆಲ್ಲ ಎಲ್ಲಿದ್ದಾರೆ? ಅವರನ್ನು ಯಾರಾದರೂ ಗೌರವಿಸುತ್ತಾರೆಯೇ?

**ಪ್ರಶ್ನೆ: ಮೌಲಾನಾ, ಪಾಕಿಸ್ತಾನದ ಕನಸು ನನಸಾಗುವುದರಲ್ಲಿ ತಪ್ಪೇನಿದೆ? ಅಂತಿಮವಾಗಿ 'ಇಸ್ಲಾಂ' ಬಳಕೆಯಾಗುತ್ತಿರುವುದು ಸಮುದಾಯದ ಐಕ್ಯತೆಗಾಗಿ ಮತ್ತು ಅದರ ರಕ್ಷಣೆಗಾಗಿ.**

**ಉತ್ತರ:** ನೀವು ಇಸ್ಲಾಮಿನ ಮಾನದಂಡಗಳ ಪ್ರಕಾರ ಸರಿಯಲ್ಲದ ಒಂದು ಧ್ಯೇಯಕ್ಕಾಗಿ ಇಸ್ಲಾಮಿನ ಹೆಸರನ್ನು ಬಳಸುತ್ತಿರುವಿರಿ. ಇಂತಹ ಅನೇಕ ಪಾತಕಕೃತ್ಯಗಳಿಗೆ ಮುಸ್ಲಿಮರ ಚರಿತ್ರೆಯೇ ಸಾಕ್ಷಿಯಾಗಿ ನಿಲ್ಲುತ್ತದೆ. ಜಮಾಲ್ ಕದನ (ಇಮಾಮ್ ಅಲಿ ಮತ್ತು ಪ್ರವಾದಿಯ ವಿಧವೆ ಪತ್ನಿ ಹಜ಼್ರತ್ ಆಯೆಶಾ ನಡುವೆ)ದಲ್ಲಿ ಬರ್ಚಿಗಳ ಮೊನೆಗೆ ಕುರಾನ್‌ಗಳನ್ನು ಸಿಕ್ಕಿಸಲಾಗಿತ್ತು. ಅದು ಸರಿಯಾ? ಪೂಜ್ಯ ಪ್ರವಾದಿಯ ಸಹಚರರೆಂದು ಹೇಳಿಕೊಂಡ ಮುಸ್ಲಿಮರೇ

ಕರ್ಬಲಾದಲ್ಲಿ ಪ್ರವಾದಿಯ ಕುಟುಂಬಿಕರನ್ನು ಕೊಂದರು. ಅದು ಸರಿಯಾ? ಮಕ್ಕಾದ ಪವಿತ್ರ ಮಸೀದಿಯ ಮೇಲೆ ಪಾಶವೀ ದಾಳಿ ನಡೆಸಿದಾತ ಓರ್ವ ಮುಸ್ಲಿಂ ದಂಡನಾಯಕನಾಗಿದ್ದ ಹಜ್ಜಾಜ್. ಅದು ಸರಿಯಾ? ಉದ್ದೇಶಗಳು ಹುಸಿಯಾಗಿದ್ದರೆ ಅವುಗಳಿಗೆ ಯಾವುದೇ ಪವಿತ್ರ ಶಬ್ದಗಳ ಮೂಲಕ ಸಮರ್ಥನೆ ಒದಗಿಸಲು ಅಥವಾ ಪಾವಿತ್ರ್ಯ ತಂದುಕೊಡಲು ಸಾಧ್ಯವಿಲ್ಲ.

ಪಾಕಿಸ್ತಾನ ಮುಸ್ಲಿಮರಿಗೆ ಯಥೋಚಿತವಾಗಿದ್ದ ಪಕ್ಷದಲ್ಲಿ ಅದನ್ನು ನಾನು ಬೆಂಬಲಿಸಬಹುದಾಗಿತ್ತು. ಆದರೆ ಪಾಕಿಸ್ತಾನಕ್ಕಾಗಿರುವ ಡಿಮಾಂಡ್‌ನಲ್ಲಿ ಹುದುಗಿರುವ ಅಪಾಯಗಳನ್ನು ನಾನು ಸ್ಪಷ್ಟವಾಗಿ ನೋಡಬಲ್ಲೆ. ಜನ ನಾನು ಹೇಳಿದ್ದನ್ನು ಕೇಳುತ್ತಾರೆಂದು ನಾನು ನಿರೀಕ್ಷಿಸುವುದಿಲ್ಲ. ಆದರೆ ನನ್ನಿಂದಂತೂ ಆತ್ಮಸಾಕ್ಷಿಯ ಕರೆಗೆ ವಿರುದ್ಧವಾಗಿ ಹೋಗಲು ಸಾಧ್ಯವಿಲ್ಲ. ಜನ ಸಾಮಾನ್ಯವಾಗಿ ಶರಣಾಗುವುದು ಒತ್ತಾಯಗಳಿಗೆ ಅಥವಾ ಅನುಭವದ ಪಾಠಗಳಿಗೆ. ಪಾಕಿಸ್ತಾನದ ವಿರುದ್ಧ ಏನೇ ಇದ್ದರೂ ಅದನ್ನು ಕೇಳುವ ಮನಸ್ಸು ಮುಸ್ಲಿಮರಿಗಿಲ್ಲ, ಅವರಿಗೆ ಅನುಭವಿಸಿಯೇ ನೋಡಬೇಕಾಗಿದೆ. ಇಂದು ಬೇಕಾದರೆ ಬಿಳಿಯನ್ನು ಕಪ್ಪೆಂದು ಹೇಳಬಲ್ಲರು. ಆದರೆ ಪಾಕಿಸ್ತಾನವನ್ನು ಮಾತ್ರ ಬಿಟ್ಟುಕೊಡಲು ಸಿದ್ಧರಿಲ್ಲ. ಈಗ ಅದನ್ನು ನಿಲ್ಲಿಸಲು ಕೇವಲ ಎರಡೇ ಮಾರ್ಗೋಪಾಯಗಳಿವೆ. ಒಂದು, ಅವರ ಹಕ್ಕೊತ್ತಾಯಕ್ಕೆ ಸರಕಾರ ಮಣಿಯಬಾರದು. ಎರಡು, ಹೊಸದೊಂದು ಪ್ರಸ್ತಾಪಕ್ಕೆ ಒಪ್ಪಿ ಖುದ್ದು ಜಿನ್ನಾ ಅದನ್ನು ಬಿಟ್ಟುಕೊಡಬೇಕು.

ಕಾಂಗ್ರೆಸ್ ಪಕ್ಷದ ಕಾರ್ಯಕಾರಿಣಿ ಸಮಿತಿಯಲ್ಲಿರುವ ನನ್ನದೇ ಸಹೋದ್ಯೋಗಿಗಳ ನಿಲುವನ್ನು ನೋಡಿದಾಗ ಭಾರತದ ವಿಭಜನೆ ನಿಶ್ಚಿತವೆಂದೇ ತೋರುತ್ತದೆ. ಆದರೆ ವಿಭಜನೆಯ ದುಷ್ಪರಿಣಾಮಗಳು ಕೇವಲ ಭಾರತವನ್ನಷ್ಟೇ ಅಲ್ಲ ಪಾಕಿಸ್ತಾನವನ್ನೂ ಬಾಧಿಸಲಿವೆ ಎಂದು ಎಚ್ಚರಿಸುತ್ತಿದ್ದೇನೆ. ಈ ವಿಭಜನೆ ಜನರ ಧರ್ಮದ ಆಧಾರದಲ್ಲಿ ಆಗಲಿದೆಯೇ ಹೊರತು ನದಿ, ಬೆಟ್ಟ, ಮರುಭೂಮಿಯಂತಹ ಪ್ರಾಕೃತಿಕ ಗಡಿಗಳಿಂದಲ್ಲ. ಒಂದು ಗೆರೆಯನ್ನು ಎಳೆಯಲಾಗುವುದು; ಅದೆಷ್ಟು ಕಾಲ ಬಾಳಲಿದೆಯೆಂದು ಹೇಳುವುದು ಕಷ್ಟ. ದ್ವೇಷದಿಂದ ಹುಟ್ಟಿಕೊಂಡ ವಸ್ತುವೊಂದು ಕೇವಲ ದ್ವೇಷವಿರುವಷ್ಟು ಕಾಲ ಬಾಳಬಲ್ಲುದು. ಭಾರತ, ಪಾಕಿಸ್ತಾನಗಳ ನಡುವಿನ ಸಂಬಂಧಗಳಲ್ಲಿ ಈ ದ್ವೇಷವೇ ಮೇಲುಗೈಯಾಗಲಿದೆ. ಇಂತಹ ಪರಿಸ್ಥಿತಿಯಲ್ಲಿ ಭಾರತ ಮತ್ತು ಪಾಕಿಸ್ತಾನ ಸ್ನೇಹಿತರಾಗಿ ಬಾಳಲು ಅಸಾಧ್ಯ. ಒಂದು ವೇಳೆ ದೊಡ್ಡ ಅನಾಹುತವೊಂದು ಸಂಭವಿಸಿದಲ್ಲಿ ಅದು ಸಾಧ್ಯವಾಗಲೂಬಹುದು. ಉಭಯ ದೇಶಗಳ ನಡುವಿನ ಸಂಬಂಧಗಳಿಗೆ ಈ ವಿಭಜನೆಯ ರಾಜಕೀಯವೇ ಅಡ್ಡಿಯಾಗಲಿದೆ. ಪಾಕಿಸ್ತಾನಕ್ಕೆ ಸಿಗಲಿರುವ ಭೂಭಾಗದಲ್ಲಿ ಭಾರತದ ಎಲ್ಲಾ ಮುಸ್ಲಿಮರಿಗೆ ಬೇಕಾಗುವಷ್ಟು ಜಾಗವಿಲ್ಲ. ಹಿಂದೂಗಳಿಗೂ ಪಾಕಿಸ್ತಾನದಲ್ಲಿ, ವಿಶೇಷವಾಗಿ ಪಶ್ಚಿಮ ಪಾಕಿಸ್ತಾನದಲ್ಲಿ, ಇರಲು ಸಾಧ್ಯವಾಗದು. ಒಂದೋ ಅವರನ್ನೆಲ್ಲಾ ಹೊರಹಾಕಲಾಗುವುದು ಇಲ್ಲಾ ಅವರಾಗಿಯೇ ಬಿಟ್ಟುಹೋಗಲಿರುವರು. ಇದರ ಪರಿಣಾಮಗಳನ್ನು ಭಾರತ ಅನುಭವಿಸಲಿದೆ. ಭಾರತದ ಮುಸ್ಲಿಮರಿಗೆ ಮೂರು ಆಯ್ಕೆಗಳಿರುತ್ತವೆ :

೧. ಲೂಟಿ ಮತ್ತು ದೌರ್ಜನ್ಯಗಳಿಗೆ ತುತ್ತಾಗಿ ಪಾಕಿಸ್ತಾನಕ್ಕೆ ವಲಸೆ ಹೋಗುತ್ತಾರೆ; ಆದರೆ ಅಲ್ಲಿ ಎಷ್ಟು ಜನಕ್ಕೆ ಆಶ್ರಯ ಸಿಗಬಹುದು?

೨. ಕೊಲೆ ಮತ್ತಿತರ ಅತಿರೇಕದ ಕೃತ್ಯಗಳಿಗೆ ಬಲಿಯಾಗುತ್ತಾರೆ. ವಿಭಜನೆಯ ಕಹಿ ನೆನಪುಗಳು ಮಾಸುವ ತನಕ ಮತ್ತು ಪ್ರಸಕ್ತ ಪೀಳಿಗೆ ಅದರ ನೈಸರ್ಗಿಕ ಅವಧಿಯನ್ನು ಪೂರೈಸುವ ತನಕ ಅನೇಕ ಮುಸ್ಲಿಮರ ಪಾಲಿಗೆ ಈ ಅಗ್ನಿಪರೀಕ್ಷೆಯು ಮುಂದುವರಿಯಲಿದೆ.

೩. ದಾರಿದ್ರ್ಯ, ರಾಜಕೀಯ ಅತಂತ್ರತೆ ಮತ್ತು ಪ್ರಾದೇಶಿಕ ಸುಲಿಗೆಗೆ ಒಳಗಾಗುವ ಅನೇಕ ಮುಸ್ಲಿಮರು ಇಸ್ಲಾಮನ್ನು ಪರಿತ್ಯಜಿಸಲು ನಿರ್ಧರಿಸುತ್ತಾರೆ.

ಮುಸ್ಲಿಂ ಲೀಗ್‌ಅನ್ನು ಬೆಂಬಲಿಸುತ್ತಿರುವ ಪ್ರಮುಖ ಮುಸ್ಲಿಮರು ಪಾಕಿಸ್ತಾನಕ್ಕೆ ತೆರಳುತ್ತಾರೆ. ಶ್ರೀಮಂತ ಮುಸ್ಲಿಮರು ಉದ್ದಿಮೆ, ವಾಣಿಜ್ಯಗಳನ್ನು ವಶಮಾಡಿಕೊಂಡು ಪಾಕಿಸ್ತಾನದ ಆರ್ಥಿಕತೆಯ ಮೇಲೆ ಏಕಸ್ವಾಮ್ಯ ಹೊಂದುತ್ತಾರೆ. ಆದರೆ ೩ ಕೋಟಿಗೂ ಅಧಿಕ ಮುಸ್ಲಿಮರು ಭಾರತದಲ್ಲಿ ಉಳಿಯುತ್ತಾರೆ. ಅವರಿಗೆ ಪಾಕಿಸ್ತಾನದಲ್ಲಿ ಏನು ಭವಿಷ್ಯವಿದೆ? ಪಾಕಿಸ್ತಾನದಿಂದ ಹಿಂದೂ, ಸಿಕ್ಖರನ್ನು ಹೊರದೂಡುವಾಗ ಉಂಟಾಗಲಿರುವ ಪರಿಸ್ಥಿತಿಯಿಂದ ಭಾರತದ ಮುಸ್ಲಿಮರಿಗೆ ಇನ್ನಷ್ಟು ಅಪಾಯವಿದೆ. ಖುದ್ದು ಪಾಕಿಸ್ತಾನವೂ ಅನೇಕ ಗಂಭೀರ ಸಮಸ್ಯೆಗಳಿಗೆ ಬಲಿಯಾಗಲಿದೆ. ಆ ಹೊಸ ರಾಷ್ಟ್ರವನ್ನು ನಿಯಂತ್ರಿಸಲಿಚ್ಛಿಸುವ ಅಂತರರಾಷ್ಟ್ರೀಯ ಶಕ್ತಿಗಳಿಂದ ಅದಕ್ಕೆ ಅತ್ಯಧಿಕ ಅಪಾಯ ಕಾದಿದೆ. ಕಾಲಕಳೆದಂತೆ ಈ ನಿಯಂತ್ರಣ ಇನ್ನಷ್ಟು ಬಲಗೊಳ್ಳಲಿದೆ. ಈ ಬಾಹ್ಯ ಹಸ್ತಕ್ಷೇಪದಿಂದ ತೊಂದರೆಯಿದೆ ಎಂದು ಭಾರತಕ್ಕೆ ಅನಿಸದು; ಏಕೆಂದರೆ ಅದು ಅಪಾಯ ಮತ್ತು ಹಗೆತನವನ್ನು ಗ್ರಹಿಸಲಿರುವುದು ಪಾಕಿಸ್ತಾನದಿಂದ.



## ಇಬ್ಬನಿ

ಮಂಜು ಮುಸುಕಿದ ಹಾದಿಯಾಚೆ
ಇರುಳು
ಸರಿಯುವ ಸದ್ದು
ಪ್ರತಿಧ್ವನಿಸುತ್ತಿದೆ
ಎಲೆಗಳಲಿ
ಕೆರೆಯ ನೀರಿನ
ನಿಗೂಢ ಸುಳಿಗಳಲಿ
ಮೊಗ್ಗೊಡೆದು ಚೆಲ್ಲುತ್ತಿರುವ
ಕಂಪಿನಲಿ
ಬೆಟ್ಟದ ತುದಿಯ
ಮೌನದಲಿ
ಆಗಸದ ಕಣ್ಣವೆಗಳಲಿ.
ಚಲನೆಯ ಲಯಕ್ಕೆ
ದನಿಗೂಡಿಸುತ್ತಿದೆ
ಇನ್ನೂ ಮಲಗಿರುವವರ
ಎದೆ ಬಡಿತಗಳು
ಹಕ್ಕಿಗೂಡುಗಳ
ಪುಟಾಣಿ ಚಲನೆಗಳು.

ಸುಬ್ರಾಯ ಚೊಕ್ಕಾಡಿ
ಚೊಕ್ಕಾಡಿ - ೫೭೪ ೨೦೨
ದಕ್ಷಿಣ ಕನ್ನಡ

ಜಿನ್ನಾ ಗಮನಕ್ಕೆ ಬಾರದಿರುವ ಮತ್ತೊಂದು ಮುಖ್ಯಾಂಶವೆಂದರೆ ಬಂಗಾಳ. ಬಂಗಾಳ ಹೊರಗಿನವರ ನಾಯಕತ್ವವನ್ನು ತುಚ್ಛೀಕರಿಸುತ್ತದೆ ಮಾತ್ರವಲ್ಲ ಅಂತಹ ನಾಯಕತ್ವವನ್ನು ಬಹುಬೇಗ ತಿರಸ್ಕರಿಸುತ್ತದೆ. ದ್ವಿತೀಯ ಮಹಾಯುದ್ಧದ ವೇಳೆ ಜಿನ್ನಾ ವಿರುದ್ಧ ತಿರುಗಿಬಿದ್ದ ಕಾರಣಕ್ಕೆ ಫಜ್‌ಲುಲ್ ಹಕ್‌ರನ್ನು ಮುಸ್ಲಿಂ ಲೀಗ್‌ನಿಂದ ಉಚ್ಚಾಟಿಸಲಾಗಿತ್ತು. ಎಚ್. ಎಸ್. ಸುಹ್ರಾವರ್ದಿಗೆ ಜಿನ್ನಾ ಬಗ್ಗೆ ಸದಭಿಪ್ರಾಯವಿಲ್ಲ. ಕೇವಲ ಮುಸ್ಲಿಂ ಲೀಗ್ ಒಂದೇ ಏಕೆ, ಕಾಂಗ್ರೆಸ್‌ನ ಚರಿತ್ರೆಯನ್ನೇ ನೋಡಿ. ಸುಭಾಶ್ಚಂದ್ರ ಬೋಸ್‌ರ ಬಂಡಾಯ ಎಲ್ಲರಿಗೂ ಗೊತ್ತಿರುವಂಥಾದ್ದೇ. ಬೋಸ್ ಅಧ್ಯಕ್ಷತೆಯಿಂದ ಗಾಂಧೀಜಿಗೆ ಖುಷಿಯಾಗಿರಲಿಲ್ಲ. ಹಾಗೆ ಬೋಸ್ ವಿರುದ್ಧ ರಾಜ್‌ಕೋಟ್‌ನಲ್ಲಿ ಆಮರಣಾಂತ ಉಪವಾಸ ಸತ್ಯಾಗ್ರಹ ಹೂಡಿದರು. ಆದರೆ ಬೋಸ್ ಗಾಂಧೀಜಿ ವಿರುದ್ಧವೇ ಬಂಡಾಯವೆದ್ದು ಕಾಂಗ್ರೆಸ್‌ನಿಂದ ಹೊರನಡೆದರು. ಬಂಗಾಳದ ವಾತಾವರಣವೇ ಹಾಗಿದೆ. ಅದು ಬಾಹ್ಯ ನಾಯಕತ್ವವನ್ನು ಇಷ್ಟಪಡುವುದಿಲ್ಲ. ಅದರ ಹಕ್ಕು, ಹಿತಾಸಕ್ತಿಗಳಿಗೆ ಅಪಾಯವಿದೆಯೆಂದು ತಿಳಿದಾಗ ಬಂಡಾಯವೇಳುತ್ತದೆ.




ಜಿನ್ನಾ ಮತ್ತು ಲಿಯಾಖತ್ ಅಲಿ ಜೀವಂತರಾಗಿರುವ ತನಕ ಪೂರ್ವ ಪಾಕಿಸ್ತಾನದ ವಿಶ್ವಾಸಕ್ಕೆ ಚ್ಯುತಿಯಾಗುವುದಿಲ್ಲ. ಆದರೆ ಅವರ ನಂತರದಲ್ಲಿ ಮಾತ್ರ ಚಿಕ್ಕದೊಂದು ಘಟನೆ ಕೂಡ ಅಸಮಾಧಾನ ಮೂಡಿಸಲಿದೆ, ಮನಸ್ಸುಗಳು ಒಡೆಯಲಿವೆ. ಪೂರ್ವ ಪಾಕಿಸ್ತಾನ ಗಣನೀಯ ಅವಧಿಯ ತನಕ ಪಶ್ಚಿಮ ಪಾಕಿಸ್ತಾನದೊಂದಿಗೆ ಇರಲಾರದೆಂದೇ ನನ್ನ ಭಾವನೆ. ತಮ್ಮನ್ನು ತಾವು ಮುಸ್ಲಿಮರೆಂದುಕೊಳ್ಳುವುದನ್ನು ಬಿಟ್ಟರೆ ಅವೆರಡು ಪ್ರದೇಶಗಳ ನಡುವೆ ಯಾವುದೇ ಸಮಾನಾಂಶಗಳಿಲ್ಲ. ಆದರೆ ಕೇವಲ ಮುಸ್ಲಿಮರಾಗಿರುವ ಕಾರಣಕ್ಕೆ ಒಂದು ದೀರ್ಘಾಯುಷಿ ಒಗ್ಗಟ್ಟು ಸೃಷ್ಟಿಯಾಗಿರುವ ನಿದರ್ಶನ ಜಗತ್ತಿನಲ್ಲಿ ಎಲ್ಲೂ ಇಲ್ಲ. ಅರಬರ ನಾಡು ನಮ್ಮ ಮುಂದಿದೆ; ಅವರೆಲ್ಲರದ್ದೂ ಒಂದೇ ಧರ್ಮ, ಒಂದೇ ನಾಗರಿಕತೆ, ಒಂದೇ ಸಂಸ್ಕೃತಿ ಮತ್ತು ಒಂದೇ ಭಾಷೆ ಕೂಡ. ವಾಸ್ತವದಲ್ಲಿ ಪ್ರಾದೇಶಿಕವಾಗಿ ಒಂದುಗೂಡಿರುವುದನ್ನೂ ಒಪ್ಪುತ್ತಾರೆ. ಆದರೆ ರಾಜಕೀಯ ಐಕ್ಯತೆ ಇಲ್ಲ. ಅವರ ಆಡಳಿತ ವ್ಯವಸ್ಥೆಗಳು ಭಿನ್ನಭಿನ್ನವಾಗಿದ್ದು ಬಹುತೇಕ ಸಮಯ ಒಂದು ಇನ್ನೊಂದನ್ನು ದೂರುವುದರಲ್ಲಿಯೂ, ಜಗಳಾಡುವುದರಲ್ಲಿಯೂ ನಿರತವಾಗಿವೆ.

ಪೂರ್ವ ಪಾಕಿಸ್ತಾನದ ಭಾಷೆ, ಪದ್ಧತಿಗಳು ಮತ್ತು ಜೀವನಶೈಲಿಗಳು ಪಶ್ಚಿಮ ಪಾಕಿಸ್ತಾನಕ್ಕಿಂತ ಸಂಪೂರ್ಣ ಭಿನ್ನವಾಗಿವೆ. ಪಾಕಿಸ್ತಾನದ ಹುಟ್ಟಿನ ಬಿಸಿ ಆರಿದ ನಂತರ ವೈರುಧ್ಯಗಳೆಲ್ಲವೂ ಕಾಣಿಸಿಕೊಂಡು ಪ್ರಾಬಲ್ಯ ಪಡೆದುಕೊಳ್ಳಲಿವೆ. ಅಂತರರಾಷ್ಟ್ರೀಯ ಶಕ್ತಿಗಳ ಹಿತಾಸಕ್ತಿಯ ತಾಕಲಾಟಗಳು ಕಿಚ್ಚಿಗೆ ತುಪ್ಪ ಎರೆಯಲಿವೆ. ಪರಿಣಾಮವಾಗಿ ಪೂರ್ವ ಮತ್ತು ಪಶ್ಚಿಮ ಪಾಕಿಸ್ತಾನಗಳು ಪ್ರತ್ಯೇಕವಾಗಲಿವೆ. ಹೀಗೆ ಪೂರ್ವ ಪಾಕಿಸ್ತಾನ ಪ್ರತ್ಯೇಕಗೊಂಡಾಗ ಪಶ್ಚಿಮ ಪಾಕಿಸ್ತಾನ ವೈರುಧ್ಯ ಮತ್ತು ಕಲಹಗಳ ರಣರಂಗವಾಗಲಿದೆ. ಪಂಜಾಬ್, ಸಿಂಧ್, ಫ್ರಾಂಟಿಯರ್ ಮತ್ತು ಬಲೂಚಿಸ್ತಾನಗಳೆಲ್ಲವೂ ತಂತಮ್ಮ ಪ್ರತ್ಯೇಕ ಅಸ್ಮಿತೆಗಳನ್ನು ಪ್ರತಿಪಾದಿಸತೊಡಗುವಾಗ ಬಾಹ್ಯ ಶಕ್ತಿಗಳ ಹಸ್ತಕ್ಷೇಪಕ್ಕೆ ಮುಕ್ತ ಅವಕಾಶ ದೊರೆಯುತ್ತದೆ. ಪಾಕಿಸ್ತಾನದ ರಾಜಕೀಯ ನಾಯಕತ್ವದಲ್ಲಿರುವ ವಿಭಿನ್ನ ಶಕ್ತಿಗಳನ್ನು ಬಳಸಿಕೊಳ್ಳುವ ಅಂತರರಾಷ್ಟ್ರೀಯ ಶಕ್ತಿಗಳು ಅದನ್ನು ಬಾಲ್ಕನ್ ಮತ್ತು ಅರಬ್ ರಾಷ್ಟ್ರಗಳ ಮಾದರಿಯಲ್ಲಿ ಒಡೆಯಲು ಹೆಚ್ಚು ಕಾಲ ಕಾಯಬೇಕಿಲ್ಲ. ಪ್ರಾಯಶಃ ಆ ಹಂತದಲ್ಲಾದರೂ ಏನು ಲಾಭವಾಯಿತು, ಏನು ನಷ್ಟವಾಯಿತೆಂದು ನಮ್ಮನ್ನು ನಾವು ಕೇಳಿಕೊಳ್ಳಬಹುದೇನೋ.

ನಿಜವಾಗಿ ವಿವಾದಗ್ರಸ್ತ ವಿಷಯಗಳೆಂದರೆ ಆರ್ಥಿಕ ಪ್ರಗತಿ ಮತ್ತು ಅಭಿವೃದ್ಧಿ. ಧರ್ಮ ಖಂಡಿತ ಅಲ್ಲ. ವಾಣಿಜ್ಯ ಕ್ಷೇತ್ರದಲ್ಲಿರುವ ಮುಸ್ಲಿಂ ನಾಯಕರಿಗೆ ತಮ್ಮ ಸಾಮರ್ಥ್ಯ ಮತ್ತು ಸ್ಪರ್ಧಾಶೀಲತೆಗಳ ಬಗ್ಗೆ ಸಂದೇಹವಿದೆ. ಅವರಿಗೆ ಅಧಿಕಾರಿಗಳ ಆಶ್ರಯ ಮತ್ತು ಅನುಗ್ರಹಗಳು ಅಭ್ಯಾಸವಾಗಿಬಿಟ್ಟಿವೆ. ಹೀಗಾಗಿ ಹೊಸದಾದ ಈ ಸ್ವಾತಂತ್ರ್ಯ ಮತ್ತು ಮುಕ್ತತೆಗಳಿಗೆ ಅಂಜುತ್ತಿದ್ದಾರೆ. ತಮ್ಮ ಭೀತಿಗಳನ್ನು ಮರೆಮಾಚುವುದಕ್ಕಾಗಿ ದ್ವಿರಾಷ್ಟ್ರ ಸಿದ್ಧಾಂತವನ್ನು ಮುಂದಿಡುತ್ತಿದ್ದಾರೆ. ಅವರಿಗೆ ಮುಸ್ಲಿಂ ದೇಶ ಬೇಕಾಗಿರುವುದೇ ಸಮರ್ಥ ಎದುರಾಳಿಗಳ ಪೈಪೋಟಿಯಿಲ್ಲದೆ ಆರ್ಥಿಕತೆಯ ಮೇಲೆ ಏಕಸ್ವಾಮ್ಯ ಹೊಂದುವುದಕ್ಕಾಗಿ. ಸ್ವಾರಸ್ಯಕರ ಅಂಶವೆಂದರೆ ಈ ವಂಚನೆಯನ್ನು ಎಷ್ಟು ಕಾಲ ಜೀವಂತವಾಗಿಡಲು ಸಾಧ್ಯವಾಗಲಿದೆ ?

ಪಾಕಿಸ್ತಾನ ಅದರ ಆರಂಭದಿಂದಲೇ ಕೆಲವು ಭಾರಿ ಗಂಭೀರ ಸಮಸ್ಯೆಗಳನ್ನು ಎದುರಿಸಲಿದೆಯೆಂದು ನನಗನಿಸುತ್ತದೆ :

೧. ಅನೇಕ ಮುಸ್ಲಿಂ ರಾಷ್ಟ್ರಗಳಲ್ಲಿ ಆಗಿರುವಂತೆ ಅಸಮರ್ಥ ರಾಜಕೀಯ ನಾಯಕತ್ವವು ಅಂತಿಮವಾಗಿ ಸೇನಾ ಸರ್ವಾಧಿಕಾರಕ್ಕೆ ಎಡೆಮಾಡಿಕೊಡಲಿದೆ.

೨. ವಿದೇಶೀ ಸಾಲ ದೊಡ್ಡ ಹೊರೆಯಾಗಲಿದೆ.

೩. ನೆರೆಹೊರೆಯವರೊಂದಿಗೆ ಸ್ನೇಹಯುತ ಸಂಬಂಧಗಳ ಅಭಾವ, ಸಶಸ್ತ್ರ ಸಂಘರ್ಷಗಳ ಸಾಧ್ಯತೆ.

೪. ಆಂತರಿಕ ಅಶಾಂತಿ ಮತ್ತು ಪ್ರಾದೇಶಿಕ ಕಲಹಗಳು

೫. ನವಶ್ರೀಮಂತರು ಮತ್ತು ಉದ್ಯಮಪತಿಗಳಿಂದ ಪಾಕಿಸ್ತಾನದ ರಾಷ್ಟ್ರೀಯ ಸಂಪತ್ತಿನ ಲೂಟಿ.

೬. ನವಶ್ರೀಮಂತರ ಶೋಷಣೆಯ ಪರಿಣಾಮವಾಗಿ ವರ್ಗ ಸಂಘರ್ಷಗಳ ಆತಂಕ.

೭. ಅತೃಪ್ತ ಯುವಜನತೆ ಧರ್ಮದಿಂದ ಪ್ರತ್ಯೇಕಗೊಳ್ಳಲಿದೆ. ಪಾಕಿಸ್ತಾನದ ಸಿದ್ಧಾಂತ ಕುಸಿದುಬೀಳಲಿದೆ.

೮. ಪಾಕಿಸ್ತಾನದ ನಿಯಂತ್ರಣಕ್ಕಾಗಿ ಅಂತರರಾಷ್ಟ್ರೀಯ ಶಕ್ತಿಗಳ ಪಿತೂರಿಗಳು.

ಇಂತಹ ಸನ್ನಿವೇಶದಿಂದ ಪಾಕಿಸ್ತಾನದ ಸ್ಥಿರತೆಯ ಮೇಲೆ ಪರಿಣಾಮವಾಗಲಿದೆ. ಮುಸ್ಲಿಂ ದೇಶಗಳು ಯಾವುದೇ ಉಪಯುಕ್ತ ಬೆಂಬಲ ನೀಡುವ ಸ್ಥಿತಿಯಲ್ಲಿರುವುದಿಲ್ಲ. ಇತರ ಮೂಲಗಳಿಂದ ಬರುವ ಸಹಾಯದ ಜೊತೆಗೆ ನಿಬಂಧನೆಗಳೂ ಇರುವುದರಿಂದ ಪಾಕಿಸ್ತಾನ ಸೈದ್ಧಾಂತಿಕವಾಗಿ, ಪ್ರಾದೇಶಿಕವಾಗಿ ಹೊಂದಾಣಿಕೆ ಮಾಡಿಕೊಳ್ಳುವ ಒತ್ತಡಕ್ಕೆ ಒಳಗಾಗುತ್ತದೆ.

*(ಕೃಪೆ: ಜನವರಿ ೨೦೧೦ರ 'ಕಮ್ಯೂನಲಿಸಂ ಕಾಂಬ್ಯಾಟ್'ನಲ್ಲಿ ಪ್ರಕಟವಾದ ಕವರ್ಟ್‌ನ ಲೇಖನ.)*

*(ಉಳಿದ ಭಾಗ ಮುಂದಿನ ಸಂಚಿಕೆಯಲ್ಲಿ)*

**ಸುರೇಶ್ ಭಟ್ ಬಾಕ್ರಬೈಲ್**
'ಈಶಾವಾಸ್ಯಂ', ೨-೧೦-೭೭೬, ಬಿಜೈ, ಮಂಗಳೂರು - ೫೭೫ ೦೦೪

# ಗೌತಮ ಬುದ್ಧನನ್ನು ಹತ್ಯೆಗೆಯ್ಯಲಾಗಿತ್ತೇ?

ಪಿ. ರತ್ನಾವತಿ

ಗೌತಮ ಬುದ್ಧನ ಸಾವು ಒಂದು ಆಕಸ್ಮಿಕ ಘಟನೆ ಎಂದೇ ಇತಿಹಾಸಕಾರರು ಮತ್ತು ಬೌದ್ಧ ಸಾಹಿತ್ಯವು ವಿವರಿಸುವುದುಂಟು. ಬುದ್ಧನ ಮರಣ ಸಹಜ ಮರಣವಾಗಿರದೆ ಅದೊಂದು ಅಕಾಲ ಮರಣವೆಂಬ ಭಾವನೆಯನ್ನು ಇಲ್ಲಿಯವರೆಗಿನ ಇತಿಹಾಸವು ಧ್ವನಿಸಿದೆ.

ಆದರೆ ಬುದ್ಧನು ಹತ್ಯೆಗೊಳಗಾಗಿರಬಹುದಾದ ಸಾಧ್ಯತೆಯನ್ನು ಮೊಟ್ಟಮೊದಲ ಬಾರಿಗೆ ಅನೇಕ ಆಧಾರಗಳು ಮತ್ತು ತರ್ಕದೊಂದಿಗೆ ಮಾಜಿ ಬೌದ್ಧ ಸಂನ್ಯಾಸಿಯೂ, ಬೌದ್ಧ ಪಂಡಿತನೂ ಆದ ಅಮೆರಿಕಾದ ಸ್ಟೀಫನ್ ಬ್ಯಾಚೆಲರ್ ನಮ್ಮ ಮುಂದೆ ಇಟ್ಟಿದ್ದಾರೆ. ಒಬ್ಬ 'ಬೌದ್ಧ ನಾಸ್ತಿಕ'(!)ನೆಂದೇ ಪ್ರಸಿದ್ಧನಾಗಿರುವ ಸ್ಟೀಫನ್ ಬ್ಯಾಚೆಲರ್‌ನ 'ಬೌದ್ಧ ನಾಸ್ತಿಕನೊಬ್ಬನ ನೈಜ ನಿವೇದನೆಗಳು' ಎಂಬ ಪುಸ್ತಕವು ಮಾರ್ಚ್, ೨೦೧೦ರಲ್ಲಿ ಅಮೆರಿಕಾದಲ್ಲಿ ಬಿಡುಗಡೆಯಾಗಿದ್ದು, ಅನೇಕ ವಾದ-ವಿವಾದಗಳಿಗೆ ಎಡೆಮಾಡಿಕೊಡುವ ಪುಸ್ತಕವಾಗಿ ಹೊರಹೊಮ್ಮಿದೆ.

ಅತ್ಯಂತ ಪ್ರಾಚೀನ ಪಾಲಿ ಗ್ರಂಥಗಳ ಸುಮಾರು ೬೦೦೦ ಪುಟಗಳನ್ನು ಏಳು ವರ್ಷಗಳವರೆಗೆ ಅತ್ಯಂತ ಗಹನವಾಗಿ ಅಧ್ಯಯನ ನಡೆಸಿದ ನಂತರ ಬುದ್ಧನ ಅಜ್ಞಾತ ಜೀವನ ವೃತ್ತಾಂತದ ಮೇಲೆ ಹೊಸ ಬೆಳಕನ್ನು ಚೆಲ್ಲಿರುವ ಬ್ಯಾಚೆಲರ್ ಈವರೆಗೂ ಅಗೋಚರವಾಗಿದ್ದ ಬುದ್ಧನ ಜೀವನದ ಕುರಿತ ಅನೇಕ ಅಂಶಗಳಿಗೆ ಹೊಸ ಅರ್ಥಗಳನ್ನು ನೀಡಿದ್ದಾರೆ.

ಬುದ್ಧನಿಗೆ ಸಂಬಂಧಿಸಿದ ಕಪಿಲವಸ್ತು, ಶ್ರಾವಸ್ತಿ, ಬುದ್ಧ ಗಯಾ, ಸಾರನಾಥ, ಮತ್ತು ಕುಶಿನಗರಗಳಿಗೆ ಭೇಟಿ ನೀಡಿದಾಗ ಬ್ಯಾಚೆಲರ್‌ಗೆ ದೊರಕಿದ ಭೌಗೋಳಿಕ ಪರಿಸರದ ಸ್ವರೂಪವು ಅವರನ್ನು ಬುದ್ಧನ ಬಗೆಗಿನ ಸಂಶೋಧನೆಗೆ ಪ್ರೇರೇಪಿಸಿದುದಾಗಿ ಹೇಳಿಕೊಂಡಿದ್ದಾರೆ. ಬುದ್ಧನ ಕಾಲವು ರಾಜಕೀಯ ಸಂಕ್ರಮಣಾವಸ್ಥೆಯ ಕಾಲವಾಗಿದ್ದು, ಗಣರಾಜ್ಯಗಳು ಕಣ್ಮರೆಯಾಗಿ "ಸಾಮ್ರಾಜ್ಯವೊಂದು (ಮೌರ್ಯ ಸಾಮ್ರಾಜ್ಯ)" ತಲೆ ಎತ್ತುತ್ತಿದ್ದ ಕಾಲ ಅದಾಗಿತ್ತು. ಮಾತ್ರವಲ್ಲ ಆರ್ಯಾವರ್ತದ ಗಂಗಾ-ಯಮುನಾ ಬಯಲಿನಲ್ಲಿ ವೈಶ್ಯ ಸಮುದಾಯವು ಬಲಶಾಲಿಯಾಗಿ ರೂಪುಗೊಳ್ಳುತ್ತಿದ್ದ ಕಾಲ ಅದಾಗಿತ್ತು. ಸಂಪದ್ಭರಿತ ಕೃಷಿಯು ನಗರಗಳು ಅವತರಿಸಲು ಬಲವಾದ ಬುನಾದಿಯನ್ನು ನಿರ್ಮಾಣ ಮಾಡಿತ್ತು. ಈ ಹೊಸ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಅಂಶಗಳ ಹಿನ್ನೆಲೆಯಿಂದ ಬುದ್ಧನನ್ನು ವಿಶ್ಲೇಷಿಸುವುದರ ಅವಶ್ಯಕತೆಯನ್ನು ಮನಗಂಡ ಲೇಖಕರು ಬುದ್ಧನ ಹೊಸ ಹುಡುಕಾಟಕ್ಕೆ ತೊಡಗಿಸಿಕೊಂಡಿದ್ದಾಗಿ ಹೇಳಿಕೊಂಡಿದ್ದಾರೆ.

ಬುದ್ಧನ ತಂದೆ ಶುದ್ಧೋದನನು ಶಾಕ್ಯ ಗಣರಾಜ್ಯದ ಕಪಿಲವಸ್ತುವಿನ ರಾಜ. ಈ ಶಾಕ್ಯ ಗಣರಾಜ್ಯವು ಕೋಸಲದ ಒಂದು ಸಾಮಂತ ರಾಜ್ಯವಾಗಿತ್ತು. ಕೋಸಲವನ್ನು ಪ್ರಸೇನಜಿತ್ ಎಂಬುವನು ಆಳುತ್ತಿದ್ದ. ಶಾಕ್ಯವೆಂಬುದೊಂದು ಸಮುದಾಯದ ಹೆಸರೂ ಆಗಿದ್ದು ಪ್ರಾಚೀನ ಭಾರತದ ಬಹಳ ಪುರಾತನ ಗಣರಾಜ್ಯವಾಗಿತ್ತು. ಶಾಕ್ಯ ಸಮುದಾಯದ ಅನೇಕ ಕುಟುಂಬಗಳ ಮುಖ್ಯಸ್ಥರನ್ನೊಳಗೊಂಡ ಸಮಿತಿಯು ಗಣರಾಜ್ಯವನ್ನು ಆಳುತ್ತಿದ್ದು, ಬುದ್ಧನ ತಂದೆ ಶುದ್ಧೋದನನು ಈ ಸಮಿತಿಯ ನಾಯಕನಾಗಿದ್ದ.

ಇಲ್ಲಿಯವರೆಗಿನ ಇತಿಹಾಸದ ಬರಹಗಳಲ್ಲಿ ಕಾಣುವಂತೆ ಬುದ್ಧನ ಬಾಲ್ಯ ಅರಮನೆಯ ವೈಭೋಗದಲ್ಲಿ ಕಳೆದಿದ್ದು, ಜ್ಯೋತಿಷಿಯೊಬ್ಬನ ಭವಿಷ್ಯವಾಣಿಯಂತೆ ಒಬ್ಬ ರೋಗಿ, ವೃದ್ಧ ಮತ್ತು ಶವದ ದರ್ಶನದಿಂದ ಇಡೀ ಜಗತ್ತು ದುಃಖಮಯವಾಗಿದೆ ಎಂದು ಮನಗಂಡು ಪ್ರಪಂಚದ ದುಃಖ ಪರಿಹಾರಾರ್ಥದ ಜ್ಞಾನಪ್ರಾಪ್ತಿಗಾಗಿ ಸಂಸಾರ ಪರಿತ್ಯಾಗ ಮಾಡಿ, ಬುದ್ಧ ಗಯಾದಲ್ಲಿ 'ಜ್ಞಾನೋದಯ'ವನ್ನು ಪಡೆದು 'ಬುದ್ಧ'ನಾದುದರ ಬಗ್ಗೆ ವಿವರಣೆಯಿದೆ.

ಬೌದ್ಧ ಧರ್ಮದ ಸಂಸ್ಥಾಪಕನಾಗಿ, ಅದರ ಸ್ಥಿರೀಕರಣಕ್ಕಾಗಿ ಬೌದ್ಧ ಸಂಘಗಳ ರಚನೆ ಮಾಡಿ, ಲಕ್ಷಾಂತರ ಅನುಯಾಯಿಗಳ ಬೆಂಬಲ, ಹಾಗೂ ಕೋಸಲ, ರಾಜಗೃಹ, ವೈಶಾಲಿಯಂತಹ ಪ್ರಸಿದ್ಧ ರಾಜಮನೆತನಗಳ ರಾಜಾಶ್ರಯಗಳ ರಕ್ಷೆಯಲ್ಲಿ ಒಂದು ಹೊಸ ಧರ್ಮವನ್ನು ನೆಲೆಗೊಳಿಸಿ ದೈವತ್ವವನ್ನು ಪಡೆದುದರ ಬಗ್ಗೆ ನೋಡುತ್ತೇವೆ. ಬುದ್ಧನು ತನ್ನ ಸರಿಸುಮಾರು ೮೦ನೇ ವಯಸ್ಸಿಗೆ ಮಹಾನಿರ್ವಾಣಕ್ಕೆ ಒಳಗಾದ.

ಬ್ಯಾಚೆಲರ್ ಅವರ ಸಂಶೋಧನೆಯ ಪ್ರಕಾರ ಗೌತಮನು ಬುದ್ಧನಾದ ನಂತರದ ವಿವರಣೆಗಳು ಪ್ರಸ್ತುತ ಪ್ರಚಲಿತದಲ್ಲಿರುವ ವಿವರಣೆಗಳಿಂದ ತೀರಾ ವಿಭಿನ್ನವಾಗಿವೆ. ಪ್ರಾಚೀನ ಪಾಲಿ ಗ್ರಂಥಗಳಲ್ಲಿರುವ ಅನೇಕ ಅಂಶಗಳು ಬುದ್ಧನ ಕುರಿತು ಪ್ರಚಲಿತದಲ್ಲಿರುವ ಕಲ್ಪನೆಗಳಿಂದ ಬೇರೆಯವೇ ಆಗಿವೆ.

ಈ ಮೂರು ರಾಜ್ಯಗಳು ಬುದ್ಧನ ಚರಿತ್ರೆಯಲ್ಲಿ ಬಹಳ ನಿರ್ಣಾಯಕ ಪಾತ್ರ ವಹಿಸಿರುತ್ತವೆ.

೧. **ಕೋಸಲ ರಾಜ್ಯ** : ಇದರ ರಾಜಧಾನಿ ಶ್ರಾವಸ್ತಿ. ದೊರೆ ಪ್ರಸೇನಜಿತ್. ಇವನೊಬ್ಬ ಮರುಳನೂ, ಅತಿ ಸಂಶಯ ಪಿಶಾಚಿಯೂ ಆಗಿದ್ದ. ಬುದ್ಧನಿಗೆ ಆಶ್ರಯದಾತನಾಗಿದ್ದರೂ ಬುದ್ಧನ ತತ್ವಗಳನ್ನು ಮೊದಲಿಗೆ ಮಾನ್ಯ ಮಾಡಿರಲಿಲ್ಲ. ಬುದ್ಧಿಭ್ರಮಣಕ್ಕೆ ಒಳಗಾಗಿದ್ದ ಈತ ಒಬ್ಬ ಪರಹಿಂಸಾವಿನೋದಿಯಾಗಿದ್ದು, ಬುದ್ಧನನ್ನು ಅಪಾರ ಮಾನಸಿಕ ಹಿಂಸೆಗೆ ಗುರಿಪಡಿಸಿದ್ದ. ಇವನು ಮತ್ತು ಬುದ್ಧ ಸಮವಯಸ್ಕರಾಗಿದ್ದರು. ತನ್ನ ೪೦ನೇ ವಯಸ್ಸಿನಲ್ಲಿ ಬುದ್ಧನ ಭೇಟಿ ಪ್ರಸೇನಜಿತ್‌ನೊಡನೆ ಆಗುತ್ತದೆ. ಅಲ್ಲಿಂದ ಸುಮಾರು ೨೫ ವರ್ಷಗಳವರೆಗೆ ಶ್ರಾವಸ್ತಿಯಲ್ಲೇ ನೆಲೆಸಿರುತ್ತಾನೆ.

ಪುತ್ರಸಂತಾನವಿಲ್ಲದ ಪ್ರಸೇನಜಿತನು ಬುದ್ಧನ ವಂಶವಾದ ಶಾಕ್ಯ ವಂಶಕ್ಕೆ ಸೇರಿದ ಕನ್ಯೆಯನ್ನು ವರಿಸಲು ಇಚ್ಛಿಸುತ್ತಾನೆ. ಆದರೆ ತಮ್ಮ ವಂಶದ ಬಗ್ಗೆ ಅಪಾರ ಗರ್ವವಿದ್ದ ಶಾಕ್ಯರು ಯಾವುದೋ ಒಬ್ಬ ದಾಸಿಯ ಮಗಳನ್ನು ಶಾಕ್ಯ ವಂಶಸ್ಥಳೆಂದು ಹೇಳಿ ಪ್ರಸೇನಜಿತನಿಗೆ ಕೊಟ್ಟು ವಿವಾಹ ನಡೆಸುತ್ತಾರೆ. ಇವಳಿಗೆ ಹುಟ್ಟಿದವನೇ ವಿಡೂದಭ. ಈ ಸಂಚಿನ ಪ್ರಥಮ ರೂವಾರಿ ಮಹಾನಾಮ ಎಂಬ ಶಾಕ್ಯ ದೊರೆ - ಶುದ್ಧೋದನನ ಉತ್ತರಾಧಿಕಾರಿ. ಈತ ಬುದ್ಧನ ಸೋದರ ಸಂಬಂಧಿ.

ಜ್ಞಾನೋದಯದ ನಂತರ ಬುದ್ಧನು ತನ್ನ ಹಳೆಯ ಎಲ್ಲ ಸಂಬಂಧಗಳಿಂದ ದೂರವಾಗಿದ್ದ ಎಂಬ ವಿವರಣೆಗೆ

> ಬುದ್ಧನು ವಿಷಪೂರಿತ ಆಹಾರವನ್ನು ತಾನು ಮಾತ್ರ ಸೇವಿಸಿ, ತನ್ನ ಉಳಿದ ಶಿಷ್ಯರು ಆ ಆಹಾರವನ್ನು ಸೇವಿಸದಂತೆ ತಡೆದುದರ ಹಿಂದೆ ಒಂದು ಉದ್ದೇಶವಿತ್ತೆಂದು ಬ್ಯಾಚೆಲರ್ ತರ್ಕಿಸುತ್ತಾರೆ. ಬುದ್ಧನ ವಿರೋಧಿಗಳ ಗುರಿ ಬುದ್ಧನಾಗಿರದೆ ಅವನ ಪ್ರಮುಖ ಶಿಷ್ಯನಾದ ಆನಂದನಾಗಿದ್ದ.

ವಿರುದ್ಧವಾಗಿ ಬ್ಯಾಚೆಲರ್ ಬುದ್ಧ ತನ್ನ ಪರಿವಾರ, ಬಂಧು-ಬಾಂಧವರೊಂದಿಗೆ ರಾಜಿ ಮಾಡಿಕೊಂಡು ಅವರೊಂದಿಗೆ ನಿಕಟ ಸಂಬಂಧದಲ್ಲಿದ್ದನೆಂದು ವಾದಿಸುತ್ತಾರೆ. ಏಕೆಂದರೆ ಬುದ್ಧನ ಮೊದಲ ಅನುಯಾಯಿಗಳೆಂದರೆ ಆತನ ಪುತ್ರ ರಾಹುಲ, ಶಿಷ್ಯ ಆನಂದ, ಬುದ್ಧನ ಮಲತಾಯಿ 'ಮಹಾಪ್ರಜಾಪತಿ'. ಅವಳು ಮೊದಲ ಬೌದ್ಧ ಸನ್ಯಾಸಿನಿ, ಮಲಸಹೋದರ ಅನಿರುದ್ಧ, ಮಹಾನಾಮ, ದೇವದತ್ತ, ಇವರೆಲ್ಲರೂ ಆತನ ಸೋದರ ಸಂಬಂಧಿಗಳು.

ಹೀಗಾಗಿ ಮಹಾನಾಮನು ಎಸಗಿದ ವಂಚನೆಯು ಬುದ್ಧನ ಗಮನಕ್ಕೆ ಬಂದಿದ್ದರೂ, ಕೋಸಲದ ಆಶ್ರಯವನ್ನು ಕಳೆದುಕೊಳ್ಳಲು ತಯಾರಿಲ್ಲದ ಬುದ್ಧ ಮೌನ ವಹಿಸುವುದರ ಮೂಲಕ ಮೋಸಕ್ಕೆ ಮೂಕಸಾಕ್ಷಿಯಾಗುತ್ತಾನೆ. ಸತ್ಯದ ಪ್ರತಿಪಾದಕ ಬುದ್ಧ ಆತ್ಮವಂಚನೆಯ ಹಿಂಸೆಗೆ ಬಲಿಯಾದ.

೧೬ ವರ್ಷಗಳ ನಂತರ ಶಾಕ್ಯರ ಈ ವಂಚನೆಯು ಬಯಲಾದಾಗ ವಿದೂದಭನು ಶಾಕ್ಯವಂಶ ವನ್ನು ನಿರ್ಮೂಲನಗೆಯ್ಯುವ ಪ್ರತಿಜ್ಞೆಯನ್ನು ಕೈಗೊಂಡನು. ಕ್ರೋಧಾವಿಷ್ಟನಾದ ಪ್ರಸೇನಜಿತನು ಗುಲಾಮ ಪತ್ನಿ-ಪುತ್ರರಿಬ್ಬರ ತಲೆಯನ್ನು ಬೋಳಿಸಿ ಅವರನ್ನು ಗುಲಾಮಗಿರಿಗೆ ತಳ್ಳುತ್ತಾನೆ. ಪ್ರಸೇನಜಿತನನ್ನು ಒಲಿಸಿಕೊಳ್ಳುವುದರಲ್ಲಿ ಬುದ್ಧನು ಸಫಲನಾದರೂ ಕೋಸಲದ ಆಶ್ರಯ ಬುದ್ಧನ ಪಾಲಿಗೆ ಕೊನೆಗೊಂಡಿತು. ಅಲ್ಲಿಂದ ಬುದ್ಧನ ಅಲೆಮಾರಿ ಜೀವನ ಆರಂಭಗೊಳ್ಳುತ್ತದೆ.

**೨. ರಾಜಗೃಹ** : ಮುಂದೆ ರಾಜಗೃಹಕ್ಕೆ ತೆರಳಿದ ಬುದ್ಧ ಅಲ್ಪ ಕಾಲ ಬಿಂಬಸಾರನ ಆಶ್ರಯಕ್ಕೆ ಒಳಗಾದ. ಬಿಂಬಸಾರನು ಬೌದ್ಧ ಧರ್ಮವನ್ನು ಸ್ವೀಕರಿಸುತ್ತಾನೆ. ಸ್ವಲ್ಪ ಕಾಲದಲ್ಲೇ ಅವನ ಪುತ್ರ ಅಜಾತಶತ್ರುವು ತಂದೆ ಬಿಂಬಸಾರನ ಹತ್ಯೆಗೈದು ರಾಜಗೃಹದ ಸಿಂಹಾಸನವೇರಿದ. ಈತ ಜೈನ ಧರ್ಮಾನುಯಾಯಿ ಆಗಿದ್ದು ಬುದ್ಧನ ಅಸ್ತಿತ್ವಕ್ಕೆ ಸವಾಲಾದ ಹಾಗೂ ಬುದ್ಧನ ಶಿಷ್ಯನೂ, ತನ್ನ ಗುರುವೂ ಆಗಿದ್ದ ದೇವದತ್ತನೊಂದಿಗೆ ಪಿತೂರಿ ನಡೆಸಿ ರಾಜಗೃಹದಿಂದ ಬುದ್ಧನು ಹೊರನಡೆಯುವಂತೆ ಮಾಡಿದ.

ಇದೇ ಸಮಯದಲ್ಲಿ ಬುದ್ಧನ 'ಸಂಘ'ದಲ್ಲಿ ಆಂತರಿಕ ಬಂಡಾಯವೆದ್ದು ಬುದ್ಧನನ್ನು ಬೌದ್ಧ ಧರ್ಮದ ಮುಖ್ಯಸ್ಥನ ಸ್ಥಾನದಿಂದ ಪದಚ್ಯುತಗೊಳಿಸಲು ದೊಡ್ಡ ಪಿತೂರಿ ನಡೆಯುತ್ತದೆ. ಈ ಪಿತೂರಿಯ ರೂವಾರಿ ಬುದ್ಧನ ಸೋದರ ಸಂಬಂಧಿಯೂ, ಅಜಾತಶತ್ರುವಿನ ಗುರುವೂ ಆದ ದೇವದತ್ತ. ಬುದ್ಧನಿಂದ ತನ್ನ ಕೊನೆಯ ದಿನಗಳಲ್ಲಿ ವೈಶಾಲಿಗೆ ಸ್ಥಳಾಂತರ.

**೩. ವೈಶಾಲಿ** : ಆರಂಭದ ದಿನಗಳಲ್ಲಿ ವೈಶಾಲಿಯ ಲಿಚ್ಛವಿ ರಾಜಮನೆತನದಿಂದಲೂ ಹಾಗೂ ಇತರ ಕುಲೀನ ಜನರಿಂದಲೂ ಅಪೂರ್ವ ರಾಜಾಶ್ರಯ ಪ್ರಾಪ್ತವಾಗಿದ್ದರೂ, ಅಂತಿಮ ದಿನಗಳಲ್ಲಿ ಬುದ್ಧ ಅಲ್ಲಿಯೂ ಮನ್ನಣೆಯನ್ನು ಕಳೆದುಕೊಳ್ಳಲಾರಂಭಿಸಿದ್ದ. ಆತನ ಮಾಜಿ ಅನುಯಾಯಿಯೂ, ಪೋಷಕನೂ ಆಗಿದ್ದ ವೈಶಾಲಿಯ ಸುನಕದತ್ತನು ವೈಶಾಲಿಯ ಬೌದ್ಧ ಸಮ್ಮೇಳನದಲ್ಲಿ ಆತನನ್ನು ಸುಳ್ಳುಗಾರನೆಂದು ಬಹಿರಂಗವಾಗಿಯೇ ಜರೆದಿದ್ದ. ಹೀಗಾಗಿ ಕೊನೆಯ ದಿನಗಳನ್ನು ಬುದ್ಧನು ವೈಶಾಲಿಯ ತನ್ನ ವೈಭವಯುತ ನೆಲೆಗೆ ಬದಲಾಗಿ ಊರ ಹೊರಗಿನ ಪ್ರದೇಶದಲ್ಲಿ ನೆಲೆಸಬೇಕಾಯಿತು.

**ಆಂತರಿಕ ಬಂಡಾಯ**

ಬುದ್ಧನ ಕೊನೆಯ ದಿನಗಳು ವೃದ್ಧಾಪ್ಯದ ಬೇಗೆಯಿಂದಲೂ, ಆತನ ವಿರುದ್ಧದ ಬಂಡಾಯಗಳಿಂದಲೂ ದಾರುಣಮಯವಾಗಿದ್ದವು. ದೇವದತ್ತನು ಬುದ್ಧನನ್ನು ಪದಚ್ಯುತ ಗೊಳಿಸಲು ಅನೇಕ ಪ್ರಯತ್ನಗಳನ್ನೂ ಹಾಗೂ ಬುದ್ಧನನ್ನು ಹತ್ಯೆಗೈಯ್ಯುವ ಪ್ರಯತ್ನಗಳನ್ನೂ ನಡೆಸುತ್ತಾನೆ. ಬಂಡಾಯಗಾರರು ಬುದ್ಧನ ಇಳಿವಯಸ್ಸಿನ ನೆಪವೊಡ್ಡಿ ಉತ್ತರಾಧಿಕಾರಿಗೆ ಒತ್ತಾಯಿಸುತ್ತಾರೆ. ಇದಕ್ಕೊಪ್ಪದ ಬುದ್ಧ ''ತನ್ನ ತತ್ವಗಳೇ ತನ್ನ ಉತ್ತರಾಧಿಕಾರಿಗಳು'' ಎಂದು ವಾದಿಸಿ ಪದತ್ಯಾಗವನ್ನು ಸಾರಾಸಗಟಾಗಿ ನಿರಾಕರಿಸುತ್ತಾನೆ. ದೇವದತ್ತನ ಬಣ ಬುದ್ಧನ 'ಸಂಘ'ದಿಂದ ಹೊರಬರುತ್ತದೆ. ಆದರೆ ನಂತರದಲ್ಲಿ ಬುದ್ಧನ ಪ್ರಮುಖ ಶಿಷ್ಯರಾದ ಮೊಗ್ಗಲ್ಲಾನ ಮತ್ತು ಸಾರಿಪುತ್ರರು ದೇವದತ್ತನನ್ನು ಸಮಾಧಾನಗೊಳಿಸಿ, ಪುನಃ ಭಿನ್ನಮತೀಯರನ್ನು ಸಂಘದ ಒಳಗೆ ತರುವಲ್ಲಿ ಯಶಸ್ವಿಯಾಗುತ್ತಾರೆ.

**ಜೈನರ ದಾಳಿ**

ಜೈನರೂ ಸಹ ಬುದ್ಧನ ಏಳಿಗೆಗೆ ಪ್ರಬಲ ತಡೆಯನ್ನೊಡ್ಡುತ್ತಾರೆ. ಜೈನ ಅನುಯಾಯಿ ಗಳಿಂದ ಅವನ ಪ್ರಮುಖ ಶಿಷ್ಯರಾದ ಮೊಗ್ಗಲ್ಲಾನ ಮತ್ತು ಸಾರಿಪುತ್ರರ ಕೊಲೆಯಾಗುತ್ತದೆ. ಈ ಘಟನೆಯು ಬುದ್ಧನನ್ನು ಶಿಥಿಲಗೊಳಿಸುತ್ತದೆ. ರಾಜಗೃಹವನ್ನು ಬುದ್ಧನು ತ್ಯಜಿಸಲು ಕಾರಣ ಅಲ್ಲಿಯ ರಾಜ ಅಜಾತಶತ್ರುವು ಜೈನ ಧರ್ಮೀಯನಾಗಿದ್ದುದು ಇದಕ್ಕೆ ಪುಷ್ಟಿಯನ್ನು ಒದಗಿಸುತ್ತದೆ.

ಬುದ್ಧನ ಅಂತ್ಯವು ಜೈನರ ಕೇಂದ್ರ ನೆಲೆಯಾಗಿದ್ದ ಪಾವಾದಲ್ಲೇ ಸಂಭವಿಸಿದ್ದುದು ಬುದ್ಧನ ಸಾವಿನಲ್ಲಿ ಜೈನರ ಪಾತ್ರಕ್ಕೆ ಪುರಾವೆಯಾಗಿದೆ. ಇತ್ತ ಬುದ್ಧನ ಜನ್ಮಸ್ಥಾನವನ್ನು ಬುಧಾಬನು ತನ್ನ ಹಿಂದಿನ ಪ್ರತಿಜ್ಞೆಗೆ ಅನುಗುಣವಾಗಿ ದಾಳಿ ಮಾಡಿ ಶಾಕ್ಯರ ಅಮಾನುಷ ಹತ್ಯೆಗೆ ತೊಡಗುತ್ತಾನೆ. ನೊಂದ ಬುದ್ಧ ಕಪಿಲವಸ್ತುಗೆ ಹಿಂದಿರುಗಲು ನಿರ್ಧರಿಸಿದ. ಕೇವಲ ತನ್ನ ಬೆರಳೆಣಿಕೆಯ ಶಿಷ್ಯರೊಂದಿಗೆ ಹಿಂತಿರುಗುತ್ತಿದ್ದಾಗ ದಾರಿ ಮಧ್ಯದ ಪಾವಾ ಗ್ರಾಮದಲ್ಲಿ ತಂಗುತ್ತಾನೆ. ಬುದ್ಧನ ಉಚ್ಛ್ರಾಯ ಕಾಲದಲ್ಲಿ ಅವನ ವಾಸ ಅಥವಾ ತಂಗುದಾಣಗಳು ಶ್ರೀಮಂತರಿಂದ ಮತ್ತು ರಾಜಾತಿಥ್ಯಗಳಿಂದ ತುಂಬಿತುಳುಕುತ್ತಿತ್ತು. ಆದರೆ ಪಾವಾದಲ್ಲಿ ಬುದ್ಧನನ್ನು ಕೇಳಲು ಈಗ ಯಾರೂ ಇರಲಿಲ್ಲ. ಚುಂದನೆಂಬ ಕಸಾಯಿ ಅಥವಾ ಕಮ್ಮಾರನು ಬುದ್ಧನಿಗೆ ಆತಿಥ್ಯವನ್ನು ನೀಡುತ್ತಾನೆ. ಪಾಲಿ ಗ್ರಂಥಗಳಲ್ಲಿ ಉದ್ಧರಿಸಿದ್ದಂತೆ ಚುಂದನು ಬುದ್ಧನಿಗೆ 'ಸೂಕರ ಮದ್ದವ' ಅಂದರೆ ಮೃದುವಾಗಿ ಬೆಂದ ಹಂದಿಮಾಂಸವನ್ನು ಆಹಾರವಾಗಿ ನೀಡುತ್ತಾನೆ. ಅದನ್ನು ಸ್ವೀಕರಿಸುತ್ತಿದ್ದಂತೆ ಅದು ವಿಷ ಪೂರಿತವಾಗಿದ್ದುದಾಗಿ ಸಂಶಯಗೊಂಡ ಬುದ್ಧ ಅದನ್ನು ತನಗೆ ಮಾತ್ರ ಕೊಡಬೇಕೆಂದೂ, ಉಳಿದುದನ್ನು ಮಣ್ಣಲ್ಲಿ ಹುಗಿಯಬೇಕೆಂದೂ ಬಿನ್ನವಿಸಿದ. ಆಹಾರ ಸೇವನೆಯ ನಂತರ ತೀವ್ರ ರಕ್ತಭೇದಿಗೆ ಬಲಿಯಾಗಿ ಅಸ್ವಸ್ಥನಾದ. ಇಲ್ಲಿಂದ ಕೂಡಲೆ ಕುಶಿನಗರಕ್ಕೆ ಸಾಗೋಣವೆಂದು ಒತ್ತಾಯಿಸತೊಡಗಿದನೆಂಬ ಉಲ್ಲೇಖವಿದೆ. ಪಾವಾದಿಂದ ದೂರಸಾಗಬೇಕೆಂಬ ಬುದ್ಧನ ಒತ್ತಾಯದ ಹಿಂದೆ ಪಾವಾವು ಸುರಕ್ಷಿತವಲ್ಲವೆಂಬ ಭಾವನೆ ಬುದ್ಧನಲ್ಲಿತ್ತು ಎಂಬುದು ಬ್ಯಾಚೆಲರ್ ಅವರ ತರ್ಕ. ಪಾವಾ ಗ್ರಾಮವು ಮಹಾವೀರನ ನಿರ್ವಾಣ ಸ್ಥಳವಾಗಿದ್ದು ಜೈನರ ಪ್ರಮುಖ ನೆಲೆಯಾಗಿತ್ತು ಮತ್ತು ಬುದ್ಧನ ಇಬ್ಬರು ಪ್ರಿಯ ಶಿಷ್ಯರ ಹತ್ಯಾಸ್ಥಳವೂ ಆಗಿದ್ದಿತು.

ಬುದ್ಧನು ಈ ವಿಷಪೂರಿತ ಆಹಾರವನ್ನು ತಾನು ಮಾತ್ರ ಸೇವಿಸಿ, ತನ್ನ ಉಳಿದ ಶಿಷ್ಯರು ಆ ಆಹಾರವನ್ನು ಸೇವಿಸದಂತೆ ತಡೆದುದರ ಹಿಂದೆ ಒಂದು ಉದ್ದೇಶವಿತ್ತೆಂದು ಬ್ಯಾಚೆಲರ್ ತರ್ಕಿಸುತ್ತಾರೆ. ಬುದ್ಧನ ವಿರೋಧಿಗಳ ಗುರಿ ಬುದ್ಧನಾಗಿರದೆ ಅವನ ಪ್ರಮುಖ ಶಿಷ್ಯನಾದ ಆನಂದನಾಗಿದ್ದ. ಬುದ್ಧನ ಎಲ್ಲ ತತ್ವಗಳನ್ನೂ, ಬೋಧನೆಗಳನ್ನೂ, ತನ್ನ ಅಪಾರ ನೆನಪಿನ ಶಕ್ತಿಯಿಂದ ಯಥಾವತ್ ದಾಖಲಿಸಿಕೊಂಡ ಆನಂದ ಬುದ್ಧನ ಸಿದ್ಧಾಂತ ಗಳನ್ನು ಮುಂದಿನ ತಲೆಮಾರಿಗೆ ದಾಟಿಸುವ ಏಕೈಕ ಕೊಂಡಿಯಾಗಿದ್ದ. ಹೀಗಾಗಿ ಬುದ್ಧನ ವಿರೋಧಿಗಳು ಪಾವಾದಲ್ಲಿ ಆನಂದನನ್ನೂ ವಿಷಾಹಾರವನ್ನು ಸೇವಿಸುವಂತೆ ಮಾಡಿ ಹತ್ಯೆಗೈಯ್ಯಲು ಸಂಚು ಹೂಡಿದ್ದರು ಎಂದು ಬ್ಯಾಚೆಲರ್ ಅವರ ವಾದ. ಇದನ್ನು ಅರಿತ ಬುದ್ಧನು ತಾನು ಮಾತ್ರ ಆ ವಿಷಾಹಾರವನ್ನು ತೆಗೆದುಕೊಂಡು ಉಳಿದವರು ಅದನ್ನು ಮುಟ್ಟದಿರುವಂತೆ ಮಾಡುತ್ತಾನೆ.

ಬುದ್ಧನ ಮರಣಾನಂತರ ಉತ್ತರಾಧಿಕಾರಕ್ಕೆ ನಡೆದ ಸಂಘರ್ಷದ ಪರಿಣಾಮ ಬೌದ್ಧ ಸಮಾಜದ ಒಡೆತನವು ಬುದ್ಧನ ಕೊನೆಗಾಲದಲ್ಲಿ 'ಸಂಘ'ವನ್ನು ಸೇರಿದ ಮಹಾಕಶ್ಯಪ ನೆಂಬ ಬ್ರಾಹ್ಮಣನ ಕೈ ಸೇರುತ್ತದೆ.

**ಬುದ್ಧನ ಹತಾಶ ಪಯಣ**

ಒಟ್ಟಿನಲ್ಲಿ ಬೌದ್ಧ ಧರ್ಮ ಸಂಸ್ಥಾಪನೆಯ ಹಾದಿಯಲ್ಲಿ ಬುದ್ಧನಿಗೆ ದೊರಕಿದ ರಾಜಾಶ್ರಯಗಳೆಲ್ಲವೂ ಆತನನ್ನು ತೀವ್ರ ಬಿಕ್ಕಟ್ಟಿನ ಸಂದಿಗ್ಧಗಳಿಗೂ, ಮಾನಸಿಕ ಹಿಂಸೆಗೂ ಗುರಿಪಡಿಸಿದ್ದಲ್ಲದೆ ಬುದ್ಧನು ಶಕ್ತ ರಾಜಕಾರಣದ ದಾಳವಾಗಿದ್ದ. ಬೌದ್ಧ ಸಂಘಾರಾಮಗಳು ಬುದ್ಧನ ವಿರೋಧೀ ಬಂಡಾಯದ ಮತ್ತು ಸನ್ಯಾಸಿಗಳ ಪಿತೂರಿಯ ತಾಣಗಳಾಗಿ ಮಾರ್ಪಟ್ಟಿದ್ದವು. ಅಹಿಂಸಾವಾದಿ ಜೈನ ಧರ್ಮೀಯರೇ ಬುದ್ಧನ ಹತ್ಯೆಗೆ ಕಾರಣವಾಗಿದ್ದು ಒಂದು ವಿಕಟಸತ್ಯ. ವೈದಿಕ ಸಂಪ್ರದಾಯದ ವಿರುದ್ಧದ ಬಂಡಾಯವಾಗಿ ರೂಪತಳೆದ ಬೌದ್ಧ ಧರ್ಮದ ಒಡೆತನವು ಬುದ್ಧನ ಮರಣಾನಂತರ ಬ್ರಾಹ್ಮಣನೊಬ್ಬನ ಕೈಸೇರಿದ್ದು ಮತ್ತೊಂದು ಕ್ರೂರ ವಿಡಂಬನೆಯಾಗಿದ್ದು ಬುದ್ಧನ ಪಯಣವು ಒಂದು ಹೊಸ ಧರ್ಮ ಸಂಸ್ಥಾಪನೆಯ ಹತಾಶ ಹೋರಾಟದ ದುರಂತ ಯಾನವಾಗಿಯೇ ಕಾಣುತ್ತದೆ.

ಆದರೂ, ಬುದ್ಧ ೨೫೦೦ ವರ್ಷಗಳ ನಂತರದ ಇಂದಿಗೂ ಪ್ರಿಯನೆನಿಸುತ್ತಾನೆ. ಜನಪರ ಹೋರಾಟಗಳನ್ನು ದುರ್ಬಲಗೊಳಿಸುವಲ್ಲಿ ಶಕ್ತ ರಾಜಕಾರಣದ ಪಾತ್ರದ ನಿದರ್ಶನವಾಗಿಯೂ ಬುದ್ಧ ಪ್ರಸ್ತುತನೆನಿಸುತ್ತಾನೆ. ಮಾತ್ರವಲ್ಲ, ಸಾಮಾಜಿಕ ನ್ಯಾಯಕ್ಕಾಗಿ ಹೋರಾಡಿ ತಾತ್ಕಾಲಿಕ ವಿಜಯ ಪ್ರಾಪ್ತವಾಗುತ್ತಲೇ ದೀರ್ಘ ನಿದ್ರೆಗೆ ಜಾರುವ ಇಂದಿನ ಯುವ ಹೋರಾಟಗಾರರಿಗೆ ಯಶಸ್ಸಿನ ಸ್ಥಿರೀಕರಣಕ್ಕೆ ಶಾಶ್ವತ ಜಾಗೃತಾವಸ್ಥೆ ಅವಶ್ಯ ಎಂಬ ಸಂದೇಶವನ್ನು ನೀಡುತ್ತಾನೆ. ಸ್ಥಿರೀಕೃತ ವ್ಯವಸ್ಥೆಯೊಂದರ ವಿರುದ್ಧದ ಅನವರತ ಹೋರಾಟದಲ್ಲಿ ದಶದಿಕ್ಕುಗಳಿಂದಲೂ ಎದುರಾಗುವ ದಮನಕಾರೀ ಕ್ರಮಗಳನ್ನೂ ಬುದ್ಧನ ಜೀವನ ಪರಿಚಯಿಸುತ್ತದೆ. ವ್ಯಕ್ತಿಗಿಂತಲೂ ತತ್ವಕ್ಕೆ ಬದ್ಧನಾಗಿದ್ದ ಬುದ್ಧ ಇಂದಿನ ತಾತ್ವಿಕ,ವೈಚಾರಿಕ ಪ್ರತಿಭಟನಾ ಮಾನಸಕ್ಕೆ ಪ್ರಿಯನೆನಿಸುತ್ತಾನೆ.

( ಸಾಧಾರ)

ಪಿ. ರತ್ನಾವತಿ
ಆಯ್ಕೆಶ್ರೇಣಿ ಇತಿಹಾಸ ಉಪನ್ಯಾಸಕಿ, ಸರ್ಕಾರಿ ಪದವಿ ಕಾಲೇಜು
ಆಲೂರು, ಹಾಸನ ಜಿಲ್ಲೆ




# ಹಂಗೇರಿಯಲ್ಲಿ ೨೧ ದಿನಗಳು

ಡಾ॥ ಹೇಮಲತಾ ಎಚ್. ಎಂ.

೨೦೦೯ರ ಸೆಪ್ಟೆಂಬರ್ ತಿಂಗಳಲ್ಲಿ ಪೂರ್ವ ಯೂರೋಪಿನ ಹಂಗೆರಿ ರಾಷ್ಟ್ರಕ್ಕೆ ಹೋಗುವ ಅವಕಾಶ ದೊರಕಿತ್ತು. ಯು.ಜಿ.ಸಿ. ಹಾಗೂ ಹಂಗೆರಿ ಸರ್ಕಾರದ ಸಹಯೋಗದಲ್ಲಿ ನಡೆಯುತ್ತಿರುವ 'ಇಂಡೋ-ಹಂಗೆರಿಯನ್ ಎಜುಕೇಷನಲ್ ಎಕ್ಸ್‌ಚೇಂಜ್ ಪ್ರೋಗ್ರಾಮ್' ಅಡಿಯಲ್ಲಿ ಅಲ್ಪಾವಧಿಯ ಸ್ಕಾಲರ್‌ಶಿಪ್ ದೊರಕಿದ್ದ ಹಿನ್ನೆಲೆಯಲ್ಲಿ ೨೧ ದಿನಗಳ ಕಾಲ ಹಂಗೆರಿಗೆ ಭೇಟಿ ನೀಡಿದ್ದೆ – ಸಂಶೋಧನೆ, ಉಪನ್ಯಾಸ ಹಾಗೂ ಮಹಿಳಾ ಸಂಘಟನೆಗಳನ್ನು ಭೇಟಿ ಮಾಡುವ ಶೈಕ್ಷಣಿಕ ಕಾರ್ಯಗಳನ್ನು ಹಮ್ಮಿಕೊಂಡಿದ್ದೆ. ಅತ್ಯಂತ ಕಡಿಮೆ ಅವಧಿಯಲ್ಲಿ ಯೋಜಿಸಿದ್ದ ಎಲ್ಲ ಕಾರ್ಯಗಳನ್ನು ಪೂರ್ಣಗೊಳಿಸಲಾಗದಿದ್ದರೂ ಕೆಲವನ್ನು ಪೂರ್ಣಗೊಳಿಸಲು ಪ್ರಯತ್ನಿಸಿದೆ. ಅಲ್ಲಿಯ ಒಂದು ಅನುಭವ, ನಾನು ಕಂಡ ಸ್ಥಳ ಮತ್ತು ಜನರ ಬಗ್ಗೆ ಓದುಗರೊಂದಿಗೆ ಹಂಚಿಕೊಳ್ಳುವುದು ಈ ಲೇಖನದ ಉದ್ದೇಶ.

ಪ್ರಾರಂಭದಲ್ಲಿ ಹಂಗೆರಿ ಬಗ್ಗೆ ಹೇಳುವುದಾದರೆ ಇದೊಂದು ಪುಟ್ಟ ರಾಷ್ಟ್ರ. ೯೩,೦೩೦ ಸ್ಕ್ವೇರ್ ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ. ಜನಸಂಖ್ಯೆ ಸುಮಾರು ೧೦ ಕೋಟಿ. ೧೯೮೦ರ ದಶಕದವರೆಗೆ ಸಮಾಜವಾದಿ ಗಣರಾಜ್ಯವಾಗಿ ಹೆಸರು ಮಾಡಿತ್ತು. ೧೯೯೦ರಲ್ಲಿ ಪ್ರಜಾಪ್ರಭುತ್ವ ಗಣರಾಜ್ಯವಾಗಿ ರೂಪುಗೊಂಡಿತು. ಇದರ ರಾಜಧಾನಿ ಬುಡಾಪೆಸ್ಟ್ ಚಿಕ್ಕ ನಗರವಾಗಿದ್ದು, ಇಪ್ಪತ್ತು ಲಕ್ಷ ಜನಸಂಖ್ಯೆ ಹೊಂದಿದೆ. ಅನೇಕ ಪ್ರೇಕ್ಷಣೀಯ ಸ್ಥಳಗಳನ್ನು ಹೊಂದಿದೆ. ನಗರವು ಬುಡಾ ಮತ್ತು ಪೆಸ್ಟ್ ಎರಡು ಭಾಗಗಳನ್ನು ಹೊಂದಿದ್ದು ಇವೆರಡನ್ನೂ ಡ್ಯಾನ್ಯೂಬ್ ಎಂಬ ನದಿಯು ಜೋಡಿಸುತ್ತದೆ. ಅದಕ್ಕೆ ೯ ಸೇತುವೆಗಳನ್ನು ಕಟ್ಟಲಾಗಿದೆ. ಊರಿನ ಮಧ್ಯದಲ್ಲಿದ್ದರೂ ನದಿಯ ಸ್ವಚ್ಛತೆಯನ್ನು ಕಾಪಾಡಲಾಗಿದೆ. ಹಂಗೆರಿ ರಾಷ್ಟ್ರವು ೧೯ ಕೌಂಟೀಸ್, ೧೬೬ ಪಟ್ಟಣ ಹಾಗೂ ೨೯೦೪ ಗ್ರಾಮಗಳನ್ನು ಹೊಂದಿದೆ. ಹವಾಗುಣವು ಮಾಡರೇಟ್ ಆಗಿದ್ದು ಕಡಿಮೆಯೆಂದರೆ ಜನವರಿಯಲ್ಲಿ ೨ ಡಿಗ್ರಿ ಸೆ. ಹಾಗೂ ಜುಲೈನಲ್ಲಿ ಗರಿಷ್ಠ ತಾಪಮಾನ ೨೩ ಡಿಗ್ರಿ ಸೆ. ಹೊಂದಿರುತ್ತದೆ. ಫಿನೋಜರ್ಜಿಕ್ ಬುಡಕಟ್ಟು ಭಾಷೆಯಿಂದ ಹುಟ್ಟಿಕೊಂಡ ಹಂಗೆರಿ ಭಾಷೆ ಆಡುಭಾಷೆಯಾಗಿದೆ. ಅಲ್ಲಿಯ ಹಣ ಫ್ಲೋರಿಂಟ್ಸ್ (HUF). ಒಂದು ಯೂರೋಗೆ ೨೬೦ ಫ್ಲೋರಿಂಟ್ಸ್. (ಒಂದು ಡಾಲರಿಗೆ ೧೭೬.೨೫ HUF). ರೋಮನ್ ಕ್ಯಾಥೋಲಿಕ್ ಪ್ರಧಾನ ಧರ್ಮವಾಗಿದ್ದು, ಯಹೂದಿಗಳೂ, ಪ್ರೊಟೆಸ್ಟೆಂಟ್‌ಗಳೂ ಇದ್ದಾರೆ.

ಬುಡಾಪೆಸ್ಟ್ ನಗರದ ವಿಶೇಷವೆಂದರೆ ಇಡೀ ನಗರ ಮೂರು ನಾಲ್ಕು ಅಂತಸ್ತಿನ ಹಳೆಯ ಕಾಲದ ಕಟ್ಟಡಗಳಿಂದ ಕೂಡಿದೆ. ಸಾರಿಗೆ ವ್ಯವಸ್ಥೆ ಚೆನ್ನಾಗಿದೆ. ಮೆಟ್ರೋ, ಟ್ರಾಮ್ ಹಾಗೂ ಬಸ್ಸುಗಳ ಓಡಾಟ ತುಂಬ ಅನುಕೂಲಕರವಾಗಿದೆ. ಒಂದೇ ಟಿಕೆಟನ್ನು ಮೂರು ಸಾರಿಗೆಗಳಿಗೂ ಬಳಸಬಹುದು. ದಿನನಿತ್ಯ ಓಡಾಡುವವರು ಪಾಸ್ ಮಾಡಿಸಿಕೊಂಡಿರುತ್ತಾರೆ. ಬಸ್‌ಗಳಲ್ಲಿ ಕಂಡಕ್ಟರ್‌ಗಳಿರುವುದಿಲ್ಲ. ಟಿಕೆಟ್ ಕೊಂಡವರು ಬಸ್ ಅಥವಾ ಟ್ರಾಮ್ ಮಷೀನ್‌ಗಳಿಗೆ ಒತ್ತಬೇಕು. ಪ್ರತಿ ಸ್ಟಾಪ್‌ನಲ್ಲೂ ಅದರ ಹೆಸರು ಅಲ್ಲಿಂದ ಯಾವ ಬಸ್ ಅಥವಾ ಟ್ರಾಮ್‌ಅನ್ನು ತೆಗೆದುಕೊಳ್ಳಬಹುದೆಂದು ಅನೌನ್ಸ್ ಆಗುತ್ತಿರುತ್ತದೆ, ಅದರ ಬೋರ್ಡ್ ಕೂಡ ಇರುತ್ತದೆ. ಇಡೀ ಊರಿನಲ್ಲಿ ಎಲ್ಲೂ ಮಣ್ಣಿನ ಫುಟ್‌ಪಾತ್ ಇರಲಿಲ್ಲ. ಪ್ರತಿ ೧೦ ಅಡಿಗೆ ಒಂದೊಂದು ಡಸ್ಟ್‌ಬಿನ್ ಇಟ್ಟಿರುತ್ತಾರೆ. ಕೆಲವು ಜನಸಂದಣಿಗಳಲ್ಲಿ ಬಿಟ್ಟರೆ ಉಳಿದೆಡೆ ಊರು ಸ್ವಚ್ಛವಾಗಿಟ್ಟಿರುವುದು ಕಂಡುಬಂದಿತು. ನೀರು ಹಾಗೂ ವಿದ್ಯುಚ್ಛಕ್ತಿ ವ್ಯವಸ್ಥೆಯು ಸುವ್ಯವಸ್ಥಿತವಾಗಿತ್ತು. ಇಷ್ಟೆಲ್ಲ ಅನುಕೂಲವಿದ್ದರೂ ಅವರು ತೃಪ್ತರಾಗಿರುವಂತೆ ಕಂಡುಬರುತ್ತಿರಲಿಲ್ಲ. ಬಹುಶಃ ಅನುಕೂಲ ಹೆಚ್ಚಿದಷ್ಟು ಜನರು ಅಸಹನೀಯರಾಗುತ್ತಾರೇನೋ ? ನಾನಿದ್ದಾಗ ಒಮ್ಮೆ ಎಲ್ಲೋ ಅಪಘಾತವಾಗಿ ಟ್ರಾಮ್ ಮತ್ತು ಬಸ್‌ಗಳು ಒಂದು ಗಂಟೆಕಾಲ ನಿಲುಗಡೆಯಾದವು. ಜನರು ಎಷ್ಟು ತಾಳ್ಮೆ ಕಳೆದುಕೊಂಡರೆಂದರೆ ''ಇನ್ನೇನು, ಇದು ಹಂಗೆರಿಯಲ್ಲವೆ'' ಎಂದು ಗೊಣಗುಟ್ಟುತ್ತಿದ್ದರು.

ದೊಡ್ಡ ಕಟ್ಟಡಗಳಿಗೆ ನೇರ ಪ್ರವೇಶವಿರುವುದಿಲ್ಲ. ದೊಡ್ಡ ದೊಡ್ಡ ಬಾಗಿಲುಗಳ ಮುಂದೆ ಒತ್ತು ಬಟನ್‌ಗಳಿರುವ ಮೆಷಿನ್ ಇರುತ್ತದೆ. ನಾನು ಹೋಗಬೇಕಿರುವ ಮನೆ ಅಥವಾ ಕಛೇರಿ ನಂಬರನ್ನು ಒತ್ತಿದರೆ ಅವರು ಪ್ರತಿಕ್ರಿಯಿಸಿದರೆ ಬಾಗಿಲು ತೆರೆದುಕೊಳ್ಳುತ್ತದೆ. ಮೂರು ನಾಲ್ಕು ಅಂತಸ್ತಿನ ಕಟ್ಟಡಗಳಾದ್ದರಿಂದ ಪ್ರತಿ ಕಟ್ಟಡದಲ್ಲೂ ಲಿಫ್ಟ್ ಕಡ್ಡಾಯವಾಗಿರುತ್ತದೆ. ಹಂಗೆರಿ ಅಭಿವೃದ್ಧಿಶೀಲ ರಾಷ್ಟ್ರವಾದರೂ ಭಾರತಕ್ಕೆ ಹೋಲಿಸಿದರೆ ಮೂಲ ಸೌಕರ್ಯಗಳು ಚೆನ್ನಾಗಿವೆ. ಬಹುಶಃ ಭೌಗೋಳಿಕ ವಿಸ್ತಾರ ಮತ್ತು ಜನಸಂಖ್ಯೆಯ ದೃಷ್ಟಿಯಿಂದ ಎರಡು ರಾಷ್ಟ್ರಗಳನ್ನು ಹೋಲಿಸುವುದು ಸರಿಯಿಲ್ಲವೇನೋ.

ಇನ್ನು ಹಂಗೆರಿಯ ಮಹಿಳೆಯರ ಕುರಿತು ನೋಡೋಣ. ನನ್ನ ಸಂಶೋಧನಾ ಕಾರ್ಯಕ್ಕೆ ಭಾರತ ಮತ್ತು ಹಂಗೆರಿ ಮಹಿಳೆಯರ ಸ್ಥಾನ ಕುರಿತು

ತುಲನಾತ್ಮಕ ಅಧ್ಯಯನವನ್ನು ಕೈಗೊಂಡೆ. ಇದಕ್ಕೆ ಆನುಷಂಗಿಕ ಮಾಹಿತಿ ಹಾಗೂ ನಾನು ಭೇಟಿಮಾಡಿದ ಪ್ರಾಧ್ಯಾಪಕರು, ಗೃಹಿಣಿಯರು, ವಿದ್ಯಾರ್ಥಿಗಳು ಇತರ ಉದ್ಯೋಗಸ್ಥ ಮಹಿಳೆಯರಿಂದ ಅನೌಪಚಾರಿಕವಾಗಿ ಸಂಗ್ರಹಿಸಿದ ಮಾಹಿತಿಯನ್ನು ಆಧಾರವಾಗಿಟ್ಟುಕೊಂಡು ಅಲ್ಲಿನ ಮಹಿಳೆಯರ ಕುರಿತು ಕೆಲವು ಅಂಶಗಳನ್ನು ಪ್ರಸ್ತುತಪಡಿಸುತ್ತೇನೆ. ಹಂಗೇರಿ ದೇಶದ ಮೂಲ ಸಮಸ್ಯೆಯೆಂದರೆ ಕುಸಿಯುತ್ತಿರುವ ಜನಸಂಖ್ಯೆ. ಅದರ ಜನನ ದರ -0.೧% ಇದೆ. ಮಹಿಳಾ ಶಿಕ್ಷಣ, ಸಶಕ್ತೀಕರಣ, ಸಂತಾನೋತ್ಪತ್ತಿಯ ಮೇಲಿನ ನಿಯಂತ್ರಣ, ವಿವಾಹ, ವಯಸ್ಸು, ಮಹಿಳಾ ದುಡಿಮೆ ಇವು ಜನಸಂಖ್ಯೆಯ ಬೆಳವಣಿಗೆ ಮೇಲೆ ಪ್ರಭಾವ ಬೀರುತ್ತವೆ ಎನ್ನುವುದನ್ನು ಹಂಗೇರಿಯಲ್ಲಿ ಸ್ಪಷ್ಟವಾಗಿ ಕಾಣಬಹುದು. ಮಹಿಳಾ ಸಾಕ್ಷರತೆ ಶೇಕಡಾ ೧೦೦ ಇದೆ. ಅವರ ದುಡಿಮೆಯು ಪ್ರಧಾನವಾಗಿದೆ. ವಿವಾಹದ ವಯಸ್ಸು ಸರಾಸರಿ ೩೦. ಮೊದಲ ಮಗುವನ್ನು ಹಡೆಯುವ ಹೊತ್ತಿಗೆ ೩೩ರಿಂದ ೩೪ ವರ್ಷವಾಗಿರುತ್ತದೆ. ವಿಚ್ಛೇದನದ ಪ್ರಮಾಣ ಹೆಚ್ಚು. ಜೀವನ ವೆಚ್ಚವು ದುಬಾರಿಯಾಗಿರುವುದರಿಂದ ಹೆಚ್ಚು ಮಕ್ಕಳನ್ನು ಹೊಂದಲು ಸಾಧ್ಯವಾಗುವುದಿಲ್ಲ. ಸ್ತ್ರೀಯರಿಗೆ ಸಂತಾನೋತ್ಪತ್ತಿಯ ಮೇಲೆ ನಿಯಂತ್ರಣವಿದೆ. ಈ ಎಲ್ಲ ಅಂಶಗಳು ಮಹಿಳೆಯರ ಸಶಕ್ತತೆಯನ್ನು ಸೂಚಿಸುವುದಾದರೂ ಜನಸಂಖ್ಯೆ ಬೆಳವಣಿಗೆ ದೃಷ್ಟಿಯಿಂದ ನಕಾರಾತ್ಮಕವಾಗಿ ಪರಿಣಮಿಸಿದೆ. ಸರ್ಕಾರ ಜನಸಂಖ್ಯೆ ಹೆಚ್ಚಳಕ್ಕೆ ಪ್ರಯತ್ನ ಮಾಡುತ್ತಿದೆ. ಅದಕ್ಕಾಗಿ ಅನೇಕ ಸಾಮಾಜಿಕ ಸುರಕ್ಷಾ ಕಾಯಿದೆಗಳನ್ನು ಅಳವಡಿಸಿಕೊಂಡಿದೆ. ಕುಟುಂಬ ಭತ್ಯೆ ಮತ್ತು ಮಕ್ಕಳ ಭತ್ಯೆಗಳನ್ನು ನೀಡುತ್ತಿದೆ. ಆದರೂ ಜನಸಂಖ್ಯೆಯನ್ನು ಹೆಚ್ಚಿಸಲು ಸಾಧ್ಯವಾಗುತ್ತಿಲ್ಲ.


ಹಂಗೇರಿ ಜಾನಪದ ನೃತ್ಯ

ಕಮ್ಯುನಿಸ್ಟ್ ಆಡಳಿತದಲ್ಲಿ ಪ್ರಧಾನವಾಗಿದ್ದ ಮಹಿಳಾ ದುಡಿಮೆ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಕಡಿಮೆಯಾಗಿದೆ ಎಂದು ಹೇಳಲಾಗುತ್ತಿದೆ. ಆರ್ಥಿಕ ಹಿಂಜರಿತದಿಂದ ನಿರುದ್ಯೋಗ ಹೆಚ್ಚಾದರೂ ಸ್ತ್ರೀಯರ ಉದ್ಯೋಗದ ಮೇಲೆ ಹೆಚ್ಚು ಪ್ರಭಾವ ಬೀರಿಲ್ಲ. ಮನೆಗೆ ಹೋದ ಸ್ತ್ರೀಯರು ಪುನಃ ಉದ್ಯೋಗಕ್ಕೆ ಮರಳಿ ಬರಲಿಲ್ಲ, ಅಲ್ಲದೆ ಹೆಣ್ಣು ಮಕ್ಕಳು ಸೇವಾ ವಲಯದಲ್ಲಿ ಹೆಚ್ಚು ಕೇಂದ್ರೀಕೃತರಾಗಿದ್ದು, ತಂತ್ರಜ್ಞಾನದ ಬೆಳವಣಿಗೆ ಅವರ ಉದ್ಯೋಗಾವಕಾಶಗಳನ್ನು ಹೆಚ್ಚಿಸಿದೆ. ಭಾರತದಲ್ಲಿ ನಾನು ಕಾಣದಿರುವಂತಹ ಅಸಾಂಪ್ರದಾಯಿಕ ಮನೆಗಳಲ್ಲಿ ಹಂಗೇರಿಯ ಮಹಿಳೆಯರು ದುಡಿಯುತ್ತಿರುವುದು ಕಂಡುಬರುತ್ತದೆ. ಉದಾಹರಣೆ : ಮೆಟ್ರೋ ಮತ್ತು ಟ್ರಾಮ್‌ಗಳನ್ನು ಓಡಿಸುವವರಾಗಿ, ಟೂರಿಸ್ಟ್ ಗೈಡ್‌ಗಳಾಗಿ ಮಹಿಳೆಯರು ಕಂಡುಬಂದರು. ಆದರೂ ಜಂಡರ್ ಸ್ಟಡೀಸ್ ಪರಿಣತರೊಂದಿಗೆ ಮಾತನಾಡಿದಾಗ ಉದ್ಯೋಗ ವಲಯದಲ್ಲಿ ಜಂಡರ್ ತಾರತಮ್ಯವಿದ್ದು ಮಹಿಳೆಯರು ಕೆಳಸ್ತರದ ಕೆಲಸಗಳಲ್ಲಿ ಅಧಿಕ ಸಂಖ್ಯೆಯಲ್ಲಿದ್ದಾರೆ ಎಂದು ಹೇಳಿದರು. ಆಡಳಿತದ ಉನ್ನತ ಮಟ್ಟದಲ್ಲಿ ಅವರ ಸಂಖ್ಯೆ ತುಂಬ ಕಡಿಮೆಯಾಗಿದೆ. ದುಡಿಮೆಯಿಂದ ಸ್ತ್ರೀಯರು ಆರ್ಥಿಕವಾಗಿ ಬಲವಾಗಿದ್ದಾರೆ. ಸಹಜವಾಗಿ ಸಮಾನತೆ, ಸ್ವಾತಂತ್ರ್ಯವನ್ನು ಬಯಸುತ್ತಾರೆ. ಪುರುಷ ಪ್ರಧಾನ ವ್ಯವಸ್ಥೆಯು ಇದನ್ನು ಒಪ್ಪಿಕೊಳ್ಳದಿದ್ದಾಗ ಕುಟುಂಬದ ವಿಘಟನೆ ಉಂಟಾಗುತ್ತದೆ. ಅಂಕಿ-ಅಂಶಗಳ ಪ್ರಕಾರ ಶೇಕಡ ೫೦ ವಿವಾಹಗಳು ವಿಚ್ಛೇದನದಲ್ಲಿ ಕೊನೆಗೊಳ್ಳುತ್ತವೆ. ಆದರೆ ಪುರುಷರಂತೆ ಹೆಂಗಸರಿಗೂ ಮತ್ತೊಂದು ಮದುವೆಯಾಗಲು ಅವಕಾಶವಿದೆ. ಆದರೆ ಹೊಂದಾಣಿಕೆಯಿಂದ ದೂರವಾಗಿ ಮತ್ತೊಂದು ಸಂಬಂಧ ಹುಡುಕಿಕೊಂಡು ಹೋಗುತ್ತಾ ಜೀವನದಲ್ಲಿ ನೆಮ್ಮದಿಯಿಲ್ಲದೆ ಆತಂಕಗೊಂಡಿರುವುದು ವೈಯಕ್ತಿಕವಾಗಿ ಭೇಟಿ ಮಾಡಿದ ಅನೇಕ ಮಹಿಳೆಯರಲ್ಲಿ ಕಂಡುಬಂದಿತು.


ಸೆಂಟ್ರಲ್ ಯೂರೋಪಿಯನ್ ಯೂನಿವರ್ಸಿಟಿ
ಮುಂಭಾಗದಲ್ಲಿ ಲೇಖಕಿ

ಸ್ತ್ರೀಯರು ಸಬಲರಾಗಿರುವುದೇ ಅವರ ಮೇಲಿನ ದೌರ್ಜನ್ಯಕ್ಕೆ ಕಾರಣವೇನೋ ಎಂಬಂತೆ ಹಂಗೇರಿಯಲ್ಲಿ ಸ್ತ್ರೀ ದೌರ್ಜನ್ಯವು ಅಧಿಕವಾಗಿದೆ. ಅದರಲ್ಲೂ ಕೌಟುಂಬಿಕ ಹಿಂಸೆ ಹೆಚ್ಚಾಗಿದ್ದು, ಅದನ್ನು ನಿರ್ವಹಿಸಲು ಸರ್ಕಾರ-ಸರ್ಕಾರೇತರ ಸಂಸ್ಥೆಗಳು ಕೆಲಸ ಮಾಡುತ್ತಿವೆ. 'ನಾನೆ' ಎಂಬ ಸಂಸ್ಥೆ ಮಹಿಳೆಯರ ಮೇಲಿನ ದೌರ್ಜನ್ಯವನ್ನು ಹೋಗಲಾಡಿಸಲು ಕೆಲಸ ಮಾಡುತ್ತಿದೆ. ಇದು ಸ್ತ್ರೀ ದೌರ್ಜನ್ಯದ ಬಗ್ಗೆ ಅಂಕಿ-ಅಂಶಗಳನ್ನು ಸಂಗ್ರಹಿಸುವುದು, ಕಾನೂನಿನ ಅರಿವು ಮೂಡಿಸುವುದು, ಕಾನೂನು ರಕ್ಷಣೆ ಮತ್ತು ಆಶ್ರಯವನ್ನು ನೀಡುವ ಕಾರ್ಯವನ್ನು ಕೈಗೊಳ್ಳುತ್ತಿದೆ. ಪುರುಷರ ಆಕ್ರಮಣಕ್ಕೊಳಗಾಗುವ ಸಾಧ್ಯತೆಯಿರುವುದರಿಂದ 'ನಾನೆ'ಯ ಕಛೇರಿಗೆ ಸಾರ್ವಜನಿಕರಿಗೆ ಮುಕ್ತ ಪ್ರವೇಶವಿಲ್ಲ.

ಭಾರತದ ಮಹಿಳೆಯರ ಪರಿಸ್ಥಿತಿಯನ್ನು ಬಿಂಬಿಸುವ ಅಂಶವೆಂದರೆ ಹಂಗೇರಿ ಮಹಿಳೆಯರ ರಾಜಕೀಯ ಭಾಗವಹಿಸುವಿಕೆ. ಅದು ಶೇಕಡ ೧೦ಕ್ಕಿಂತ ಕಡಿಮೆಯಿದೆ. ಮಹಿಳೆಯರು ಸಶಕ್ತರಾಗಿದ್ದರೂ ರಾಜಕೀಯದಲ್ಲಿ ಅವರ ಪಾತ್ರ ಸೀಮಿತಗೊಂಡಿರಲು ಕಾರಣವೇನು ಎಂದು ತಜ್ಞರನ್ನು ಕೇಳಿದಾಗ ಪುರುಷ ಪ್ರಧಾನ ಮೌಲ್ಯಗಳು ಅಡ್ಡಿಯಾಗಿವೆ, ಮಹಿಳೆಯರಲ್ಲೇ ಇನ್ನೂ ಸ್ವಯಂಪ್ರೇರಣೆ ಉಂಟಾಗಿಲ್ಲ, ರಾಜಕೀಯ ವಲಯ ಮಹಿಳೆಯರಿಗೆ ನಿಷಿದ್ಧವೇನೋ ಎಂಬಂತಹ ವಾತಾವರಣವಿದೆ ಎಂದು ಹೇಳಿದರು. ಮಹಿಳಾ ಸಂಘಟನೆಗಳು ಈ ನಿಟ್ಟಿನಲ್ಲಿ ಗಂಭೀರವಾಗಿ ಚಿಂತಿಸುತ್ತಿಲ್ಲದಿರುವುದು ಕಂಡುಬಂದಿತು. ಮೀಸಲಾತಿ ಬಗ್ಗೆ ಕೇಳಿದಾಗ ಯೂರೋಪಿನ ರಾಷ್ಟ್ರಗಳಲ್ಲಿ ಅಂತಹ ಸಮಾನ ಅವಕಾಶಗಳ ಕಾಯಿದೆ ಇತರ ಕ್ಷೇತ್ರಗಳಲ್ಲೂ ಸಾಧ್ಯವಿಲ್ಲ ಎನ್ನುವುದು ತಿಳಿದುಬಂದಿತು. ರಾಜಕೀಯದಲ್ಲಿ

ಮಹಿಳಾ ಪ್ರಾತಿನಿಧ್ಯವನ್ನು ಹೆಚ್ಚಿಸುವ ನಿಟ್ಟಿನಲ್ಲಿ ನಮ್ಮ ಮಹಿಳಾ ವಿಶ್ವವಿದ್ಯಾನಿಲಯ ಮತ್ತು ಸೆಂಟ್ರಲ್ ಯೂರೋಪಿಯನ್ ಯೂನಿವರ್ಸಿಟಿಯ ಮಹಿಳಾ ಅಧ್ಯಯನ ವಿಭಾಗಗಳು ಸಹಯೋಗದಲ್ಲಿ ಯೋಜನೆಗಳನ್ನು ಕೈಗೊಳ್ಳುವ ಬಗ್ಗೆ ಚರ್ಚಿಸಲಾಯಿತು. ಅದನ್ನು ಕಾರ್ಯರೂಪಕ್ಕೆ ತರಬೇಕಾಗಿದೆ.

ಶೈಕ್ಷಣಿಕ ವಿನಿಮಯದಲ್ಲಿ ಕನ್ನಡದಲ್ಲಿ ನಮ್ಮ ಲೇಖಕಿಯರು ಬರೆದ ಕೃತಿಗಳನ್ನು ಹಂಗೇರಿ ಭಾಷೆಗೂ, ಹಂಗೇರಿಯನ್ ಭಾಷೆಯಲ್ಲಿ ಲೇಖಕಿಯರು ಬರೆದ ಕೃತಿಗಳನ್ನು ಕನ್ನಡದಲ್ಲಿ ಅನುವಾದ ಮಾಡಿ ಅದನ್ನು ಮಹಿಳಾ ಅಧ್ಯಯನದ ಓದುವ ಸಾಮಗ್ರಿಯಾಗಿ ಬಳಸಿಕೊಳ್ಳುವ ಯೋಜನೆಯನ್ನು ಯೋಜಿಸಲಾಗಿದೆ.

ನಾನು ಶೈಕ್ಷಣಿಕ ಕಾರ್ಯವನ್ನು ಕೈಗೊಂಡ ಸೆಂಟ್ರಲ್ ಯೂನಿವರ್ಸಿಟಿಯ ಕುರಿತು ಒಂದೆರಡು ಮಾತುಗಳನ್ನು ಹೇಳಬೇಕು. ಇದು ಅತಿ ಚಿಕ್ಕ ಅಂತರ ರಾಷ್ಟ್ರೀಯ ವಿಶ್ವವಿದ್ಯಾನಿಲಯ. ಸುಮಾರು ೨೦ ವಿಭಾಗಗಳಿವೆ. ಶೇಕಡ ೯೦ರಷ್ಟು ವಿದ್ಯಾರ್ಥಿಗಳು ವಿವಿಧ ದೇಶಗಳಿಂದ ಬಂದವರು. ಕೆಲವು ಕಾಲೇಜು ಹಾಗೂ ವಿಶ್ವವಿದ್ಯಾನಿಲಯಗಳಲ್ಲಿ ಭಾರತದಿಂದ ಬಂದ ವಿದ್ಯಾರ್ಥಿಗಳೂ ಇದ್ದರು. ಮೆರಿಟ್ ಆಧಾರದ ಮೇಲೆ ಒಳ್ಳೆ ಸ್ಕಾಲರ್‌ಶಿಪ್ ದೊರಕುತ್ತಿದೆ. ಆದರೆ ವಿದ್ಯಾರ್ಥಿಗಳು ಊಟ ವಸತಿಯನ್ನು ಏರ್ಪಾಡು ಮಾಡಿಕೊಳ್ಳಬೇಕು. ನಮ್ಮ ಕರ್ನಾಟಕದ ವಿದ್ಯಾರ್ಥಿಗಳೂ ಈ ಅವಕಾಶವನ್ನು ಬಳಸಿಕೊಂಡರೆ ಎಷ್ಟು ಚೆನ್ನ ಅನಿಸಿತು. ಜಂಡರ್ ಸ್ಟಡೀಸ್ ವಿಭಾಗದಲ್ಲಿರುವ ಅವಕಾಶಗಳ ಬಗ್ಗೆ ಮಾಹಿತಿ ತಿಳಿಸುವ ಬ್ರೋಷರ್‌ಗಳನ್ನು ಕೊಟ್ಟಿದ್ದರು. ಅದನ್ನು ಅನೇಕರಿಗೆ ನೀಡಿ ಪ್ರೋತ್ಸಾಹ ನೀಡಿದ್ದೇನೆ. ಒಂದಿಬ್ಬರಾದರೂ ಬಳಸಿಕೊಳ್ಳಲೆಂದು ಆಶಿಸುತ್ತೇನೆ. ವಿಶ್ವವಿದ್ಯಾನಿಲಯವನ್ನು ಅತ್ಯಂತ ಕಡಿಮೆ ವಿಸ್ತರಣೆ ಅಂದರೆ ೨-೩ ಎಕರೆ ಜಾಗದಲ್ಲಿ ಕಟ್ಟಲಾಗಿದೆ. ಅದು ಆರು ಅಂತಸ್ತುಗಳುಳ್ಳ ಕಟ್ಟಡ. ಪ್ರತಿ ಅಂತಸ್ತಿನಲ್ಲೂ ೨-೩ ವಿಭಾಗಗಳಿವೆ. ಗ್ರಂಥಾಲಯ ಹಾಗೂ ವಿಭಾಗಗಳು ಎಲ್ಲಾ ಮೂಲ ಸೌಕರ್ಯಗಳನ್ನು ಹೊಂದಿವೆ. ಭೌತಿಕ ಮತ್ತು ಶೈಕ್ಷಣಿಕ ವಲಯದಲ್ಲಿ ಅಂತರರಾಷ್ಟ್ರೀಯ ಮಟ್ಟವನ್ನು ಕಾಯ್ದುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಬೋಧಕೇತರ ಸಿಬ್ಬಂದಿಯಲ್ಲಿ ಹಂಗೇರಿ ಜನರು ಹೆಚ್ಚಾಗಿ ಕಂಡುಬಂದರೆ ಬೋಧಕ ಸಿಬ್ಬಂದಿಯಲ್ಲಿ ವಿದೇಶಿಯರು ಅಧಿಕ ಸಂಖ್ಯೆಯಲ್ಲಿ ಕಂಡುಬಂದರು. ಅಲ್ಲಿಯೂ ಭಾಷಾ ಸಮಸ್ಯೆಯಿದೆ. ಹಂಗೇರಿ ಮಾತೃಭಾಷೆಯಲ್ಲಿ ಶಿಕ್ಷಣ ಪಡೆದವರಿಗೆ ವೃತ್ತಿಪರ ಹಾಗೂ ಉನ್ನತ ಶಿಕ್ಷಣ ಪಡೆಯಲು ಭಾಷೆ ಅಡ್ಡಿಯಾಗಿದೆ. ಇಂಗ್ಲಿಷ್ ಭಾಷೆ ಹೆಚ್ಚು ಬಳಕೆಯಲ್ಲಿಲ್ಲ.

ರಾಜಧಾನಿ ಬುಡಾಪೆಸ್ಟ್‌ನಲ್ಲಿರುವ ಪ್ರೇಕ್ಷಣೀಯ ಸ್ಥಳಗಳ ಬಗ್ಗೆ ಒಂದೆರಡು ಮಾತು ಹೇಳದಿದ್ದರೆ ಲೇಖನ ಪೂರ್ಣವಾಗುವುದಿಲ್ಲ. ಬುಡಾಪೆಸ್ಟ್‌ನಲ್ಲಿ ಅನೇಕ ಪ್ರವಾಸಿ ತಾಣಗಳಿವೆ. ಎಲ್ಲವನ್ನು ವಿವರವಾಗಿ ನೋಡಬೇಕೆಂದರೆ, ಒಂದೆರಡು ವಾರಗಳು ಬೇಕಾಗುತ್ತವೆ. ನಾನು ಶೈಕ್ಷಣಿಕ ಕಾರ್ಯದಲ್ಲಿ ಬ್ಯುಸಿಯಾಗಿದ್ದ ಕಾರಣ ಎಲ್ಲಾ ಸ್ಥಳಗಳನ್ನು ನೋಡಲಾಗಲಿಲ್ಲ. ನೋಡಿದವುಗಳಲ್ಲಿ ಮೂರನ್ನು ಹೆಸರಿಸಬಹುದು. ಒಂದು ಸೇಂಟ್ ಸ್ಟೀಫನ್ ಬಸಾಲಿಕಾ ಚರ್ಚ್, ಇದು ಹಂಗೇರಿ ರಾಷ್ಟ್ರವನ್ನು ಕಟ್ಟಿದ ರಾಜನ ನೆನಪಿಗಾಗಿ ಕಟ್ಟಿರುವ ಚರ್ಚ್. ೧೦೦ ವರ್ಷಗಳಷ್ಟು ಹಳೆಯದು. ಅದರ ವಾಸ್ತುಕಲೆ ವೈಭವಯುತವಾಗಿದೆ. ಇಡೀ ಚರ್ಚನ್ನು ಗ್ರಾನೈಟಿನಲ್ಲಿ ಕಟ್ಟಲಾಗಿದೆ. ಹಂಗೇರಿ ಇತಿಹಾಸವನ್ನು ಬಿಂಬಿಸುವ ಅನೇಕ ಘಟನೆಗಳನ್ನು ಚಿತ್ರಿಸಲಾಗಿದೆ. ಎರಡನೆಯದು ಎತ್ನೋಗ್ರಾಫಿಕ್ ಮ್ಯೂಸಿಯಂ. ಇಲ್ಲಿ ಹಂಗೇರಿ ಸಮಾಜದಲ್ಲಿ ಒಬ್ಬ ವ್ಯಕ್ತಿ



ಜಂಡರ್ ಸ್ಟಡೀಸ್ ವಿಭಾಗವು ಏರ್ಪಡಿಸಿದ್ದ ಡಿನ್ನರ್ ಪಾರ್ಟಿ

ಹುಟ್ಟಿದಾಗಿನಿಂದ ಸಾಯುವವರೆಗೆ ಜೀವನದ ವಿವಿಧ ಘಟ್ಟಗಳಲ್ಲಿ ಕಂಡುಬರುವ ಆಚರಣೆ, ಪದ್ಧತಿ, ಸಂಪ್ರದಾಯ, ಉಡುಪು, ಕಲೆಗಳನ್ನು ಬಿಂಬಿಸುವ ವಸ್ತು, ಚಿತ್ರಪಟಗಳನ್ನು ಇಡಲಾಗಿದೆ. ಇವುಗಳನ್ನು ದೃಶ್ಯ, ಶ್ರವ್ಯ ಮಾಧ್ಯಮಗಳ ಮೂಲಕವೂ ತೋರಿಸಲಾಗುತ್ತದೆ. ಹಿಂದೆ ಜನರು ಬಳಸುತ್ತಿದ್ದ ಕೃಷಿ ಸಲಕರಣೆ, ಕಾರ್ಖಾನೆಗಳ ಉತ್ಪನ್ನ, ಉಡುಪು, ಕರಕುಶಲ ವಸ್ತುಗಳನ್ನು ಇಡಲಾಗಿದೆ. ಇದನ್ನು ಒಂದು ಸುತ್ತು ಹಾಕಿ ಬಂದರೆ ಯಾವುದೇ ದೇಶ, ಸಂಸ್ಕೃತಿ, ಸಮಾಜವಿರಲಿ, ಜನರ ಜೀವನ ರೀತಿ ಒಂದೇ ರೀತಿ ಇರುತ್ತದೆ; ಆದರೆ ಅನುಸರಿಸುವ ಆಚರಣೆ ಪದ್ಧತಿಗಳಲ್ಲಿ ಸ್ವಲ್ಪ ಭಿನ್ನತೆ ಕಂಡುಬರಬಹುದು ಎಂಬ ಭಾವನೆ ಮೂಡುತ್ತದೆ. ಮೂರನೆಯದು ಅತ್ಯಂತ ವಿಶಿಷ್ಟವಾದುದು. ಸುಜ್‌ಖಾನ್ ಮ್ಯೂಸಿಯಂ. ಬುಡಾಪೆಸ್ಟ್‌ನ ಹೊರವಲಯದಲ್ಲಿ ೨೩ ಕಿ.ಮೀ. ದೂರದಲ್ಲಿದೆ. ಇಲ್ಲಿ ೧೫೦-೨೦೦ ವರ್ಷಗಳ ಹಿಂದೆ ಹಂಗೇರಿಯಲ್ಲಿದ್ದ ಗ್ರಾಮ ಹಾಗೂ ಸಣ್ಣ ಪಟ್ಟಣಗಳನ್ನು ತಂದು ಹೇಗಿತ್ತೋ ಹಾಗೇ ಸಂರಕ್ಷಿಸಿಡಲಾಗಿದೆ. ಗುಡಿಸಲಿನಿಂದ ಹಿಡಿದು ಮಧ್ಯಮ ಮತ್ತು ಶ್ರೀಮಂತ ಕುಟುಂಬಗಳ ಮನೆಗಳನ್ನು ವಸ್ತುಗಳ ಸಮೇತ ಪ್ರದರ್ಶನಕ್ಕಿಡಲಾಗಿದೆ. ಗುಡಿಸಿಲಿನ ಒಳಗೆ ಹೋದಾಗ ನಮ್ಮ ಹಳ್ಳಿಯ ಒಂದು ಗುಡಿಸಿಲಿಗೆ ಹೋದಂತೆನಿಸಿತು. ತುಂಬ ದೊಡ್ಡ ಮ್ಯೂಸಿಯಂ ಒಂದನ್ನು ಸುಮಾರು ೬೦ ಎಕರೆ ಪ್ರದೇಶದಲ್ಲಿ ಕಟ್ಟಲಾಗಿದೆ. ಅಷ್ಟು ಹಿಂದೆಯೇ ಕೃಷಿ ಹಾಗೂ ಗೃಹ ಕೈಗಾರಿಕಾ ಹಂತಗಳಲ್ಲಿ ಜನರು ಎಷ್ಟು ಸ್ವಾವಲಂಬಿಗಳಾಗಿದ್ದರು, ಪರಿಪೂರ್ಣ ವ್ಯವಸ್ಥೆಯನ್ನು ಹೊಂದಿದ್ದರು ಎಂಬ ಚಿತ್ರಣವನ್ನು ಮ್ಯೂಸಿಯಂ ನೀಡುತ್ತದೆ. ಹೊರಬಂದಾಗ ಒಂದು ಹೊಸ ಲೋಕವನ್ನು ಕಂಡು ಬಂದಂತಾಯಿತು.

ನನ್ನ ಶೈಕ್ಷಣಿಕ ಕಾರ್ಯದ ಮಧ್ಯೆ ವಾರದ ಕೊನೆಯ ರಜೆಗಳನ್ನು ಬಳಸಿಕೊಂಡು ಹಂಗೇರಿಯ ಅಕ್ಕಪಕ್ಕದ ರಾಷ್ಟ್ರಗಳಾದ ಆಸ್ಟ್ರಿಯಾ, ಚೆಕ್ ರಿಪಬ್ಲಿಕ್ ಹಾಗೂ ಸಿಟ್ಜರ್‌ಲ್ಯಾಂಡ್‌ನ ರಾಜಧಾನಿಗಳನ್ನು ಭೇಟಿ ಮಾಡಿದೆ. ಅಲ್ಲಿ ಪ್ಯಾಕೇಜ್ ಟೂರಿನಲ್ಲಿ ಕೆಲವು ಪ್ರೇಕ್ಷಣೀಯ ಸ್ಥಳಗಳನ್ನಷ್ಟೇ ನೋಡಲು ಸಾಧ್ಯವಾಯಿತು. ೨೧ ದಿನಗಳ ನನ್ನ ಯೂರೋಪ್ ಪ್ರವಾಸ ಒಂದು ಶೈಕ್ಷಣಿಕ ಅನುಭವ ಹಾಗೂ ಜೀವನದ ಅನುಭವವನ್ನು ತಂದುಕೊಟ್ಟಿತು. ಈ ಅವಕಾಶ ಮಾಡಿಕೊಟ್ಟ ಯು.ಜಿ.ಸಿ., ಮಹಿಳಾ ವಿಶ್ವವಿದ್ಯಾನಿಲಯ ಹಾಗೂ ಹಂಗೇರಿ ಸರ್ಕಾರಕ್ಕೆ ನಾನು ಆಭಾರಿಯಾಗಿದ್ದೇನೆ. ಇಂತಹ ಅವಕಾಶಗಳು ಇತರ ಬೋಧಕರು ಪಡೆಯುವಂತಾಗಲಿ ಎಂದು ಆಶಿಸುತ್ತೇನೆ.

ಡಾ।। ಹೇಮಲತಾ ಎಚ್. ಎಂ.
ಮಹಿಳಾ ಅಧ್ಯಯನ ವಿಭಾಗ, ಮಹಿಳಾ ವಿಶ್ವವಿದ್ಯಾನಿಲಯ
ವಿಜಾಪುರ - ೫೮೬ ೧೦೮



# ತುಮಕೂರಿನ ರವೀಂದ್ರ ಕಲಾನಿಕೇತನ

ಮಳೆ ಬೆಳೆ ಮತ್ತು ಹವಾಮಾನದ ಕಾರಣ ತುಮಕೂರು ಜಿಲ್ಲೆಯನ್ನು ಸಾಮಾನ್ಯವಾಗಿ ಒಣಪ್ರದೇಶ ಎಂದು ಕರೆಯುವುದುಂಟು. ಜಿಲ್ಲೆಯ ನೀರಿನ ದಾಹವನ್ನು ತಣಿಸಬಲ್ಲ ನದಿಗಳಿಲ್ಲ, ಜೊತೆಗೆ ಹೇಳಿಕೊಳ್ಳುವಂಥ ಯಾವ ದೊಡ್ಡ ಉದ್ಯಮಗಳೂ ಇಲ್ಲ. ಈ ಕಾರಣಗಳಿಂದಲೇ ಅದನ್ನು ಒಣ ಅಥವಾ ಹಿಂದುಳಿದ ಜಿಲ್ಲೆ ಎಂದು ತೀರ್ಮಾನಿಸಲಾಗದಷ್ಟೆ.

ಆದರೆ ವಿದ್ಯೆಯನ್ನು ಬಿತ್ತಿ ಸಮೃದ್ಧ ಫಸಲು ತೆಗೆಯುವ ವಿಷಯದಲ್ಲಿ ಅದು ಇತರ ಜಿಲ್ಲೆಗಳಿಗಿಂತ ಮುಂದಿದೆ. ಹೀಗೆ ಸಮೃದ್ಧ ಫಸಲು ತೆಗೆಯಲು ಸಹಾಯಕವಾಗಿರುವುವು ಅಲ್ಲಿನ ಶಿಕ್ಷಣ ಸಂಸ್ಥೆಗಳು.

ಎಂಜಿನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣವೇ ಅಲ್ಲದೆ ಚಿತ್ರಕಲಾ ಶಿಕ್ಷಣದಲ್ಲೂ ತುಮಕೂರು ಹಿಂದುಳಿದಿಲ್ಲ. ೧೯೮೧ರಲ್ಲಿ ಪ್ರಾರಂಭವಾದ ರವೀಂದ್ರ ಕಲಾನಿಕೇತನ ಕರ್ನಾಟಕದ ಪ್ರಮುಖ ಚಿತ್ರಕಲಾ ಮಹಾವಿದ್ಯಾಲಯಗಳಲ್ಲೊಂದೆಂದು ಪರಿಗಣಿತವಾಗಿದೆ. ಇದು ಬಾಪೂಜಿ ವಿದ್ಯಾಸಂಸ್ಥೆಗಳ ಒಂದು ಅಂಗ.

ಹೆಸರೇ ಸೂಚಿಸುವಂತೆ ಬಾಪೂಜಿ ವಿದ್ಯಾಸಂಸ್ಥೆ ಗಾಂಧೀಜಿಯವರ ಆದರ್ಶಗಳನ್ನು ಮೈಗೂಡಿಸಿಕೊಂಡು ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆ. ಶ್ರೀ ಎಂ. ಬಸವಯ್ಯನವರು ಈ ಸಂಸ್ಥೆಗಳ ರೂವಾರಿ. ಬಾಪೂಜಿ ವಿದ್ಯಾಸಂಸ್ಥೆ ನಡೆಸುತ್ತಿರುವ ಶಾಲಾ ಕಾಲೇಜುಗಳ ಪೈಕಿ ಪ್ರಾಥಮಿಕ ಶಾಲೆಗಳು, ಪ್ರೌಢ ಶಾಲೆಗಳು, ಪದವಿಪೂರ್ವ ಕಾಲೇಜು, ಫಾರ್ಮಸಿ ಕಾಲೇಜು, ಸಂಸ್ಕೃತ ಪಾಠಶಾಲೆ, ಆಂಗ್ಲಮಾಧ್ಯಮ ಶಾಲೆ – ಮುಂತಾದುವು ಸೇರಿವೆ. ಜೊತೆಗೆ ಅನಾಥ ಮಕ್ಕಳಿಗಾಗಿ ಬಾಪು ವಿಕಾಸ ಕೇಂದ್ರ ಎಂಬ ಆಶ್ರಮವನ್ನೂ ನಡೆಸುತ್ತಿದ್ದು, ಇಲ್ಲಿರುವ ಮಕ್ಕಳಿಗೆ ಉಚಿತ ಊಟ, ವಸತಿ, ವಸ್ತ್ರ ಹಾಗೂ ಶಿಕ್ಷಣ ಲಭಿಸುತ್ತದೆ.

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮತ್ತು ಕರ್ನಾಟಕ ಸರ್ಕಾರದ ಮಾನ್ಯತೆ ಪಡೆದಿರುವ ರವೀಂದ್ರ ಕಲಾನಿಕೇತನ ಕರ್ನಾಟಕದ ಏಳು ಹೆಸರಾಂತ ಚಿತ್ರಕಲಾ ಮಹಾವಿದ್ಯಾಲಯಗಳಲ್ಲೊಂದೆಂದು ಪರಿಗಣಿತವಾಗಿದೆ. ಇಲ್ಲಿ ಹೈಸ್ಕೂಲು ಶಿಕ್ಷಣ ಮುಗಿಸಿದ ಚಿತ್ರಕಲಾಸಕ್ತ ವಿದ್ಯಾರ್ಥಿಗಳಿಗೆ ಐದು ವರ್ಷಗಳ ಅವಧಿಗೆ ಶೀಕ್ಷಣ ನೀಡಲಾಗುತ್ತದೆ. ಚಿತ್ರಕಲೆಯಲ್ಲಿ ಚಿತ್ರ ಸಂಯೋಜನೆ, ಮತ್ತು ವ್ಯಕ್ತಿ ಚಿತ್ರಣ, ಆನ್ವಯಿಕ ಕಲೆಯಲ್ಲಿ ಎಚಿಂಗ್, ಲಿಥೋಗ್ರಾಫ್, ಲಿನೋ ಮತ್ತು ವುಡ್ ಕಟ್ ಮುಂತಾದ ವಿಷಯಗಳನ್ನು ಕಲಿಸಲಾಗುತ್ತದೆ. ಕಂಪ್ಯೂಟರ್ ಶೀಕ್ಷಣದಲ್ಲಿ ಡಾಸ್, ಕೋರಲ್ ಡ್ರಾ, ಪೇಜ್ ಮೇಕರ್, ಪ್ರಾಕ್ಟಲ್ ಪೇಂಟರ್, ಫೋಟೋಶಾಪ್, ಫ್ಲಾಕ್ ಮುಂತಾದ ವಿಷಯಗಳ ಜೊತೆಗೆ ೨-ಡಿ ಮತ್ತು ೩-ಡಿ ಅನಿಮೇಶನ್ ಬಗ್ಗೆ ಮಾಹಿತಿ ನೀಡಲಾಗುತ್ತದೆ. ಈ ಮಾಧ್ಯಮದಲ್ಲಿ ಆಗುತ್ತಿರುವ ನಿರಂತರ ಬೆಳವಣಿಗೆಗಳನ್ನು ಗಮನಕ್ಕೆ ತೆಗೆದುಕೊಂಡು ಅವನ್ನು ಶಿಕ್ಷಣದಲ್ಲಿ ಅಳವಡಿಸಲಾಗುತ್ತದೆ.

ಐದು ವರ್ಷದ ಅಭ್ಯಾಸದನಂತರ ವಿದ್ಯಾರ್ಥಿಗಳು ''ಬ್ಯಾಚುಲರ್ ಆಫ್ ವಿಷುವಲ್ ಆರ್ಟ್ಸ್'' ಪದವಿ ಪಡೆಯುತ್ತಾರೆ.

ರವೀಂದ್ರ ಕಲಾನಿಕೇತನ ಸದ್ದು ಗದ್ದಲವಿಲ್ಲದ ಪ್ರಶಾಂತ ಸ್ಥಳದಲ್ಲಿದೆ. ವಿಶಾಲವಾದ ತರಗತಿ ಕೊಠಡಿಗಳಿವೆ. ವಿದ್ಯಾರ್ಥಿಗಳ ಚಿತ್ರಗಳನ್ನು ಪ್ರದರ್ಶಿಸಲು, ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸಲು ವಿಶಾಲವಾದ ಹಾಲ್ ಇದೆ. ವಿದ್ಯಾರ್ಥಿಗಳ ಕಲಾಕೃತಿಗಳ ಪ್ರದರ್ಶನ ಅಲ್ಲಿ ನಡೆಯುತ್ತದೆ.

ಶ್ರೀ ಬಾಬುರಾವ್ ರವೀಂದ್ರ ಕಲಾನಿಕೇತನದ ಪ್ರಾಂಶುಪಾಲರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಆರು ಮಂದಿ ಅಧ್ಯಾಪಕ ಬಳಗವಿದೆ. ವಿಶೇಷವೆಂದರೆ ಇವರ ಪೈಕಿ ಬಹುಮಂದಿ ಕಲಾನಿಕೇತನದಲ್ಲಿ ಕಲಿತವರು! ಅಲ್ಲಿಯೇ ಅಧ್ಯಾಪಕರಾಗಿ ಮುಂದುವರಿದಿರುವ ಅವರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಖ್ಯಾತಿಯ ಕಲಾವಿದರೂ ಹೌದು.

ಕಲಾನಿಕೇತನ ಪ್ರತಿವರ್ಷ ಕಲಾಶಿಬಿರಗಳನ್ನು ಏರ್ಪಡಿಸುತ್ತದೆ. ಇತ್ತೀಚೆಗೆ ನಡೆಸಿದ ಭಾರತೀಯ ಸಾಂಪ್ರದಾಯಿಕ ಚಿತ್ರಕಲಾ ಶಿಬಿರದಲ್ಲಿ ದೇಶದ ಬೇರೆಬೇರೆ ಭಾಗಗಳಿಂದ ಇಪ್ಪತ್ತೈದು ಮಂದಿ ಕಲಾಕಾರರು ಭಾಗವಹಿಸಿದ್ದರು. ಅವರು ಕಲಾಕೃತಿಗಳನ್ನು ಮಾಡುವ ವಿಧಾನವನ್ನು ಹತ್ತಿರದಿಂದ ನೋಡಿ ಕಲಿಯುವ ಅವಕಾಶ ಕಲಾನಿಕೇತನದ ವಿದ್ಯಾರ್ಥಿಗಳಿಗೆ.

ಕಲಾನಿಕೇತನದ ಆವರಣದೊಳಕ್ಕೆ ಕಾಲಿರಿಸುತ್ತಿದ್ದಂತೆ ನಮ್ಮ ಗಮನ ಸೆಳೆಯುವ ಅಂಶವೆಂದರೆ ಅಲ್ಲಿ 'ಗಾಂಧಿ ದರ್ಶನ'ಕ್ಕೆ ಮಾಡಿರುವ ಏರ್ಪಾಡು. ಸುಮಾರು ಇನ್ನೂರಕ್ಕೂ ಹೆಚ್ಚು ಗಾಂಧೀಜಿಯವರ ದೊಡ್ಡ ಪ್ರಮಾಣದ ಛಾಯಾಚಿತ್ರಗಳಿಗೆ ಚೌಕಟ್ಟು ಹಾಕಿಸಿ ಪ್ರದರ್ಶಿಸಲಾಗಿದೆ. ಗಾಂಧೀಜಿಯವರ ಜನನದಿಂದ ನಿಧನದವರೆಗೆ ಅವರ ಜೀವನದ ಪ್ರಮುಖ ಘಟ್ಟಗಳನ್ನು ಪರಿಚಯಿಸುವ ದೃಶ್ಯಗಳನ್ನು ವಿವರಣೆಗಳ ಸಹಿತ ಇಂದಿನ ತಲೆಮಾರಿನವರಿಗೆ ಪರಿಚಯ ಮಾಡಿಕೊಡುವ ಪ್ರಯತ್ನ ಶ್ಲಾಘನೀಯವಾದದ್ದು. ಗಾಂಧಿ ಜೀವನದ ಜೊತೆಗೆ ಸ್ವಾತಂತ್ರ್ಯ ಹೋರಾಟದ ಪರಿಚಯವೂ ನಮಗಾಗುತ್ತದೆ. ಗಾಂಧೀಜಿ ಬದುಕಿನ ಕುರಿತ ಜೊತೆಗೆ ಗಾಂಧಿ ವಿಚಾರಗಳನ್ನು ತಿಳಿಸಿಕೊಡುವ ಅಪೂರ್ವ ಛಾಯಾಚಿತ್ರಗಳವು.

ಛಾಯಾಚಿತ್ರಗಳ ಪ್ರದರ್ಶನದಂತೆಯೇ ಕಲಾನಿಕೇತನದವರು ಮತ್ತೊಂದು ಶ್ಲಾಘನೀಯ ಕಾರ್ಯ ಮಾಡಿದ್ದಾರೆ. ಸ್ವಾತಂತ್ರ್ಯ ಹೋರಾಟದ ಘಟನೆಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಿಕೊಟ್ಟು ಆ ಸಂಬಂಧದ ವರ್ಣಚಿತ್ರಗಳನ್ನು ರಚಿಸಲು ಪ್ರೇರಣೆ ನೀಡಿದ್ದಾರೆ. ಇಂದಿನ ತಲೆಮಾರಿನ ಚಿತ್ರಕಲಾ ವಿದ್ಯಾರ್ಥಿಗಳನ್ನು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಸಂಚರಿಸುವಂತೆ ಮಾಡಿರುವ ಪ್ರಯತ್ನ ಇದು. ಇದರಲ್ಲಿ ವಿದ್ಯಾರ್ಥಿಗಳೂ ಸಫಲರಾಗಿದ್ದಾರೆ. ಈ ಚಿತ್ರಗಳು ಬೇರೆಬೇರೆ ಕಡೆ ಪ್ರದರ್ಶನಗೊಂಡಿವೆ.

ಚಿತ್ರಕಲಾ ಶಿಕ್ಷಣದೊಂದಿಗೆ ಸಾಮಾಜಿಕ ಅರಿವು ಮೂಡಿಸುವ ಪ್ರಯತ್ನವನ್ನು ಸಹ ಮಾಡಿದ್ದಾರೆ. ಮಾರಕ ವ್ಯಾಧಿ ಏಡ್ಸ್ ಬಗ್ಗೆ ಜಾಗೃತಿ ಮೂಡಿಸುವ ಚಿತ್ರಗಳನ್ನು ವಿದ್ಯಾರ್ಥಿಗಳು ರಚಿಸಿದ್ದಾರೆ. ಆರೋಗ್ಯ ಇಲಾಖೆಯ ಸಹಕಾರದಿಂದ ಇವು ಬೇರೆ ಬೇರೆ ಕಡೆ ಪ್ರದರ್ಶನಗೊಳ್ಳುತ್ತಿವೆ. ಅಂತೆಯೇ ಪರಿಸರ ಜಾಗೃತಿ ಉಂಟುಮಾಡಲು 'ಭೂಮಿಯನ್ನು ರಕ್ಷಿಸಿ' – ವಿಷಯದ ಮೇಲೆ ವಿದ್ಯಾರ್ಥಿ ಕಲಾಕಾರರು ಐವತ್ತರಷ್ಟು ಕ್ಯಾನ್‌ವಾಸ್ ಪೇಂಟಿಂಗ್‌ಗಳನ್ನು ರಚಿಸಿದ್ದು ಇವು ಸಹ ಪ್ರದರ್ಶನಗೊಳ್ಳುತ್ತಿವೆ.

ಭಾವಿ ಕಲಾಕಾರರನ್ನು ರೂಪಿಸಿ, ಪ್ರೋತ್ಸಾಹಿಸುತ್ತಿರುವ ತುಮಕೂರು ರವೀಂದ್ರ ಕಲಾನಿಕೇತನದ ಚಟುವಟಿಕೆಗಳು ಹೀಗೆಯೇ ಮುಂದುವರಿಯಲೆಂದು ಹಾರೈಸೋಣ.

**ಪರಂಜ್ಯೋತಿ**
ನಂ. ೧೬೭, ೧೧ನೇ ಮುಖ್ಯರಸ್ತೆ, ೩ನೇ ಹಂತ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೮



ನೆನೆ ನೆನೆ ಆ ದಿನವ   Do Remember Those days ....

# ಸಾರ್ವಜನಿಕರಂಗದ ಅಸಾಮಾನ್ಯ ಹೋರಾಟಗಾರ್ತಿ

# ದುರ್ಗಾಬಾಯಿ ದೇಶ್‌ಮುಖ್ (೧೯೦೯-೧೯೮೧)



**ದುರ್ಗಾಬಾಯಿ ದೇಶ್‌ಮುಖ್ ಅವರು ಜೀವನ ಪರ್ಯಂತ ಬಾಲ್ಯವಿವಾಹ, ವರದಕ್ಷಿಣೆ, ಕಂದಾಚಾರಗಳು, ವಿಧವೆಯರ ಶೋಷಣೆ ಮುಂತಾದ ಸಾಮಾಜಿಕ ಪಿಡುಗುಗಳ ಬಗೆಗೆ ಸತತವಾಗಿ ಹೋರಾಟ ನಡೆಸಿದರು. ಅಲ್ಲದೆ ಕಾನೂನುಗಳ ಸುಧಾರಣೆ ಮತ್ತು ಆರ್ಥಿಕ ಪ್ರಗತಿಪರ ವಿಷಯಗಳಲ್ಲೂ ಅನುಪಮ ಸೇವೆ ಸಲ್ಲಿಸಿದರು. ಬಹುಮುಖ ಆಯಾಮಗಳ ವ್ಯಕ್ತಿತ್ವವಿದ್ದ ಈ ಮಹಾನ್ ಹೋರಾಟಗಾರ್ತಿ ಸಾರ್ವಜನಿಕ ಜೀವನಕ್ಕೆ ಸಲ್ಲಿಸಿದ ನಾನಾ ಕೊಡುಗೆಗಳು ಅವಿಸ್ಮರಣೀಯ.**

ಮ. ಶ್ರೀ. ಮುರಳಿಕೃಷ್ಣ

ಆ ಕಾಲದಲ್ಲಿ ಬಾಲ್ಯ ವಿವಾಹ ಸರ್ವೇಸಾಮಾನ್ಯವಾಗಿತ್ತು. ಆ ಹುಡುಗಿಗೆ ಮದುವೆಯಾದಾಗ ಎಂಟು ವರ್ಷ ವಯಸ್ಸು. ಅವಳ ಪತಿ ಶ್ರೀಮಂತ ಜಮೀನ್ದಾರನ ದತ್ತು ಪುತ್ರ. ನಾಲ್ಕು ವರ್ಷದ ತರುವಾಯ ಆಕೆ ಮೈನೆರೆದಾಗ, ಮದುವೆ ಎಂದರೆ ಏನೆಂಬುದರ ಅರಿವಾಗಿ, ದೃಢವಾದ ನಿರ್ಧಾರ ತೆಗೆದುಕೊಳ್ಳಲು ನಿಶ್ಚಯಿಸುತ್ತಾಳೆ. ಮದುವೆಯ ಬಂಧನದಿಂದ ಹೊರಬಂದು, ಸಾರ್ವಜನಿಕ ಜೀವನದಲ್ಲಿ ತನ್ನನ್ನು ತೊಡಗಿಸಿಕೊಳ್ಳಲು ಮುಂದಾಗುತ್ತಾಳೆ. ತಾನು ಸೂಕ್ತವಾದ ಪತ್ನಿಯಾಗುವುದಿಲ್ಲವೆಂದು ಪತಿಗೆ ಮನವರಿಕೆ ಮಾಡಿ, ಆತನಿಗೆ ತಕ್ಕುದಾದ ಹುಡುಗಿಯನ್ನು ಆಕೆಯೇ ಆಯ್ಕೆ ಮಾಡುತ್ತಾಳೆ. ೧೯೨೦ರ ದಶಕದ ಮೊದಲ ವರ್ಷಗಳಲ್ಲಿ ಜರುಗಿದ ಈ ಘಟನೆ ನಿಜಕ್ಕೂ ಕ್ರಾಂತಿಕಾರಿಯಾದುದು. ಆ ದಿಟ್ಟ ಹುಡುಗಿಯೇ ಮುಂದೆ ದುರ್ಗಾಬಾಯಿ ದೇಶ್‌ಮುಖ್ ಆಗಿ ಸಾರ್ವಜನಿಕ ರಂಗದಲ್ಲಿ ತನ್ನ ಛಾಪನ್ನು ಮೂಡಿಸಿದಳು. ಒಂದು ನೂರು ವರ್ಷಗಳ ಹಿಂದೆ ಜನಿಸಿದ ಆ ಧೀಮಂತ ಚೇತನ ನೀಡಿದ ಕೊಡುಗೆಗಳು ಅನನ್ಯ. ಬನ್ನಿ... ಅವರ ಬಗೆಗೆ ಹೆಚ್ಚು ತಿಳಿದುಕೊಳ್ಳೋಣ...

ದುರ್ಗಾಬಾಯಿ ಆಂಧ್ರಪ್ರದೇಶದ ರಾಜಮುಂಡ್ರಿಯಲ್ಲಿ ೧೯೦೯ರಲ್ಲಿ ಜನಿಸಿದರು. ಅವರದ್ದು ಮಧ್ಯಮ ವರ್ಗದ ಕುಟುಂಬ. ತಮ್ಮ ಹನ್ನೆರಡನೇ ವಯಸ್ಸಿನಲ್ಲೇ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಶುರು ಮಾಡಿದರು. ಒಬ್ಬ ಕುಡುಕ ಗಂಡ ತನ್ನ ಹೆಂಡತಿಯ ಮೇಲೆ ಕೈ ಮಾಡಿದಾಗ, ದುರ್ಗಾಬಾಯಿ ತನ್ನ ಸ್ನೇಹಿತೆಯರನ್ನು ಸೇರಿಸಿಕೊಂಡು ಅವನ ವಿರುದ್ಧ ಒಂದು ಮೆರವಣಿಗೆಯನ್ನು ತೆಗೆದರು. ಹೆಂಡತಿ-ಪೀಡಕರನ್ನು ಸಮಾಜವು ಬಹಿಷ್ಕರಿಸಬೇಕೆಂದು ಕರೆ ನೀಡಿದರು.

ಆ ಸಮಯದಲ್ಲಿ, ಆಂಧ್ರಪ್ರದೇಶದಲ್ಲಿ ದೇವದಾಸಿ ಪದ್ಧತಿ ಜೋರಾಗಿತ್ತು. ''ಪರಮಾತ್ಮನ ಸೇವಕಿಯರು'' ಎಂದು ಕರೆಯಲ್ಪಡುತ್ತಿದ್ದ ಅವರನ್ನು ಶ್ರೀಮಂತರು ತಮ್ಮ ಭೋಗಲಾಲಸೆಗಾಗಿ ಬಳಸಿಕೊಳ್ಳುತ್ತಿದ್ದರು. ಗಾಂಧೀಜಿಯವರು ೧೯೨೧ರಲ್ಲಿ ಕಾಕಿನಾಡಕ್ಕೆ ಭೇಟಿಯಿತ್ತರು. ಹನ್ನೆರಡರ ಹರೆಯದ ದುರ್ಗಾಬಾಯಿ ಈ ಸಂದರ್ಭವನ್ನು ಬಳಸಿಕೊಂಡು ಕಾರ್ಯಪ್ರವೃತ್ತರಾದರು. ಕೆಲವು ದೇವದಾಸಿಯರು ಮತ್ತು ಪರ್ದಾದಲ್ಲಿದ್ದ ಮುಸಲ್ಮಾನ ಮಹಿಳೆಯರ ಬಳಿ ಗಾಂಧೀಜಿಯವರನ್ನು ಕರೆದುಕೊಂಡು ಹೋಗಬೇಕೆಂದು ನಿಶ್ಚಯಿಸಿದರು. ಆದರೆ ಗಾಂಧೀಜಿಯವರ ಭೇಟಿಗಾಗಿ ರಚಿಸಿದ್ದ ಉಸ್ತುವಾರಿ ಸಮಿತಿ ರೂ. ೫,೦೦೦/- ದೇಣಿಗೆ ನೀಡಿದರೆ ಮಾತ್ರ ದುರ್ಗಾಬಾಯಿ ಅವರನ್ನು ಭೇಟಿ ಮಾಡಬಹುದೆಂದು ತಿಳಿಸಿತು. ಆ ಕಾಲದಲ್ಲಿ ಅದು ಬಹಳ ದೊಡ್ಡ ಮೊತ್ತ. ಧೃತಿಗೆಡದ ದುರ್ಗಾಬಾಯಿ ಹಣ ಸಂಗ್ರಹಣೆಯಲ್ಲಿ ತೊಡಗಿದರು. ಯಶಸ್ವಿಯೂ ಆದರು. ಗಾಂಧೀಜಿಯವರೊಡನೆ ಹತ್ತು ನಿಮಿಷ ಮಾತ್ರ ಮಾತನಾಡಬಹುದೆಂದು ಅವರಿಗೆ ತಿಳಿಸಲಾಗಿತ್ತು. ಆದರೆ ಗಾಂಧೀಜಿಯವರು ದುರ್ಗಾಬಾಯಿ ಮತ್ತು ಸಂಗಡಿಗರೊಡನೆ ಸುಮಾರು ಒಂದು ತಾಸು ಮಾತನಾಡಿದರು. ಹರಳುಗಟ್ಟುತ್ತಿದ್ದ ರಾಷ್ಟ್ರೀಯ ವಿಮೋಚನಾ ಚಳುವಳಿಗೆ ತಮ್ಮ ಕೈಲಾದ ಸಹಾಯ ಮಾಡಬೇಕೆಂದು ಗಾಂಧೀಜಿ ತಿಳಿಸಿದಾಗ, ದುರ್ಗಾಬಾಯಿ ತಾವು ಧರಿಸಿದ್ದ ಚಿನ್ನದ ಬಳೆಗಳನ್ನೇ ನೀಡಿದರು. ಅವರ ಸ್ನೇಹಿತೆಯರನ್ನೂ ತಾವು ಧರಿಸಿದ್ದ ಚಿನ್ನದ ಆಭರಣಗಳನ್ನು ಕೊಡಲು ಒಪ್ಪಿಸಿದರು.

ವರ್ಷಗಳು ಉರುಳುತ್ತಿದ್ದಂತೆ, ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಸಾರ್ವಜನಿಕ ಜೀವನಕ್ಕೆ ಪದಾರ್ಪಣ ಮಾಡಿದಾಗಲೇ, ಅವರು ಮಹಿಳಾ ಸಬಲೀಕರಣದಲ್ಲಿ ಶಿಕ್ಷಣ ವಹಿಸುವ ಮಹತ್ವದ ಪಾತ್ರವನ್ನು ಗುರುತಿಸಿದ್ದರು. ಮೊದಲು, ಅವರು ಕಾಕಿನಾಡದ ತಮ್ಮ ಮನೆಯಲ್ಲೇ ಬಾಲಿಕಾ ಹಿಂದಿ ಪಾಠಶಾಲೆಯನ್ನು ತೆರೆದರು. ಅದರಲ್ಲಿ ತಮ್ಮ ತಾಯಿಯೇ ಶಿಕ್ಷಕಿಯಾಗುವಂತೆ ಅವರ ಮನವೊಲಿಸಿದರು. ಮುಂದೆ, ಇದು ಆಂಧ್ರ ಮಹಿಳಾ ಸಭಾ ಎಂಬ ಬೃಹತ್ ಸಾಮಾಜಿಕ ಸೇವಾ ಸಂಸ್ಥೆಯೊಡನೆ ದುರ್ಗಾಬಾಯಿ ಗುರುತಿಸಿಕೊಳ್ಳಲು ನೆರವಾಯಿತು. ಆಂಧ್ರಪ್ರದೇಶದ ಹಲವು ಜಿಲ್ಲೆಗಳಲ್ಲಿ, ಮದರಾಸು ಮತ್ತು ಹೈದರಾಬಾದುಗಳಲ್ಲಿ ಈ ಸಂಸ್ಥೆಯ ಕೇಂದ್ರಗಳು ಪ್ರಾರಂಭವಾದುವು. ೧೯೪೬ರಲ್ಲಿ ಮಹಾತ್ಮಾ ಗಾಂಧೀಜಿ ಮದರಾಸಿನಲ್ಲಿ ಈ ಸಂಸ್ಥೆಯ ಪ್ರಥಮ ಕಟ್ಟಡದ ಶಂಕುಸ್ಥಾಪನೆ ಮಾಡಿದರು. ಈ ಸಂಸ್ಥೆಯ ವತಿಯಿಂದ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಮತ್ತು ವೃತ್ತಿಪರ ಶಿಕ್ಷಣವನ್ನು ನೀಡುವುದರ ಜೊತೆಗೆ ವಯಸ್ಕ ಮಹಿಳೆಯರ ಶಿಕ್ಷಣ, ನರ್ಸರಿ ಶಾಲೆಗಳು, ಉದ್ಯೋಗಸ್ಥ ಮಹಿಳೆಯರ ಮಕ್ಕಳಿಗಾಗಿ ಕ್ರೇಶ್‌ಗಳು, ಬಡಮಕ್ಕಳಿಗೆ ಹಾಲು ಪೂರೈಕೆ, ಮಿಡ್‌ವೈಫ್‌ಗಳಾಗಲು ತರಬೇತಿ ಮತ್ತು ಪ್ರಸೂತಿ ಕೇಂದ್ರಗಳ ಸ್ಥಾಪನೆ ಮುಂತಾದ ವಿಷಯಗಳ ಬಗೆಗೆ ಸಂಕ್ಷಿಪ್ತ ಅವಧಿಯ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಗ್ರಾಮೀಣ ಪ್ರದೇಶದ ಮಹಿಳೆಯರಿಗೆ ಉತ್ತೇಜನವನ್ನು ನೀಡಲಾಯಿತು. ಈ ಎಲ್ಲ ಸೇವಾ ಕಾರ್ಯಗಳ ಹಿಂದೆ ದುರ್ಗಾಬಾಯಿಯವರ ಬದ್ಧತೆಯ ಅಪಾರ ಶ್ರಮವಿತ್ತು. ಅವರು ಅನೇಕ ಮಹಿಳಾ ಮತ್ತು ಪುರುಷ ಸ್ವಯಂ ಸೇವಾ ಕಾರ್ಯಕರ್ತರಿಗೆ ಸ್ಫೂರ್ತಿಯಾದರು; ಮಾದರಿಯೂ ಆದರು. ಅವರು ಮದರಾಸು ಲಾ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿ ದುಡಿಯುತ್ತಲೇ ಇಷ್ಟೆಲ್ಲಾ ಸಾಧನೆ ಮಾಡಿದರು.

ದುರ್ಗಾಬಾಯಿ ಸಾರ್ವಜನಿಕ ಜೀವನಕ್ಕೆ ಪ್ರವೇಶಿಸಿದಾಗ ಕೇವಲ ಐದನೇ ಇಯತ್ತೆಯವರೆಗೆ ಓದಿದ್ದರು. ನಂತರ ಪಂಡಿತ ಮದನ್ ಮೋಹನ್ ಮಾಳವಿಯರ ಸಲಹೆಯ ಮೇರೆಗೆ ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಮೆಟ್ರಿಕ್ಯುಲೇಶನ್ ಪರೀಕ್ಷೆಗೆ ಕುಳಿತು ತೇರ್ಗಡೆಯೂ ಆದರು. ತರುವಾಯ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಬಿ.ಎ. ಹಾಗೂ ಸ್ನಾತಕೋತ್ತರ ಪದವಿಯನ್ನು ಪಡೆದರು. ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್‌ನಲ್ಲಿ ಶಿಕ್ಷಣ ಮುಂದುವರಿಸಲು ಅವರಿಗೆ ವಿದ್ಯಾರ್ಥಿವೇತನ ದೊರಕಿತು. ಆದರೆ ಅಡ್ಡಬಂದದ್ದು ಎರಡನೇ ವಿಶ್ವ ಸಮರ. ಮದರಾಸಿನಲ್ಲಿ ನೆಲೆನಿಂತಾಗ, ಲಾ ಕಾಲೇಜಿಗೆ ಸೇರಿದರು. ಕ್ರಿಮಿನಲ್ ಲಾ ವಿಷಯದಲ್ಲಿ ಪರಿಣತಿಯನ್ನು ಹೊಂದಿದರು. ಆ ಕಾಲಘಟ್ಟದಲ್ಲಿ



# ಅವ್ವ

ಅವ್ವ ನೀ ಹೊತ್ತ ಗಂಟಿನ ಭಾರ
ಜೀವನದಿ ನಡೆದ ಆ ದೂರ
ನೆನಸಿಕೊಂಡರೆ ಹೃದಯವಾಗುವುದು ಭಾರ.

ಅಪ್ಪನಿದ್ದರೂ ಇರಬಹುದು ಕ್ರೂರ
ಅವ್ವ ನೀ ಬಲು ಕರ್ಪೂರ
ನೆನಸಿಕೊಂಡರೆ ಹೃದಯವಾಗುವುದು ಭಾರ.

ನಿನ್ನಾ ಗರ್ಭಸ್ಥ ಭ್ರೂಣವನು
ಬಾಡಿಗೆಗಾಗಿ ಬಳಸಿಕೊಂಡನು ಆ ಜಾಣ
ಕಿಂಚಿತ್ತೂ ನೆನೆಯಲಿಲ್ಲ ನಿನ್ನ
ಬಂದಾಗ ಪ್ರೇಯಸಿಯ ಔತಣ
ನೆನಸಿಕೊಂಡರೆ ಹೃದಯವಾಗುವುದು ಭಾರ.

**ಜಗನ್ನಾಥ ಕೋ. ಮನ್ವಾಚಾರ್**
ರಸಾಯನ ಶಾಸ್ತ್ರ ಉಪನ್ಯಾಸಕರು, ವಿಜಯನಗರ ಬಡಾವಣೆ
ಹೂವಿನಹಡಗಲಿ - ೫೮೩ ೨೧೯, ಬಳ್ಳಾರಿ ಜಿಲ್ಲೆ

ಮಹಿಳೆಯರು ಕ್ರಿಮಿನಲ್ ಲಾಯರ್‌ಗಳಾಗಲು ಮುಂದಾಗುತ್ತಲೇ ಇರಲಿಲ್ಲ.

ರಾಷ್ಟ್ರೀಯ ವಿಮೋಚನಾ ಆಂದೋಳನದಲ್ಲಿ ನಿರತರಾಗಿದ್ದಾಗ, ಅವರು ಉಪ್ಪಿನ ಸತ್ಯಾಗ್ರಹದಲ್ಲಿ ಭಾಗ ವಹಿಸಿದರು. ಈ ಹೋರಾಟದಲ್ಲಿದ್ದಾಗ, ಅವರು ವೆಲ್ಲೂರು ಮತ್ತು ಮಧುರೈ ಕಾರಾಗೃಹಗಳಲ್ಲಿ ಜೈಲುವಾಸವನ್ನು ಅನುಭವಿಸಿದರು. ಅಲ್ಲಿದ್ದಾಗ, ಮಹಿಳಾ ಕೈದಿಗಳ ದಾರುಣ ಪರಿಸ್ಥಿತಿಯನ್ನು ಕಣ್ಣಾರೆ ಕಂಡರು. ಕೆಲವರಿಗೆ ತಮ್ಮ ಮೇಲೆ ಇರುವ ಆಪಾದನೆ ಏನು ಎಂದೇ ತಿಳಿದಿರಲಿಲ್ಲ. ಈ ವಿಷಯದಲ್ಲಿ ತಮ್ಮ ಕೈಲಾದದ್ದನ್ನು ಮಾಡಬೇಕೆಂದು ನಿರ್ಣಯಿಸಿದರು. ಬಹುಶಃ ಜೈಲುಗಳ ಅನುಭವವೇ ಅವರನ್ನು ಒಬ್ಬ ಕ್ರಿಮಿನಲ್ ವಕೀಲೆಯಾಗುವಂತೆ ಪ್ರೇರೇಪಿಸಿರಬೇಕು.

೧೯೪೬ರಲ್ಲಿ ದುರ್ಗಾಬಾಯಿ ಸಂವಿಧಾನ ರಚನಾ ಸಭೆಯ ಸದಸ್ಯೆಯಾದರು. ಸಭೆಯ ಒಂದು ಅಧಿವೇಶನವನ್ನೂ ಅವರು ತಪ್ಪಿಸಿಕೊಳ್ಳಲಿಲ್ಲ. ಅಲ್ಲಿ ಜವಹರ್‌ಲಾಲ್ ನೆಹರು, ಗೋಪಾಲಸ್ವಾಮಿ ಐಯ್ಯಂಗಾರ್, ಬಿ. ಎನ್. ರಾವ್, ಕೆ. ಸಂತಾನಮ್, ಅನಂತಶಯನಂ ಐಯ್ಯಂಗಾರ್ ಮುಂತಾದ ದಿಗ್ಗಜರೊಡನೆ ಕೆಲಸ ಮಾಡಿದರು. ಸಭೆಯ ಚಾಲನಾ ಸಮಿತಿಯ ಸದಸ್ಯೆಯಾಗಿ ಅವರು ಸುಮಾರು ೭೫೦ ತಿದ್ದುಪಡಿಗಳನ್ನು ಮಂಡಿಸಿದರು. ಹಿಂದೂ ಕೋಡ್ ಬಿಲ್‌ನ ತಯಾರಿ ಮತ್ತು ಜಾರಿಯಲ್ಲೂ ಗಮನಾರ್ಹ ಪಾತ್ರ ವಹಿಸಿದರು. ಅವರ ಕೆಲಸ ಡಾ|| ಬಿ. ಆರ್. ಅಂಬೇಡ್ಕರರ ಶ್ಲಾಘನೆಯನ್ನು ಗಳಿಸಿತು. ೧೯೫೨ರಲ್ಲಿ ಅವರನ್ನು ಯೋಜನಾ ಆಯೋಗದ ಸದಸ್ಯರನ್ನಾಗಿ ನೇಮಕ ಮಾಡಲಾಯಿತು. ೧೯೫೩ರಲ್ಲಿ ಅವರು ಡಾ|| ಚಿಂತಾಮಣಿ (ಸಿ) ದ್ವಾರಕಾನಾಥ್ (ಡಿ) ದೇಶ್‌ಮುಖ್‌ರನ್ನು ಮದುವೆಯಾದರು. ಆಗ ಸಿ. ಡಿ. ದೇಶ್‌ಮುಖ್ ಕೇಂದ್ರ ಸರ್ಕಾರದ ವಿತ್ತಮಂತ್ರಿಯಾಗಿದ್ದರು. ಈ ಕಾರಣದಿಂದ, ಅವರು ಯೋಜನಾ ಆಯೋಗದ ಸದಸ್ಯೆಯ ಸ್ಥಾನಕ್ಕೆ ರಾಜೀನಾಮೆ ನೀಡಿದರು. ದುರ್ಗಾಬಾಯಿ ೧೯೫೨ರಲ್ಲಿ ಜರುಗಿದ ಮೊದಲ ಸಾರ್ವತ್ರಿಕ ಮಹಾಚುನಾವಣೆಯಲ್ಲಿ ಉಮೇದುವಾರರಾಗಿ ಸ್ಪರ್ಧಿಸಿದ್ದರು. ಆದರೆ ಅವರು ಸೋತರು. ಅದೇ ವರ್ಷ, ಒಂದು ನಿಯೋಗದಲ್ಲಿ ಚೀನಾಕ್ಕೆ ಹೋದರು. ಅಲ್ಲಿ ಕುಟುಂಬ ನ್ಯಾಯಾಲಯಗಳಿರುವುದನ್ನು ಕಂಡರು. ಭಾರತಕ್ಕೆ ಮರಳಿದ ನಂತರ ಕಾನೂನು ತಜ್ಞರಾದ ಎಂ. ಸಿ. ಛಾಗ್ಲ ಮತ್ತು ಪಿ. ಬಿ. ಗಜೇಂದ್ರಗಡ್‌ಕರ್‌ರೊಡನೆ ಈ ವಿಷಯ ಚರ್ಚಿಸಿದರು. ಪ್ರಧಾನಿ ನೆಹರು ಅವರಿಗೆ ಸಲ್ಲಿಸಿದ ಪ್ರವಾಸದ ವರದಿಯಲ್ಲಿ ಭಾರತದಲ್ಲೂ ಕುಟುಂಬ ನ್ಯಾಯಾಲಯಗಳನ್ನು ಸ್ಥಾಪಿಸಬೇಕೆಂಬುದರ ಬಗೆಗೆ ಒತ್ತನ್ನು ನೀಡಿದ್ದರು. ಮುಂದೆ ಅದು ಜಾರಿಯೂ ಆಯಿತು.

೧೯೫೩ರಲ್ಲಿ ಅವರು ಕೇಂದ್ರ ಸಮಾಜ ಕಲ್ಯಾಣ ಮಂಡಲಿಯ ಅಧ್ಯಕ್ಷೆಯಾದರು. ೧೯೫೮ರಲ್ಲಿ ಶಿಕ್ಷಣಕ್ಕೆ ಸಂಬಂಧಿಸಿದ ರಾಷ್ಟ್ರೀಯ ಸಮಿತಿಯ ಮುಖ್ಯಸ್ಥರಾದರು. ಅವರು ಕೆಲವು ಪುಸ್ತಕಗಳನ್ನು ಬರೆದಿದ್ದಾರೆ. 'ಭಾರತದಲ್ಲಿ ಸಾಮಾಜಿಕ ಕಲ್ಯಾಣ' ಎಂಬ ಅವರ ವಿಶ್ವಕೋಶ ಈಗಲೂ ಸಂಶೋಧಕರಿಗೆ ಆಕರ ಗ್ರಂಥವಾಗಿದೆ. 'ಸ್ಟೋನ್ ದಟ್ ಸ್ಪೀಕೆತ್' ಎಂಬ ಅವರ ಕೃತಿ ಆಂಧ್ರ ಮಹಿಳಾ ಸಭೆಯ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. ಅವರ ಆತ್ಮಕಥೆಗಳಾದ 'ಚಿಂತಾಮಣಿ ಮತ್ತು ನಾನು' ಮತ್ತು 'ನನ್ನ ಜೀವನದ ಮಾರ್ಗ' ಜವಹರ್‌ಲಾಲ್ ನೆಹರು ಅವರಿಗೆ ಸಮರ್ಪಿತವಾಗಿವೆ.

ಅನೇಕ ಪ್ರಶಸ್ತಿಗಳು ಅವರನ್ನು ಹುಡುಕಿಕೊಂಡು ಬಂದವು. ಸಾಕ್ಷರತೆಯ ಪ್ರಸರಣದ ಅವರ ಕೆಲಸಕ್ಕಾಗಿ ಯುನೆಸ್ಕೊ ಶಾಂತಿ ಪ್ರಶಸ್ತಿಯನ್ನು ನೀಡಿತು. ಭಾರತದಲ್ಲಿ ಆರ್ಥಿಕ ಬೆಳವಣಿಗೆಗೆ ಮತ್ತು ಸಾಮಾಜಿಕ ಪರಿವರ್ತನೆಗಾಗಿ ಶ್ರಮಿಸಿದ್ದಕ್ಕಾಗಿ ಪಾಲ್ ಜಿ. ಹಾಫ್‌ಮನ್ ಪ್ರಶಸ್ತಿ ದೊರಕಿತು. ವಯಸ್ಕರ ಶಿಕ್ಷಣಕ್ಕೆ ನೀಡಿದ ಕೊಡುಗೆಗಳಿಗಾಗಿ ನೆಹರು ಲಿಟರೆಸಿ ಪ್ರಶಸ್ತಿ ಲಭಿಸಿತು. ಅವರು ಪದ್ಮಭೂಷಣ ಪ್ರಶಸ್ತಿಗೂ ಭಾಜನರಾದರು. ೧೯೮೧ರಲ್ಲಿ ಕೊನೆಯುಸಿರೆಳೆದರು.

ದುರ್ಗಾಬಾಯಿ ದೇಶ್‌ಮುಖ್ ಅವರು ಜೀವನ ಪರ್ಯಂತ ಬಾಲ್ಯವಿವಾಹ, ವರದಕ್ಷಿಣೆ, ಕಂದಾಚಾರಗಳು, ವಿಧವೆಯರ ಶೋಷಣೆ ಮುಂತಾದ ಸಾಮಾಜಿಕ ಪಿಡುಗುಗಳ ಬಗೆಗೆ ಸತತವಾಗಿ ಹೋರಾಟ ನಡೆಸಿದರು. ಅಲ್ಲದೆ ಕಾನೂನುಗಳ ಸುಧಾರಣೆ ಮತ್ತು ಆರ್ಥಿಕ ಪ್ರಗತಿಪರ ವಿಷಯಗಳಲ್ಲೂ ಅನುಪಮ ಸೇವೆ ಸಲ್ಲಿಸಿದರು. ಬಹುಮುಖ ಆಯಾಮಗಳ ವ್ಯಕ್ತಿತ್ವವಿದ್ದ ಈ ಮಹಾನ್ ಹೋರಾಟಗಾರ್ತಿ ಸಾರ್ವಜನಿಕ ಜೀವನಕ್ಕೆ ಸಲ್ಲಿಸಿದ ನಾನಾ ಕೊಡುಗೆಗಳು ಅವಿಸ್ಮರಣೀಯ.

**ಮ. ಶ್ರೀ. ಮುರಳಿಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜ ಗಾರ್ಡನಿಯಾ ಲೇಔಟ್, ತುರಹಳ್ಳಿ
ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ, ಬೆಂಗಳೂರು - ೫೬೦ ೦೬೧



**ನಭಾವಲೋಕನ**

# ಚಂದ್ರನ ಸವಾಲು

ಆಕಾಶದಲ್ಲಿ ಬಹಳ ಸುಲಭವಾಗಿ ಗುರುತಿಸಬಹುದಾದ ಕಾಯ ಚಂದ್ರ. ಆದ್ದರಿಂದಲೇ ಈ ಅಂಕಣದಲ್ಲಿ ಚಂದ್ರನ ಪಕ್ಕ ಬೇರೆ ಬೇರೆ ಗ್ರಹಗಳು ಕಾಣುವ ತಾರೀಖುಗಳನ್ನು ಗುರುತಿಸಿರುವುದು. ಹೀಗೆ ಮಾರ್ಗದರ್ಶಿ ಎನ್ನಿಸಿಕೊಂಡಿರುವ ಚಂದ್ರ ಎಂತಹ ಸವಾಲು ಒಡ್ಡಬಲ್ಲ? ಇದನ್ನು ತಿಳಿಯಲು ನೀವು ೨೬ರಂದು ಅದನ್ನು ನೋಡಬೇಕು. ಹುಣ್ಣಿಮೆ ಅದೇನು ಮಹಾ! ಎನ್ನದಿರಿ. ಚಂದ್ರೋದಯವನ್ನು ನೋಡಬೇಕು. ಅದೂ ಕಷ್ಟವೇನಿಲ್ಲ; ಹುಣ್ಣಿಮೆಯಂದು ಸಂಜೆಗೇ ಉದಯ. ಮುಂದಿನ ಪ್ರಶ್ನೆ ಮಹತ್ವದ್ದು. ಅದನ್ನು ನೋಡಿ ಗ್ರಹಣ ಮುಗಿದಿದೆಯೇ ಎಂದು ಗುರುತಿಸಬಲ್ಲಿರಾ? ಗ್ರಹಣದ ಆರಂಭವಾಗುವಾಗ ಅಂದರೆ ಭೂಮಿಯ ನೆರಳನ್ನು ಚಂದ್ರ ಪ್ರವೇಶಿಸುವಾಗ ಅದು ನಮಗೆ ಕಾಣುವುದಿಲ್ಲ. ಮುಕ್ತಾಯ ಸಂಜೆಗೆ ೬:೩೦ಕ್ಕೆ. ಕರ್ನಾಟಕದ ಯಾವುದೇ ಭಾಗಕ್ಕೂ ಆಗ ಚಂದ್ರೋದಯವಾಗಿರುವುದಿಲ್ಲ. ಆದರೆ ಮುಕ್ತಾಯದಲ್ಲಿ ಎರಡು ಹಂತಗಳಿವೆ. ಭೂಮಿಯ ಪೂರ್ಣ ಛಾಯಾ ಪ್ರದೇಶದಿಂದ ನಿರ್ಗಮಿಸುವುದು ಮೊದಲನೆಯದು; ಇದಾದ ಮೇಲೆ ಚಂದ್ರ ಭೂಮಿಯ ಪಾರ್ಶ್ವ ಛಾಯಾ ಪ್ರದೇಶವನ್ನು ಹಾದುಹೋಗಬೇಕಲ್ಲವೇ? ಅದರ ಮುಕ್ತಾಯ ಸಂಜೆ ೭:೫೧ಕ್ಕೆ. ಆದ್ದರಿಂದ ಉದಯವಾದ ಮೇಲೆ ಸುಮಾರು ಒಂದು ಗಂಟೆಯ ಅವಧಿ ನಿಮಗೆ ಸಿಗುತ್ತದೆ. ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಬೇರೆ ಬೇರೆ ಸಮಯಕ್ಕೆ ಮುಕ್ತಾಯ ಸಾಧ್ಯ. ಕೆಲವು ನಿಮಿಷಗಳ ವ್ಯತ್ಯಾಸ ಇರುವುದು. ಬರಿಗಣ್ಣಿನಿಂದ ಚಂದ್ರನನ್ನು ನೋಡಿ ಮುಕ್ತಾಯದ ಸಮಯವನ್ನು ಹೇಳಬಲ್ಲಿರಾ? ಇದೇ ಚಂದ್ರನೊಡ್ಡಿರುವ ಸವಾಲು.

ಉ
ಪೂ
ದ
ಸಪ್ತರ್ಷಿ ಮಂಡಲ
ಭೀಮ
ಸಹದೇವ
ಸ್ವಾತಿ
ಉರಗಧರ
ತುಲಾ
ಚಿತ್ರಾ
ಕನ್ಯಾ
ಶನಿ
ಸಿಂಹ
ಮಂಗಳ
ಕಟಕ
ಮಿಥುನ
ಶುಕ್ರ
ವೃಶ್ಚಿಕ
ಕಿನ್ನರ
ತ್ರಿಶಂಕು

ಸಂಜೆಯ ಆಕಾಶದಲ್ಲಿ ಮೂರು ಗ್ರಹಗಳಿವೆ. ೧೭ರಂದು ಚಂದ್ರ ಶುಕ್ರದ ಪಕ್ಕ, ೧೯ರಂದು ಮಂಗಳದ ಪಕ್ಕ, ೨೧ರಂದು ಶನಿಯ ಪಕ್ಕ ಕಾಣುತ್ತದೆ. ದಿನ ಬಿಟ್ಟು ದಿನದ ಈ ಆಟ ಮುಂದಿನ ತಿಂಗಳಿಗೆ ಹೇಗಾಗಬಹುದು? ಕಾದು ನೋಡಿ. ಶುಕ್ರ ಮಿಥುನದಿಂದ ಕಟಕದತ್ತ ಸರಿಯುತ್ತಿದೆ. ತಿಂಗಳ ಆರಂಭದಲ್ಲಿ ಆಕಾಶ ಶುಭ್ರವಾಗಿದ್ದರೆ ಅದರ ನೇರಕ್ಕೆ ಪುನರ್ವಸುಗಳೆರಡೂ ಸರಳರೇಖೆಯಂತೆ ಶಿಸ್ತಿನಿಂದ ನಿಲ್ಲುವುದನ್ನು ಕಾಣಬಹುದು. ಮಂಗಳ ಕಟಕದಿಂದ ಸಿಂಹಕ್ಕೆ ಸರಿಯುತ್ತಿದೆ. ಶನಿ ಸಿಂಹದಲ್ಲಿದೆ. ಈ ಮೂರೂ ಗ್ರಹಗಳು ಸರತಿಯ ಸಾಲಿನಲ್ಲಿ ನಿಂತಂತೆ ಕಾಣುತ್ತದೆ. ಮುಂದಿನ ತಿಂಗಳಲ್ಲಿ ಈ ಸಾಲನ್ನು ಮುರಿಯುವ ಜಗಳ ಆರಂಭವಾಗಲಿದೆ. ಕಾದು ನೋಡಿ.

ಇನ್ನೊಂದು ಗ್ರಹ ಗುರು ಬೆಳಗಿನ ಜಾವ ಪೂರ್ವದಲ್ಲಿ ಕಾಣುತ್ತಿದೆ. (ಕಳೆದ ತಿಂಗಳು ಕುಂಭ ಮೇಳ ನಡೆಯಿತು; ಗುರು ಕುಂಭ ರಾಶಿಯನ್ನು ಪ್ರವೇಶಿಸಿದಾಗ ಇದನ್ನು ಆಚರಿಸುವರಂತೆ; ಆದರೆ ಈಗಾಗಲೇ ಗುರು ಮೀನದಲ್ಲಿದೆ. ಕಳೆದ ತಿಂಗಳು ಅದು ಕುಂಭ ರಾಶಿಯ ಗಡಿಯನ್ನು ದಾಟಿತು. ಬೆಳಗಿನ ಜಾವ ನದಿಯಲ್ಲಿ ಕುಂಭ ಸ್ನಾನ ಮಾಡುವವರು ಯಾರಾದರೂ ತಲೆ ಎತ್ತಿ ನೋಡಿದ್ದರೆ ಈ ಅಂಶ ಸ್ಪಷ್ಟವಾಗುತ್ತಿತ್ತು)

ಈ ತಿಂಗಳು ಬುಧ ಗ್ರಹವನ್ನು ನೋಡಲು ಅನುಕೂಲಕರ ಅವಕಾಶ ಇಲ್ಲ.

೨೧ರಂದು ದಕ್ಷಿಣಾಯನ. ಅಂದರೆ ಸೂರ್ಯ ಉತ್ತರದ ತುದಿಯನ್ನು ಮುಟ್ಟಿ ಹಿಂದಿರುಗುವ ದಿನ. ಹಗಲಿನ ಅವಧಿ ಗರಿಷ್ಠ. ಬಹುತೇಕ ಅನೇಕ ದೇವಾಲಯಗಳಲ್ಲಿ ಈ ದಿನಕ್ಕೊಂದು ಚಮತ್ಕಾರ ನಡೆಯುವಂತೆ ವಿನ್ಯಾಸಗೊಳಿಸಿರುತ್ತಾರೆ. ಉದಾಹರಣೆಗೆ ಪೂರ್ವದ ಬಾಗಿಲಿನ ಜೊತೆಗೆ ಉತ್ತರಕ್ಕೊಂದು ಬಾಗಿಲು ಇದ್ದರೆ ಅದರಿಂದ ಸೂರ್ಯ ರಶ್ಮಿ ಒಳಕ್ಕೆ ಬೀಳುವುದು ಈ ದಿನ ಮಾತ್ರ - ಹೀಗಿರಬಹುದು. ನಿಮ್ಮೂರ ದೇವಾಲಯದಲ್ಲೂ ಇಂತಹ ವಿಶೇಷ ಇದ್ದೀತು; ಗಮನಿಸಿ. ಬೆಂಗಳೂರಿನ ಗವಿ ಗಂಗಾಧರೇಶ್ವರ ದೇವಾಲಯಕ್ಕೆ ಭೇಟಿ ಕೊಡಿ. ಸಂಜೆ ಪಶ್ಚಿಮ ಚಕ್ರದ ನೆರಳು ಪೂರ್ವ ಚಕ್ರದ ಮೇಲೆ ಬೀಳುವುದು ನಿಮಗೆ ಕಾಣಬಹುದು. (ಇದನ್ನು ನೋಡಲು ನಾನು ನಾಲ್ಕೈದು ವರ್ಷಗಳಿಂದ ಕಾಯುತ್ತಿದ್ದೇನೆ; ನೆರಳು ಅದನ್ನು ಸಮೀಪಿಸಿರುವುದನ್ನು ಮಾತ್ರ ನೋಡಲು ಸಾಧ್ಯವಾಗಿದೆ. ಮೋಡ ಕಣ್ಣುಮುಚ್ಚಾಲೆ ಆಡಿಸುತ್ತಿದೆ.) ಇಂತಹ ಅಪೂರ್ವ ವಿನ್ಯಾಸ ಬೇರೆಲ್ಲೂ ಇಲ್ಲವೇ ಇಲ್ಲ.

ಈ ತಿಂಗಳಲ್ಲಿ ಲಿರಿಡ್ಸ್ ಉಲ್ಕಾವೃಷ್ಟಿ ಗರಿಷ್ಠ ಮುಟ್ಟಲಿದೆ. ಆದರೂ ಗಂಟೆಗೆ ಕೇವಲ ೧೦ ಉಲ್ಕೆಗಳು ಬೀಳಬಹುದಷ್ಟೆ.

**ಖಗೋಳ ದಿನಚರಿ**

೩ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೪ ಚಾಂದ್ರಮಾಸದ ಕೊನೆಯ ಪಾದ
೬ ಮಂಗಳ - ಮಘ ಕನಿಷ್ಠ ಅಂತರದಲ್ಲಿ.
೭ ಗುರು - ಚಂದ್ರ ಜೋಡಿ*
೧೧ ಚಂದ್ರ - ಬುಧ ಜೋಡಿ
೧೨ ಅಮಾವಾಸ್ಯೆ ೫:೩೪ಕ್ಕೆ
೧೪ರಿಂದ ೧೬ರವರೆಗೆ ಲಿರಿಡ್ಸ್ ಉಲ್ಕಾವೃಷ್ಟಿ
೧೫ ಶುಕ್ರ - ಚಂದ್ರ ನಡುವೆ ಕನಿಷ್ಠ ಕೋನ*
ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೧೭ ಮಂಗಳ - ಚಂದ್ರ ಜೋಡಿ*
ಚಾಂದ್ರಮಾಸದ ಮೊದಲಪಾದ
೧೯ ಶನಿ ಚಂದ್ರ ಜೋಡಿ*
೨೧ ದಕ್ಷಿಣಾಯನ ೧೬:೫೮ಕ್ಕೆ
೨೪ ಚಂದ್ರ ಜ್ಯೇಷ್ಠಾ ಜೋಡಿ*
೨೬ ಹುಣ್ಣಿಮೆ ೧೭:೦೦ಕ್ಕೆ ಪಾರ್ಶ್ವ ಚಂದ್ರಗ್ರಹಣ*
೧೪:೨೫ಕ್ಕೆ ಪಾರ್ಶ್ವ ಛಾಯಾಪ್ರದೇಶಕ್ಕೆ ಪ್ರವೇಶ
೧೫:೪೭ಕ್ಕೆ ಪೂರ್ಣ ಛಾಯಾಪ್ರದೇಶಕ್ಕೆ ಪ್ರವೇಶ
೧೮:೩೧ಕ್ಕೆ ಪೂರ್ಣ ಛಾಯಾಪ್ರದೇಶದಿಂದ ನಿರ್ಗಮನ
೧೯:೫೧ ಕ್ಕೆ ಪಾರ್ಶ್ವ ಛಾಯಾಪ್ರದೇಶದಿಂದ ನಿರ್ಗಮನ
(* ಛಾಯಾಗ್ರಹಣಕ್ಕೆ ಸದವಕಾಶ)



ಕಳೆದ ಜೂನ್ ೨೭ರಂದು ಸಂಜೆ ೫:೪೫ಕ್ಕೆ ಗವಿ ಗಂಗಾಧರೇಶ್ವರ ದೇಗುಲದಲ್ಲಿ ತೆಗೆದ ಚಿತ್ರ; ನೆರಳು ಚಕ್ರವನ್ನು ಸಮೀಪಿಸುತ್ತಿರುವುದನ್ನು ಕಾಣಬಹುದು. ಸೂರ್ಯಾಸ್ತಕ್ಕೆ ಇನ್ನೂ ಮುಕ್ಕಾಲು ಗಂಟೆ ಉಳಿದಿತ್ತು. ಅಲ್ಲಿಯವರೆಗೂ ನೋಡುವುದು ಸಾಧ್ಯವಾಗಿದ್ದಿದ್ದರೆ ನೆರಳು ಚಕ್ರದ ಮೇಲೇ ಬೀಳುವುದನ್ನು ನೋಡಬಹುದಾಗಿತ್ತು. ಧ್ವಜಸ್ತಂಭದ ನೆರಳು ಚಕ್ರದ ಮಧ್ಯಕ್ಕೆ ಸರಿಯಾಗಿ ಮೂಡಿರುವುದನ್ನು ಗಮನಿಸಿ. ಸುಮಾರು ೧೬ರಿಂದ ೩೦ರವರೆಗೂ ಹೀಗೆ ಕಾಣುತ್ತದೆ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು

# ಮೆಕ್ಸಿಕೋ ತೀರ ತೈಲ ಸೋರಿಕೆ – ಅಮೆರಿಕನ್ ಕಂಪೆನಿಗಳೇ ಹೊಣೆ




**ಯಾ**ರಿಗೆ ಏನಾದರೂ ಚಿಂತೆಯಿಲ್ಲ ಬರುವ ಲಾಭದಲ್ಲಿ ಖೋತಾ ಆಗದಿದ್ದರೆ ಸರಿ. ಇದು ಬಂಡವಾಳಶಾಹಿಯ ಮೂಲಮಂತ್ರ. ಅದರಲ್ಲೂ ಅನ್ಯದೇಶಗಳ ನೈಸರ್ಗಿಕ ಸಂಪತ್ತನ್ನು ಸೂರೆಮಾಡುವ ಆಧುನಿಕ ಸಾಗರೋತ್ತರ ಬಂಡವಾಳಶಾಹಿಗಳು, ಅರ್ಥಾತ್ ಬಹುರಾಷ್ಟ್ರೀಯ ಕಾರ್ಪೊರೇಟ್‌ಗಳು (ಮಲ್ಟಿನ್ಯಾಷನಲ್ ಕಂಪೆನಿಗಳು) ಲಾಭ ಮಾಡುವ ವಿಚಾರದಲ್ಲಿ ನಿಷ್ಕರುಣಿಗಳು, ಮಾನವೀಯತೆಯೇ ಇಲ್ಲದ ದೈತ್ಯಗಳು. ಎಲ್ಲ ಅಂಗೀಕೃತ ನಿಯಮಗಳನ್ನು ಉಲ್ಲಂಘನೆ ಮಾಡಿ ರಂಗಕ್ಕಿಳಿಯುವ ಈ ಮಲ್ಟಿನ್ಯಾಷನಲ್‌ಗಳಿಗೆ ತಮ್ಮ ಸರಕಾರದ ಪೂರ್ಣ ಬೆಂಬಲ ರಕ್ಷಣೆ ಇರುವುದರಿಂದ ಅನ್ಯದೇಶಗಳ ಜನರನ್ನು ಅಮಾನುಷವಾಗಿ ಶೋಷಣೆ ಮಾಡುತ್ತಾರೆ, ಎಗ್ಗಿಲ್ಲದೆ ಆ ದೇಶಗಳ ಸಂಪತ್ತನ್ನು ಸೂರೆ ಮಾಡುತ್ತಾರೆ. ಈ ಪ್ರಕ್ರಿಯೆಯಲ್ಲಿ ಏನಾದರೂ ಅನಾಹುತ ಸಂಭವಿಸಿ, ಪ್ರಾಣಹಾನಿ ಯಾದರೆ ತೆಪ್ಪಗೆ ಸುಮ್ಮನಿದ್ದು, ಅದನ್ನು ಮುಚ್ಚಿಹಾಕುವುದಕ್ಕೆ ಪ್ರಯತ್ನಿಸುತ್ತಾರೆ. ಸರಕಾರದ, ಭ್ರಷ್ಟರ ಬೆಂಬಲ ಇರುವುದರಿಂದ ಸಫಲರಾಗುತ್ತಾರೆ. ಭಾರತೀಯರಾದ ನಮಗೆ ಕೆಲ ವರ್ಷಗಳ ಹಿಂದೆ ನಡೆದ 'ಭೋಪಾಲ್ ಅನಿಲಸೋರಿಕೆ ಪ್ರಕರಣ' ಸಂಭವಿಸಿದ ದುರಂತವನ್ನು ಮರೆಯಲು ಸಾಧ್ಯವೇ ಇಲ್ಲ. ಇವತ್ತಿಗೂ ಆ ಜನ ಅದರ ಭೀಕರ ಪರಿಣಾಮಗಳನ್ನು ಅನುಭವಿಸುತ್ತಿದ್ದಾರೆ. ಈ ದುರಂತ ಸಂಭವಿಸಿದ್ದು ಅಮೆರಿಕಾದ ಬೃಹತ್ ಬಹುರಾಷ್ಟ್ರೀಯ ಕಂಪೆನಿ ಯೂನಿಯನ್ ಕಾರ್ಬೈಡ್‌ನ ಬೇಜವಾಬ್ದಾರಿ ನಡವಳಿಕೆಯಿಂದ, ಸುರಕ್ಷಿತತೆಯ ಎಲ್ಲ ನಿಯಮಗಳನ್ನು ಗಾಳಿಗೆ ತೂರಿದ್ದರಿಂದ. ಪ್ರಕರಣ ಸಂಭವಿಸಿ ಹತ್ತಾರು ವರ್ಷಗಳು ಕಳೆದಿದ್ದರೂ ಯೂನಿಯನ್ ಕಾರ್ಬೈಡ್ ಸಂಸ್ಥೆ ಏನೂ ಆಗಿಲ್ಲವೆಂಬಂತೆ ರಾಜಾರೋಷವಾಗಿ ವ್ಯವಹಾರ ನಡೆಸಿಕೊಂಡಿದೆ. ಅಮೆರಿಕಾದ ನಾಗರಿಕ ಸರಕಾರ ಕಂಪೆನಿ ಮೇಲೆ ಯಾವ ಕ್ರಮವನ್ನೂ ಕೈಗೊಂಡಿಲ್ಲ. ಅವರ ದೃಷ್ಟಿಯಲ್ಲಿ ಘಟನೆ ಸಂಭವಿಸಿದ್ದು ಭಾರತದಲ್ಲಿ, ಸತ್ತವರು ಭಾರತೀಯರು. ನಮಗೇನಾಗಬೇಕು ಎಂಬ ಧೋರಣೆ. ಹಾಗೆಯೇ ಮಹಾರಾಷ್ಟ್ರ ಸರಕಾರಕ್ಕೆ ಮೋಸಮಾಡಿ ಮುಖಕ್ಕೆ ಮಸಿ ಬಳಿದುಹೋದ ಎನ್ರಾನ್ ಕಂಪೆನಿಯೂ ಅಷ್ಟೆ. ಅದರ ಅಧಿಕಾರಿಗಳು ಏನೂ ಆಗಿಯೇ ಇಲ್ಲವೆನ್ನುವಂತೆ ಹಾಯಾಗಿದ್ದಾರೆ. ಪ್ರಧಾನಿ ಮನಮೋಹನ್ ಸಿಂಗ್ ದೃಷ್ಟಿಯಲ್ಲಿ 'ಪರಮ ಮಿತ್ರ' ಅಮೆರಿಕಾ ಆಡಳಿತ ಮಾತ್ರ ಅಕ್ರಮ ಮಾಡಿರುವ ಕಂಪೆನಿಗಳ ವಿರುದ್ಧ ಕಿರುಬೆರಳನ್ನು ಎತ್ತಿಲ್ಲ ಈವರೆಗೆ.

ಈಗ ಭಾರತೀಯರಾದ ನಾವು ಅನುಭವಿಸಿದ್ದಕ್ಕಿಂತ ಹೆಚ್ಚು ಪ್ರಮಾಣದ ದುರಂತವನ್ನು ಮೆಕ್ಸಿಕೊ ದೇಶ ಅನುಭವಿಸುತ್ತಿದೆ. ಅಮೆರಿಕಾದ ನೆರೆಯಲ್ಲಿರುವ ಈ ಬಡರಾಷ್ಟ್ರದ ತೀರ ಪ್ರದೇಶ ಅತ್ಯಂತ ಗಂಭೀರವಾದ ಪರಿಸರ ಮಾಲಿನ್ಯದ ಸಮಸ್ಯೆ ಎದುರಿಸುತ್ತಿದೆ. ಈ ಪ್ರಕರಣದಲ್ಲಿ ಆಗಿರುವುದು ಭಾರೀ ಪ್ರಮಾಣದಲ್ಲಿ ತೈಲ ಸೋರಿಕೆ. ಇದರಿಂದಾಗಿ ಮೆಕ್ಸಿಕೋ ತೀರದ ಜೀವರಾಶಿ ತರಗೆಲೆಯಂತೆ ಉದುರಿ ಅಸುನೀಗುತ್ತಿವೆ. ಮತ್ಸ್ಯ ಸಂಪತ್ತು ಹಾನಿಯಾಗಿದೆ, ಸುತ್ತಲಿನ ಪ್ರಾಣಿ, ಪಕ್ಷಿಗಳು ನಾಶವಾಗುತ್ತಿವೆ. ಅಮೆರಿಕಾದ ಮೂರು ಬಹುರಾಷ್ಟ್ರೀಯ ಕಂಪೆನಿಗಳ ಬೇಜವಾಬ್ದಾರಿತನವೇ ಈ ದುರಂತಕ್ಕೆ



ಕಾರಣ. ಈ ಮೂರೂ ಕಂಪೆನಿಗಳು ತಮ್ಮೊಳಗೇ ಒಬ್ಬರ ಮೇಲೊಬ್ಬರು ಗೂಬೆ ಕೂರಿಸುವುದರಲ್ಲಿ ತೊಡಗಿವೆಯೇ ಹೊರತು ಪರಿಸ್ಥಿತಿ ನಿಯಂತ್ರಣದ ಕಡೆ ಗಮನ ಕೊಡುತ್ತಿಲ್ಲ. ಈ ದುರ್ಘಟನೆ ಸಂಭವಿಸಿದ್ದು ೨೦೧೦ರ ಏಪ್ರಿಲ್ ೨೦ರಂದು. ಅಮೆರಿಕಾದಲ್ಲಿರುವ ಅತಿ ದೊಡ್ಡ ತೈಲ ಕಂಪೆನಿ 'ಬ್ರಿಟಿಷ್ ಪೆಟ್ರೋಲಿಯಮ್' ಮೆಕ್ಸಿಕೋ ತೀರದಲ್ಲಿರುವ ತೈಲ ನಿಕ್ಷೇಪವನ್ನು ತೆಗೆಯುವ ಕಾರ್ಯದಲ್ಲಿ ತೊಡಗಿಕೊಂಡಿದೆ. ಈ ಕಂಪೆನಿಯ ಜೊತೆಗೆ ಇನ್ನೆರಡು ಕಂಪೆನಿಗಳು 'ಡೀಪ್‌ವಾಟರ್ ಹೊರೈಸನ್' ಮತ್ತು 'ಹ್ಯಾಲಿಬರ್ಟನ್' ಸಹಕರಿಸುತ್ತಿವೆ. ಮೂರೂ ಕಂಪೆನಿಗಳು ಸೇರಿ ಕಳಪೆ ಕಾಮಗಾರಿ ನಡೆಸಿರುವುದರಿಂದ ದುರಂತ ಸಂಭವಿಸಿದೆ. ಡ್ರಿಲ್ಲಿಂಗ್ ನಡೆಸುತ್ತಿರುವ ತೈಲ ಬಾವಿಯಲ್ಲಿ ಆಸ್ಫೋಟನೆಯಾಗಿ ಮಿಲಿಯಗಟ್ಟಲೆ ತೈಲ ಸಮುದ್ರದ ನೀರಿನಲ್ಲಿ ಬೆರೆಯುತ್ತಿದೆ. ಈ ಸೋರಿಕೆ ಲೂಸಿಯಾನ ತೀರಕ್ಕೂ ತಲಪುತ್ತಿರುವುದು ತಲೆನೋವಾಗಿದೆ. ಘಟನೆ ಸಂಭವಿಸಿ ಎರಡು ತಿಂಗಳಾಗುತ್ತ ಬಂದರೂ ತೈಲ ಬಾವಿಯನ್ನು ಮುಚ್ಚಲು ಸಾಧ್ಯವಾಗಿಲ್ಲ. ಇದೇ ಘಟನೆ ಅಮೆರಿಕಾದ ತೀರದಲ್ಲೇನಾದರೂ ಸಂಭವಿಸಿದ್ದರೆ ಅಮೆರಿಕನ್ನರು ಹಾಗೂ ಅವರ ಸರಕಾರ ಮುಗಿಲು ಮುಟ್ಟುವಂತೆ ಅಬ್ಬರ ಮಾಡುತ್ತಿದ್ದರು. ಆದರೆ ಇದು ನೆರೆಮನೆಯವಾಗಿರುವುದರಿಂದ ಅಮೆರಿಕಾದ ಸೆನೆಟ್ ವಿಚಾರಣೆ ನಡೆಸುತ್ತಿದೆ. ಮೊದಲಿನಲ್ಲಿ ಈ ಅಮೆರಿಕನ್ ಕಂಪೆನಿಗಳು ದುರಂತವನ್ನು ಮುಚ್ಚಿಹಾಕಲು ಪ್ರಯತ್ನಿಸಿದುವು. ಆದರೆ ಅದು ಅಮೆರಿಕಾದ ತೀರಕ್ಕೆ ಬಾಧಕ ಉಂಟುಮಾಡುವ ಸಂಭವ ಇರುವುದರಿಂದ ಸೆನೆಟ್‌ನ ಬಾಗಿಲು ತಟ್ಟಿತು. ವಿಚಾರಣೆಯೇನೋ ನಡೆಯುತ್ತಿದೆ. ಅದರ ಪರಿಣಾಮವಾಗಿ ಏನಾದರೂ ಪ್ರಯೋಜನ ವಾಗುತ್ತದೆ ಎಂದು ತಿಳಿಯುವುದು ತಪ್ಪು. ತೇಪೆ ಕೆಲಸ ನಡೆಸಿ ಕಂಪೆನಿಗಳನ್ನು ಬಚಾವು ಮಾಡಿದರೆ ಅಚ್ಚರಿಪಡಬೇಕಾಗಿಲ್ಲ.

ಈ ಮೂರೂ ಕಂಪೆನಿಗಳೂ ಅಮೆರಿಕಾದಲ್ಲಿ ಒಂದು ಕಾಲದಲ್ಲಿ ಕಪ್ಪು ಪಟ್ಟಿಗೆ ಸೇರಿದ್ದವು. ತೈಲ ಶೋಧ ಮತ್ತು ತೈಲೋತ್ಪನ್ನ ಕ್ಷೇತ್ರದಲ್ಲಿ ಪರಿಣತಿ ಕಮ್ಮಿ. ಅದರಲ್ಲೂ ಅಮೆರಿಕಾದ ಸೆನೆಟ್‌ನ ವಿಚಾರಣೆ ಸಂದರ್ಭದಲ್ಲಿ ಬ್ರಿಟಿಷ್ ಪೆಟ್ರೋಲಿಯಂ ಕಂಪೆನಿಯೇ ಒಪ್ಪಿಕೊಂಡಿರುವಂತೆ ಸಾಗರದಾಳದಿಂದ ತೈಲ ತೆಗೆಯುವ ತಂತ್ರಜ್ಞಾನದಲ್ಲಿ ಅನುಭವದ ಕೊರತೆ ಇದೆ. ಇದು ತಿಳಿದಿದ್ದು ಸಹ ಸಂಸ್ಥೆ ಸಾಹಸಕ್ಕೆ ಕೈಹಾಕಿ ಈಗ ಸಿಕ್ಕಿಬಿದ್ದಿದೆ. ಮೆಕ್ಸಿಕೋ ತೀರದಲ್ಲಿ ಸಂಭವಿಸಿರುವ ಈ ದುರಂತ ಆ ಪ್ರದೇಶದ ಪರಿಸರದ ಮೇಲೆ ತೀವ್ರವಾದ ಪರಿಣಾಮ ಉಂಟುಮಾಡಿದೆ. ಈ ಹಿಂದೆ ಈ ಕಂಪೆನಿಗಳು ಅಮೆರಿಕಾದ ಟೆಕ್ಸಾಸ್ ಮತ್ತು ಅಲಾಸ್ಕಾಗಳಲ್ಲಿ ಅಕ್ರಮ ತೈಲ ಶೋಧ ನಡೆಸಿ, ಆಕಸ್ಮಿಕ ಸಂಭವಿಸಿ ಹಿಂದೆ ಸರಿದಿದ್ದವು. ಇಂಥ ದುರ್ಘಟನೆಗಳು ಜಾಗತಿಕ ಪರಿಸರದ ಮೇಲೂ ಪರಿಣಾಮ ಉಂಟುಮಾಡುವುವು. ದುರಂತ ಸಂಭವಿಸಿದ್ದು, ಅದು ಬೆಳಕಿಗೆ ಬಂದಮೇಲೆ ಒಬಾಮಾ ಸರಕಾರ ಈಗ ಎಚ್ಚೆತ್ತುಕೊಂಡು ಸುರಕ್ಷಿತ ನಿಯಮಗಳನ್ನು ಕಟ್ಟುನಿಟ್ಟು ಜಾರಿಗೆ ತರಲು ಹವಣಿಸುತ್ತಿದೆ. ಈ ದುರ್ಘಟನೆ ನಮ್ಮ ಪತ್ರಿಕೆಗಳ, ಮಾಧ್ಯಮಗಳ ಗಮನಕ್ಕೆ ತಡವಾಗಿಯೇ ಬಂದಿತು. ಆದರೆ ಅದರ ಗಂಭೀರತೆಯನ್ನು ಅರಿತು ಜನರಿಗೆ ತಿಳಿವಳಿಕೆ ನೀಡುವ ಪ್ರಯತ್ನವಾಗಲಿ, ಅಮೆರಿಕಾದ ಕಂಪೆನಿಗಳ ಬೇಜವಾಬ್ದಾರಿತನದ ಖಂಡನೆಯಾಗಲಿ ಕಂಡುಬರಲಿಲ್ಲ, ವಸ್ತುತಃ ನಮ್ಮ ಮಾಧ್ಯಮಗಳು ಇದನ್ನು ಕಡೆಗಣಿಸಿವೆ ಎಂದೇ ಹೇಳಬೇಕು. ಅಮೆರಿಕಾದ ದೊಡ್ಡಣ್ಣ ಏನೇ ಮಾಡಿದರೂ ಅದಕ್ಕೆ 'ಮಾಫಿ' ಎಂಬ ಧೋರಣೆಯೇನೋ ?

# ಬ್ರಿಟಿಷ್ ಚುನಾವಣೆ ಕಲಿಸಿರುವ ಪಾಠ

ಬ್ರಿಟನ್ನಿನಲ್ಲಿ ಚುನಾವಣೆಗಳು ಮುಗಿದು ಹೊಸ ಸಮ್ಮಿಶ್ರ ಸರಕಾರ ಕನ್ಸರ್‌ವೇಟಿವ್ ಪಕ್ಷದ ನೇತೃತ್ವದಲ್ಲಿ ಅಧಿಕಾರಕ್ಕೆ ಬಂದಿದೆ. ಪ್ರಧಾನಿ ಪಟ್ಟ ವಹಿಸಿಕೊಂಡಿರುವ ಡೇವಿಡ್ ಕ್ಯಾಮೆರೂನ್‌ಗೆ 'ಬ್ರಿಟನ್ನಿನ ಅತ್ಯಂತ ಕಿರಿವಯಸ್ಸಿನ ಪ್ರಧಾನಿ' ಎಂಬ ಕಿರೀಟ. ಯುದ್ಧಾನಂತರದ ಕಾಲದಲ್ಲಿ ಅಧಿಕಾರಕ್ಕೆ ಬಂದಿರುವ 'ಸಮ್ಮಿಶ್ರ ಸರಕಾರ' ನಿಜವಾಗಿಯೂ 'ಸಮ್ಮಿಶ್ರವೆ'. ಏಕೆಂದರೆ, ಟೋರಿಗಳಿಗೂ, ಲಿಬರಲ್ ಡೆಮಾಕ್ರಾಟರಿಗೂ ಸೈದ್ಧಾಂತಿಕವಾಗಿ ಯಾವ ಬಗೆಯ ಸಾಮ್ಯವೂ ಇಲ್ಲ. ಅಧಿಕಾರ ಹಂಚಿಕೆ ಬಿಟ್ಟರೆ ಬೇರೆ ಯಾವುದರಲ್ಲೂ ಹೊಂದಾಣಿಕೆ ಕಾಣುತ್ತಿಲ್ಲ. 'ಕಿಂಗ್ ಮೇಕರ್' ಸ್ಥಾನದಲ್ಲಿ ಉದಯಿಸಿದ ಲಿಬರಲ್ ಡೆಮಾಕ್ರಾಟ್ ಪಕ್ಷ ಉಪ ಪ್ರಧಾನಿ ಪದವಿ ಗಿಟ್ಟಿಸಿಕೊಂಡಿದೆ. ಇದುವರೆಗೆ ಯಾವ ಚುನಾವಣೆಯಲ್ಲೂ ಲಿಬರಲ್ ಡೆಮಾಕ್ರಾಟರು ಕನ್ಸರ್‌ವೇಟಿವ್‌ಗಳೊಂದಿಗೆ ಕೂಡಿರಲಿಲ್ಲ. ಈಗಲೂ ಅಷ್ಟೆ, ಮೊದಲಿನಲ್ಲಿ ಲೇಬರ್ ಪಾರ್ಟಿ ಜೊತೆ ಸೇರುವ ಸಂಭವವೇ ಇತ್ತು. ಆದರೆ ಆದದ್ದು ಬೇರೆ. ಇದರೊಂದಿಗೆ ಹದಿಮೂರು ವರ್ಷಗಳ ಲೇಬರ್ ಆಡಳಿತ ಅಂತ್ಯಗೊಂಡಿದೆ. ಲೇಬರ್ ಪಕ್ಷದ ಸೋಲಿಗೆ ಕಾರಣಗಳನ್ನು ಹುಡುಕಿ ವಿಶ್ಲೇಷಣೆ ನಡೆಯುತ್ತದೆ. ಒಂದಂತೂ ನಿಜ, ಟೋನಿ ಬ್ಲೇರ್ ಇರಾಕ್ ಯುದ್ಧದ ವಿಷಯದಲ್ಲಿ ಅಮೆರಿಕಾದ ಜಾರ್ಜ್ ಬುಷ್ ಜೊತೆ ಬಾಲಂಗೋಚಿಯಾಗಿ ನಡೆದುಕೊಂಡಿದ್ದೇ ಸೋಲಿಗೆ ಕಾರಣ. ಪಕ್ಷದಲ್ಲೇ ಬಂದ ಒತ್ತಡದಿಂದಾಗಿ ಬ್ರೌನ್‌ಗೆ ಅಧಿಕಾರ ವಹಿಸಿಕೊಟ್ಟುಹೋದ ಬ್ಲೇರ್ ನೀತಿಯಲ್ಲೇನೂ ಬದಲಾಗಲಿಲ್ಲ. ಅದಲ್ಲದೆ, ಕಳೆದ ವರ್ಷ ತಲೆದೋರಿದ ಆರ್ಥಿಕ ಮುಗ್ಗಟ್ಟು ಬೇರೆ ಪರಿಣಾಮ ಉಂಟುಮಾಡಿದೆ. ಈಗಲೂ ಬ್ರಿಟನ್ನಿನ ಆರ್ಥಿಕ ಸ್ಥಿತಿ ಅಸ್ಥಿರವಾಗೇ ಇದೆ. ಇತ್ತೀಚೆಗೆ ಸಣ್ಣ ದೇಶ ಗ್ರೀಸ್‌ನಲ್ಲಿ ಸಾಲದ ಒತ್ತಡ ಹೆಚ್ಚಾದ ಪರಿಣಾಮ ಇತರ ಯೂರೋಪಿನ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯನ್ನು ತಲ್ಲಣ ಗೊಳಿಸಿತು. ಬ್ರಿಟಿಷ್ ಪೌಂಡು ಮತ್ತು ಯೂರೋ ದರ ಕುಸಿಯಿತು.

ಈ ಎಲ್ಲ ಹಿನ್ನೆಲೆಯಲ್ಲಿ ಬ್ರಿಟನ್ನಿನ ಚುನಾವಣೆಯ ಫಲಿತಾಂಶವನ್ನು ಗಮನಿಸಬೇಕು. ಲೇಬರ್ ಪಕ್ಷ ಅಧಿಕಾರ ಕಳೆದುಕೊಂಡಿದ್ದರೂ ಪಾರ್ಲಿಮೆಂಟಿನಲ್ಲಿ ಸಾಕಷ್ಟು ಸ್ಥಾನ ಪಡೆದುಕೊಂಡಿದೆ. ಇನ್ನು ಕನ್ಸರ್‌ವೇಟಿವ್ ಪಕ್ಷ ಯಾವ ದಿಶೆಯಲ್ಲಿ ಹೆಜ್ಜೆ ಇರಿಸುವುದೆಂಬುದನ್ನು ಕಾದುನೋಡಬೇಕಿದೆ. ಲಿಬರಲ್ ಡೆಮಾಕ್ರಾಟರೊಂದಿಗೆ ಹೊಂದಾಣಿಕೆ ಎಷ್ಟು ಕಾಲ ಮುಂದುವರಿದೀತೆಂದು ಈಗಲೇ ಹೇಳಲಾಗುವುದಿಲ್ಲ. ಚುನಾವಣೆಗಳಲ್ಲಿ ಬ್ರಿಟನ್ನಿನ ಉಗ್ರಗಾಮಿ ಸಂಘಟನೆಯಾದ ನ್ಯಾಷನಲಿಸ್ಟ್ ಪಾರ್ಟಿ ಒಂದೂ ಸ್ಥಾನವನ್ನು ಪಡೆಯಲಿಲ್ಲ. ಕಳೆದ ಚುನಾವಣೆಯಲ್ಲಿ ಈ ನಾಜಿ ಸಿದ್ಧಾಂತ ಪ್ರತಿಪಾದಕ ಸಂಘಟನೆ ಎರಡು ಸ್ಥಾನಗಳನ್ನು ಪಡೆದುಕೊಂಡಿತ್ತು. ಇದು ಕಳವಳಕ್ಕೂ ಕಾರಣವಾಗಿತ್ತು. ಈ ಸಲ ಹಾಗಾಗದೆ ಆ ಪಕ್ಷ ಮೂಲೆ ಗುಂಪಾಗಿರುವುದು ಸಮಾಧಾನದ ಸಂಗತಿ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು -೫೬೦ ೦೮೫

## ಸಾದರ ಸ್ವೀಕಾರ

**ನೀರು** *ಡಾ|| ಎನ್. ಎಸ್. ಲೀಲಾ*
**ಪುಟ :** ೮೮ **ಬೆಲೆ :** ರೂ. ೫೦

**ಸಸ್ಯಗಳು** *ಸುಮಂಗಲ ಎಸ್. ಮುಮ್ಮಿಗಟ್ಟಿ*
**ಪುಟ :** ೮೦ **ಬೆಲೆ :** ರೂ. ೫೦

**ಪ್ರಾಣಿಗಳು** *ಸುಮಂಗಲ ಎಸ್. ಮುಮ್ಮಿಗಟ್ಟಿ*
**ಪುಟ :** ೮೮ **ಬೆಲೆ :** ರೂ. ೫೦

**ಮಾನವದೇಹ** *ಡಾ|| ಸಿ. ಆರ್. ಚಂದ್ರಶೇಖರ್*
**ಪುಟ :** ೧೦೪ **ಬೆಲೆ :** ರೂ. ೬೦

**ಶಾಖ ಮತ್ತು ಶಬ್ದ** *ಪ್ರೊ|| ಡಿ. ಆರ್. ಬಳೂರಗಿ*
**ಪುಟ :** ೧೦೮ **ಬೆಲೆ :** ರೂ. ೬೦

**ಜೀವಕೋಶ ಮತ್ತು ಸೂಕ್ಷ್ಮಜೀವಿಗಳು**
*ಡಾ|| ಪಿ. ಕೆ. ರಾಜಗೋಪಾಲ್*
**ಪುಟ :** ೮೮ **ಬೆಲೆ :** ರೂ. ೫೦

**ಗಾಳಿ ಮತ್ತು ಅನಿಲಗಳು** *ಡಾ|| ಹೆಚ್. ರಾಮಚಂದ್ರಸ್ವಾಮಿ*
**ಪುಟ :** ೧೧೬ **ಬೆಲೆ :** ರೂ. ೬೦

**ಬಲ ಮತ್ತು ಚಲನೆ** *ಪ್ರೊ|| ಡಿ. ಆರ್. ಬಳೂರಗಿ*
**ಪುಟ :** ೧೨೦ **ಬೆಲೆ :** ರೂ. ೬೦

ವಿಜ್ಞಾನ ಸರಳ ಪರಿಚಯ ಮಾಲೆಯ ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಮುಗಿಯದ ರೀಲು** *ಸಂಪಾದಕ : ಶಿವರಾಂ ಪೈಲೂರು*
**ಪುಟ :** ೮೮ **ಬೆಲೆ : ಸೂಚಿಸಿಲ್ಲ**
**ಗುಂಡಿ ಬೈಲು ಬಳಗ,** ಕೇ/ ಆಫ್ ೧೧೯
೧ನೇ ಮುಖ್ಯರಸ್ತೆ, ೪ನೇ ಆಡ್ಡ ರಸ್ತೆ
ನಾರಾಯಣಪುರ, ಧಾರವಾಡ - ೫೮೦೦೦೮

**ಅಕಾವ್ಯಕ್ಕೆ ಅರ್ಥ ಗೊತ್ತಿಲ್ಲ ನನಗೆ...**
*ಆರ್. ಸುಧೀಂದ್ರ ಕುಮಾರ್*
**ಪುಟ :** ೫೬ **ಬೆಲೆ :** ರೂ. ೫೦
**ತ್ರಕೀರ್ಣ ಪ್ರಕಾಶನ,** ನಂ. ೫೯, ೩ನೇ ಅಡ್ಡ ರಸ್ತೆ, ೫ನೇ ಮುಖ್ಯ ರಸ್ತೆ, ಸರಸ್ವತಿಪುರಂ, ಮೈಸೂರು - ೫೭೦ ೦೦೯

**ಒಂದು ಉದ್ದನೆಯ ನೆರಳು** (ಕಥೆಗಳು) *ಎಸ್. ಗಂಗಾಧರಯ್ಯ*
**ಪುಟ :** ೧೪೪ **ಬೆಲೆ :** ರೂ. ೮೫
**ರೂಪಾ ಪ್ರಕಾಶನ,** ನಂ. ೨೪೦೬, ೨೪೦೭/ಕೆ.೧
೧ನೇ ಅಡ್ಡ ರಸ್ತೆ, ಹೊಸಬಂಡಿಕೇರಿ, ಮೈಸೂರು-೫೭೦ ೦೦೪

**ಆ ನೆಲಾ ಈ ನೆಲಾ** (ಕವನ ಸಂಕಲನ)
*ಡಾ|| ಕೆ. ಎನ್. ದೊಡ್ಡಮನಿ*
**ಪುಟ :** ೫೩ **ಬೆಲೆ :** ರೂ. ೪೦
**ಸುಮಾ ಪ್ರಕಾಶನ,** ನಂ. ೨೦೨, ಯಶವಂತ ಅಪಾರ್ಟ್‌ಮೆಂಟ್ಸ್, ಸರ್ವೋದಯ ಮಾರ್ಗ, ಹಿಂದವಾಡಿ, ಬೆಳಗಾವಿ - ೫೯೦೦೧೧

**ಬೆಳಕ ಹೆಜ್ಜೆಯನರಸಿ** (ಕವನಸಂಕಲನ) *ವಿ. ಹರಿನಾಥ ಬಾಬು*
**ಪುಟ :** ೧೧೨ **ಬೆಲೆ :** ರೂ. ೮೦
**ಪಲ್ಲವ ಪ್ರಕಾಶನ,** ಚನ್ನಪಟ್ಟಣ ಅಂಚೆ, ಎಮ್ಮಿಗನೂರು ಮಾರ್ಗ, ಬಳ್ಳಾರಿ - ೫೮೩೧೧೩

**ಮನ್ವಂತರಿ** (ಆಲ್ಬರ್ಟ್ ಐನ್‌ಸ್ಟೈನ್ ಜೀವನ - ಸಾಧನೆ)
*ಡಾ|| ಶಂಕರ ರಾಮಚಂದ್ರ ಕಂದಗಲ್ಲ*
**ಪುಟ :** ೭೨ **ಬೆಲೆ :** ರೂ. ೩೦
**ಕನ್ನಡ ಸಂಘ,** ಬಿ.ವಿ.ವಿ. ಸಂಘ, ಬಸವೇಶ್ವರ ವಿಜ್ಞಾನ ಮಹಾವಿದ್ಯಾಲಯ, ಬಾಗಲಕೋಟೆ

**ಒಳಬಳ್ಳಾರಿ ಚೆನ್ನಬಸವ ಮಹಾಸ್ವಾಮಿಗಳು**
*ಪ್ರೊ|| ಶಾಶ್ವತ ಸ್ವಾಮಿ, ಮುಕ್ಕುಂದಿ ಮಠ*
**ಪುಟ :** ೧೧೨ **ಬೆಲೆ :** ರೂ. ೧೦

**ಒದ್ದೋ ಕರಿಬಸವಯ್ಯನವರು** (ಜೀವನ)
*ಡಾ|| ಮೃತ್ಯುಂಜಯ ರುಮಾಲೆ*
**ಪುಟ :** ೧೨೮ **ಬೆಲೆ :** ರೂ. ೧೦

**ನಾಗರಾಳ ಸಂಗಪ್ಪನವರು** (ಜೀವನ) *ಪ್ರೊ|| ಎಸ್. ಜಿ. ಕರೂರ*
**ಪುಟ :** ೮೮ **ಬೆಲೆ :** ರೂ. ೧೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಲಿಂಗಾಯತ ಅಧ್ಯಯನ ಸಂಸ್ಥೆ,** ಶ್ರೀ ಜಗದ್ಗುರು ತೊಂಟಾದಾರ್ಯ ಸಂಸ್ಥಾನ ಮಠ, ಎಡೆಯೂರು ಡಂಬಳ - ಗದಗ

**ಮುಗ್ಗಲು ಮನಸಿನ ಪದರು** (ಕಥೆಗಳು) *ಎಸ್. ಬಿ. ಜೋಗುರ*
**ಪುಟ :** ೯೬ **ಬೆಲೆ :** ರೂ. ೫೦

**ಬಿಟಿ ಬದನೆ** (ಬದುಕು ಬರಿದಾಗಿಸುವ ಕುಲಾಂತರಿ)
*ಸಂ: ಬಸವರಾಜ ಸೂಳಿಭಾವಿ*
**ಪುಟ :** ೧೦೦ **ಬೆಲೆ :** ರೂ. ೫೦

**ಜಾತಿ ವಿನಾಶ** (ಮಾರ್ಕ್ಸ್‌ವಾದಿ ದೃಷ್ಟಿಕೋನ)
*ಕಂಚ ಐಲಯ್ಯ ಅನು : ಬಿ. ಸುಜ್ಞಾನ ಮೂರ್ತಿ*
**ಪುಟ :** ೭೨ **ಬೆಲೆ :** ರೂ. ೧೦೦

**ಮನುಸ್ಮೃತಿ ಮತ್ತು ದಲಿತರು** *ಜಹೊನಾ*
**ಪುಟ :** ೬೬ **ಬೆಲೆ :** ರೂ. ೪೦

**ಗೋಹತ್ಯೆ ನಿಷೇಧದ ಸುತ್ತಲಿನ ರಾಜಕೀಯ**
*ಪ್ರೊ|| ಬಿ. ಗಂಗಾಧರ ಮೂರ್ತಿ*
**ಪುಟ :** ೫೪ **ಬೆಲೆ :** ರೂ. ೩೦

**ನಮಗೆ ಗೋಡೆಗಳಿಲ್ಲ** (ಸ್ತ್ರೀವಾದ ಪರಿಚಯ)
*ಫೆಮಿನಿಸ್ಟ್ ಸ್ಟಡಿ ಸರ್ಕಲ್, ಅನು: ಬಿ. ಸುಜ್ಞಾನ ಮೂರ್ತಿ*
**ಪುಟ :** ೧೦೮ **ಬೆಲೆ :** ರೂ. ೬೦

**ಕೋರೆಗಾವ ಕದನ : ದಲಿತ ದಿಗ್ವಿಜಯ**
*ಸುಧಾಕರ ಖಾಂಬೆ*
*ಅನು: ಸಿದ್ರಾಮ ಕಾರಣಿಕ*
**ಪುಟ :** ೬೬ **ಬೆಲೆ :** ರೂ. ೪೦

ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು
ಲಡಾಯಿ ಪ್ರಕಾಶನ, ನಂ.೨೧, ಪ್ರಸಾದ್ ಹಾಸ್ಟೆಲ್ ಗದಗ - ೫೮೨೧೦೧

# ಭರವಸೆಯ ಬಿತ್ತಿ ಉತ್ಸಾಹ ಬೆಳೆಸಿದವ

## ಜೀನ್ ಗಿಯೋನೊ

ಅನುವಾದ : ಲೀಲಾ ಗರಡಿ

ಒಬ್ಬ ವ್ಯಕ್ತಿಯಲ್ಲಿರುವ ಮಾನವೀಯ ಗುಣಗಳನ್ನು ಸರಿಯಾಗಿ ಗುರುತಿಸಲು ಅವನನ್ನು ದೀರ್ಘ ಸಮಯದ ವರೆಗೆ ಗಮನಿಸಬೇಕಾಗುತ್ತದೆ. ಯಾವ ಫಲಾಪೇಕ್ಷೆಯೂ ಇಲ್ಲದೆ ಸದಾ ಒಳ್ಳೆಯ ಕೆಲಸದಲ್ಲಿ ತೊಡಗಿಸಿಕೊಳ್ಳುವುದಕ್ಕಿಂತಲೂ ಹೆಚ್ಚಿನದೇನಿದೆ ? ತನ್ನ ನಿಸ್ವಾರ್ಥ ಕೆಲಸದಿಂದ ಭೂಮಿಯ ರೂಪವನ್ನೇ ಬದಲಿಸಿ ದಂತಹ ಒಬ್ಬ ವ್ಯಕ್ತಿಯ ಕಥೆಯನ್ನು ನಾನೀಗ ಹೇಳುವೆನು.

ಸುಮಾರು ನಲವತ್ತು ವರ್ಷಗಳ ಹಿಂದೆ ನಾನು ಸೈನ್ಯವನ್ನು ಸೇರಿಕೊಂಡಿದ್ದೆ. ಒಂದು ವರ್ಷದ ತರಬೇತಿಯ ನಂತರ ನನಗೆ ಹದಿನೈದು ದಿನಗಳ ರಜೆ ದೊರಕಿತು. ಆಗ ನಾನು ಮನೆಗೆ ಹೋಗುವುದರ ಬದಲು ಪರ್ವತ ಪ್ರದೇಶದಲ್ಲಿ ಚಾರಣವನ್ನು ಕೈಗೊಂಡೆ. ಒಂದು ಚೀಲದಲ್ಲಿ ಅತ್ಯಾವಶ್ಯಕವಾದ ಕೆಲವು ಸಾಮಾನು ಗಳನ್ನಿಟ್ಟುಕೊಂಡು ತಿರುಗಾಟಕ್ಕೆ ಹೊರಟೆ. ನಾನು ನಡೆಯುತ್ತಿದ್ದ ಪ್ರದೇಶವನ್ನು ಹಿಂದೆಂದೂ ನೋಡಿರಲಿಲ್ಲ. ಅದು ಬಂಜರು ಭೂಮಿ ಯಾಗಿತ್ತು. ಅಲ್ಲಲ್ಲಿ ಕೆಲವು ಮುಳ್ಳಿನ ಕಂಟಿಗಳು ಮತ್ತು ಒಣಗಿದ ಹುಲ್ಲನ್ನು ಬಿಟ್ಟರೆ ಅಲ್ಲಿ ಬೇರಾವ ಬೆಳೆಯೂ ಇರಲಿಲ್ಲ.

ನಾನು ಆ ಪ್ರದೇಶದಲ್ಲಿ ನಡೆಯತೊಡಗಿ ಎರಡು ದಿನಗಳು ಕಳೆದವು. ಅದು ನಿರ್ಜನವಾಗಿತ್ತು. ನಾನು ನಿಂತಿದ್ದ ಸ್ಥಳದಲ್ಲಿ ಹಿಂದೊಮ್ಮೆ ಊರು ಇದ್ದಿತೆಂದು ತೋರುತ್ತದೆ. ಒಂದು ಕಡೆ ಹಾಳುಬಿದ್ದ ಆರೇಳು ಮನೆಗಳು ಕಂಡುಬಂದವು. ಅದನ್ನು ನೋಡಿ, ಅಲ್ಲಿಯೇ ಹತ್ತಿರದಲ್ಲಿ ನೀರಿನ ಒರತೆ ಇದ್ದಿರಲೇಬೇಕೆಂದೆನಿಸಿತು ನನಗೆ. ಸ್ವಲ್ಪ ಹುಡುಕಿದ ನಂತರ ಒಂದು ಹಳ್ಳ ಕಂಡುಬಂದಿತು. ಆದರೆ, ಅದು ಈಗ ಪೂರ್ತಿಯಾಗಿ ಬತ್ತಿ ಹೋಗಿತ್ತು. ನಾನು ಅಲ್ಲಿಯೇ ಸ್ವಲ್ಪ ವಿಶ್ರಾಂತಿ ಪಡೆದೆ. ನನ್ನ ಬಳಿ ಇದ್ದ ನೀರು ತೀರಿ ಹೋಗಿತ್ತು, ಗಂಟಲು ಒಣಗಿ ನೀರಿಗಾಗಿ ತಹತಹಿಸುತ್ತಿತ್ತು. ಆ ಹಾಳು ಬಿದ್ದ ಊರಿನ ಒಂದು ಮೂಲೆಯಲ್ಲಿ ಬಿದ್ದುಹೋದ ದೇವಾಲಯವೂ ಕಂಡಿತು, ಆದರೆ ಎಲ್ಲವೂ ನಿರ್ಜನವಾಗಿತ್ತು.

ಆಗ ಜೂನ್ ತಿಂಗಳು. ಸೂರ್ಯನ ಶಾಖದಿಂದ ಭೂಮಿ ಕಾಯ್ದುಹೋಗಿತ್ತು. ಬಿರುಸಾಗಿ ಬೀಸುತ್ತಿದ್ದ ಗಾಳಿ ಧೂಳೆಬ್ಬಿಸುತ್ತಿತ್ತು. ನಿರ್ಜೀವ ಮತ್ತು ನಿರ್ದಯವಾಗಿದ್ದ ಆ ವಾತಾವರಣದಲ್ಲಿ ನನಗೆ ಹೆಚ್ಚು ಹೊತ್ತು ಇರಲಾಗಲಿಲ್ಲ. ಅಲ್ಲಿಯೇ ಕಂಡುಬಂದ ಒಂದು ಕಾಲುದಾರಿಯಲ್ಲಿ ಮುಂದೆ ಸಾಗಿದೆ.

ಐದು ಗಂಟೆಗಳ ಕಾಲ ನಡೆದರೂ ನೀರು ಸಿಗಲಿಲ್ಲ. ಈಗಂತು ನಾನು ನೀರಿನ ಆಸೆಯನ್ನೇ ತೊರೆದುಬಿಟ್ಟಿದ್ದೆ. ನನ್ನ ಸುತ್ತಲೂ ಅಲ್ಲಲ್ಲಿ ಬೆಳೆದ ಮುಳ್ಳಿನ ಪೊದೆಗಳನ್ನು ಬಿಟ್ಟರೆ ಬೇರೇನೂ ಇರಲಿಲ್ಲ. ನಿರ್ಜನವಾದ ಆ ಪ್ರದೇಶದಲ್ಲಿ, ಬಹು ದೂರದಲ್ಲಿ ಕಪ್ಪಗೆ ಏನೋ ಕಂಡಿತು. ಅದು ಒಂದು ಮರದಂತೆ ತೋರಿತು. ನಾನು ಅದರ ಕಡೆಗೆ ನಡೆಯತೊಡಗಿದೆ. ಹತ್ತಿರ ಹೋಗಿ ನೋಡಿದಾಗ ಅದು ಮರವಾಗಿರಲಿಲ್ಲ. ಅಲ್ಲಿ ಒಬ್ಬ ಕುರುಬನಿದ್ದ. ಅವನ ಸುತ್ತ ಮುತ್ತ, ಕಾದ ನೆಲದ ಮೇಲೆ ಒಂದು ನಾಯಿ ಮತ್ತು ಸುಮಾರು ಮೂವತ್ತು ಕುರಿಗಳು ಕೆಡೆದಿದ್ದವು.

ಆತನು ಸೋರೆಬುರುಡೆಯಿಂದ ನನಗೆ ಕುಡಿಯಲು ನೀರು ಕೊಟ್ಟನು. ಕೆಲ ಸಮಯದ ನಂತರ ನನ್ನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಪ್ರಕೃತಿಯಲ್ಲಿ ಸಹಜವಾಗಿದ್ದ ಒಂದು ಆಳವಾದ ಬಾವಿಯಿಂದ ಆತನು ನೀರು ಪಡೆಯುತ್ತಿದ್ದ. ತಾನೇ ಒಂದು ಮರದ ಗಿರಕಿಯನ್ನು ಮಾಡಿ, ಹಗ್ಗದಿಂದ ನೀರು ಸೇದುತ್ತಿದ್ದನು. ಆತನು ಮಿತಭಾಷಿ. ಒಬ್ಬೊಂಟಿಯಾಗಿದ್ದು ಯಾರೂ ಮಾತಾಡಲು ಇಲ್ಲದೆ ಇರುವುದು ಇದಕ್ಕೆ ಕಾರಣವಾಗಿದ್ದಿರಬಹುದು. ಆದರೆ ಆತನಲ್ಲಿ ಕಂಡುಬರುತ್ತಿದ್ದ ಆತ್ಮವಿಶ್ವಾಸವನ್ನು ಗಮನಿಸಿದರೆ, ತಾನು ಮಾಡುತ್ತಿದ್ದ ಕೆಲಸವನ್ನು ಆಳವಾಗಿ ಅರಿತಿದ್ದನೆಂದು ತೋರುತ್ತಿತ್ತು. ಜನಸಂಚಾರವಿಲ್ಲದ ಆ ಬಂಜರು ಭೂಮಿಯಲ್ಲಿ ಆತನನ್ನು ಕಾಣುವ ಯಾವುದೇ ನಿರೀಕ್ಷೆ ನನಗಿರಲಿಲ್ಲ. ಆತನು, ಸುತ್ತ ಮುತ್ತ ದೊರಕಿದ ಕಲ್ಲುಗಳಿಂದ ಒಂದು ಮನೆಯನ್ನು ಕಟ್ಟಿಕೊಂಡು ವಾಸಿಸುತ್ತಿದ್ದ. ಅದರ ಸೂರು ಮತ್ತು ಗೋಡೆಗಳು ಗಟ್ಟಿಮುಟ್ಟಾಗಿದ್ದವು. ಬರ್‍ರ್ರೋ ಎಂದು ಬೀಸುವ ಗಾಳಿ ಮನೆಗೆ ತಾಕಿ ಸದ್ದು ಮಾಡುತ್ತಿತ್ತು.

ಮನೆಯಲ್ಲಿ ಎಲ್ಲ ಸಾಮಾನುಗಳು ಅಚ್ಚುಕಟ್ಟಾಗಿದ್ದವು. ಚೆನ್ನಾಗಿ ಬೆಳಗಿ ತೊಳೆದ ಪಾತ್ರೆಗಳು ಲಕಲಕಿಸುತ್ತಿದ್ದವು, ಗುಡಿಸಿ ಸಾರಿಸಿದ ನೆಲ ಸ್ವಚ್ಛವಾಗಿತ್ತು. ಒಂದು ಮೂಲೆಯಲ್ಲಿ ಒಳ್ಳೆಯ ಕೊಡಲಿ ಇತ್ತು. ಸಣ್ಣ ಉರಿಯ ಒಲೆಯ ಮೇಲೆ ಒಂದು ಪಾತ್ರೆಯಲ್ಲಿ ಅಂಬಲಿ ಬೇಯುತ್ತಿತ್ತು. ಆತನು ತನ್ನ ಕೋಟಿನ ಗುಂಡಿಗಳನ್ನೆಲ್ಲ ಚೆನ್ನಾಗಿ ಹೊಲಿದುಕೊಂಡಿದ್ದನು. ಅದರ ಹರಿದ ಭಾಗವನ್ನು ಎಷ್ಟು ಚೆನ್ನಾಗಿ ಹೊಲಿದಿದ್ದನೆಂದರೆ ಅದನ್ನು ಸುಲಭವಾಗಿ ಗುರುತಿಸಲು ಸಾಧ್ಯವಿರಲಿಲ್ಲ. ಬೇಯಿಸಿದ ಅಂಬಲಿಯನ್ನು ನನಗೂ ಕೊಟ್ಟ. ನಂತರ ನಾನು ಅವನಿಗೆ ಸಿಗರೇಟು ಕೊಡಲು ಹೋದೆ. ಆದರೆ ಆತನು ತಾನು ಸಿಗರೇಟು ಸೇದುವುದಿಲ್ಲವೆಂದು ಹೇಳಿದನು. ಆತನ ನಾಯಿಯೂ ಕೂಡ ಅವನಂತೆಯೇ ಮೌನವಾಗಿತ್ತು.

ಮುಂದಿನ ಊರಿಗೆ ಇನ್ನೂ ಒಂದೂವರೆ ದಿನದ ದಾರಿ ಕ್ರಮಿಸಬೇಕಾಗಿತ್ತು. ನಮ್ಮಿಬ್ಬರಲ್ಲಿ ನಡೆದ ಮಾತಿನಿಂದ, ಅವನೊಂದಿಗೆ ಉಳಿದುಕೊಳ್ಳಲು ನನಗೆ

ಈ ಸುಖ ಸಂತೋಷವೆಲ್ಲ, ಒಬ್ಬನೇ ಒಬ್ಬ ವ್ಯಕ್ತಿಯ ಕೈಗಳಿಂದ ಸಾಧ್ಯವಾಯಿತೆಂದು ಅರಿವಾದಾಗ ಮನಸ್ಸು ಮೂಕವಾಗಿ ಆತನಿಗೆ ತಲೆ ಬಾಗುತ್ತದೆ. ಒಬ್ಬ ಸಾಮಾನ್ಯ ವ್ಯಕ್ತಿಯು, ಒಬ್ಬೊಂಟಿಗನಾಗಿ, ಬಂಜರು ಭೂಮಿಯನ್ನು ಸಮೃದ್ಧಗೊಳಿಸಿದ್ದನು. ಇದನ್ನು ಯೋಚಿಸಿದಾಗ, ಏನೇ ಆದರೂ, ಮಾನವೀಯತೆಯಲ್ಲಿ ನನ್ನ ವಿಶ್ವಾಸ ಮತ್ತೆ ನೆಲೆಗೊಳ್ಳುತ್ತದೆ. ಮನಸ್ಸು ಮಾಡಿದರೆ, ಮಾನವನು, ಭೂಮಿಯ ಮೇಲಿದ್ದುಕೊಂಡೂ ದೇವರಿಗೆ ಸಮಾನವಾದ ಕೆಲಸ ಮಾಡಲು ಸಾಧ್ಯವೆಂಬುದು ಆ ವ್ಯಕ್ತಿಯನ್ನು ಕಂಡಾಗ ಅರಿವಾಗುತ್ತದೆ.



ಚಿತ್ರಗಳು : ಮೈಕೆಲ್ ಮೆಕಾರ್ಡಿ

ಅನುಮತಿ ಕೊಟ್ಟಿದ್ದಾನೆಂದೆನಿಸಿತು. ಆದ್ದರಿಂದ ಅಲ್ಲಿಯೇ ಇದ್ದು ವಿಶ್ರಾಂತಿ ಪಡೆಯುವುದೇ ಸರಿಯೆಂದು ನಿರ್ಧರಿಸಿದೆ. ಆ ಬೆಟ್ಟದ ಪ್ರದೇಶದಲ್ಲಿ ದೂರ ದೂರದಲ್ಲಿ ಕೆಲವು ಹಳ್ಳಿಗಳಿದ್ದವು. ಹಳ್ಳಿಗಳಿಗೆ ಹೋಗಲು ಕಚ್ಚಾ ರಸ್ತೆಗಳಿದ್ದವು. ಹಳ್ಳಿಯ ಜನರು ಮರಗಳನ್ನು ಸುಟ್ಟು ಇದ್ದಿಲನ್ನು ಮಾಡುವ ಉದ್ಯೋಗ ಮಾಡುತ್ತಿದ್ದರು. ಇದರಿಂದ ಹತ್ತಿರದಲ್ಲಿದ್ದ ಮರಗಳೆಲ್ಲ ನಾಶವಾಗಿದ್ದವು. ಬಿರುಸಾದ ಗಾಳಿಯನ್ನು ತಡೆಯಲು ಯಾವ ಮರವೂ ಉಳಿದಿರಲಿಲ್ಲ. ಅಲ್ಲಿನ ದಿಣ್ಣೆಗಳ ಮೇಲೆ ಸದಾ ಧೂಳಿನ ಸುಂಟರ ಗಾಳಿ ನರ್ತಿಸುತ್ತಿತ್ತು. ಇದ್ದಿಲಿನ ಉದ್ಯೋಗದಲ್ಲಿ ಹೆಚ್ಚಿನ ಲಾಭವಿರಲಿಲ್ಲ. ಇದ್ದಿಲನ್ನು ನಗರದವರೆಗೆ ಸಾಗಿಸಲು ಎರಡು ಮೂರು ದಿನಗಳು ಬೇಕಾಗುತ್ತಿದ್ದವು. ಅಲ್ಲದೆ ಜನರಿಗೆ, ದಳ್ಳಾಳಿಯಿಂದ ಸಿಗುವ ಹಣದಲ್ಲಿ ಖರ್ಚನ್ನು ನಿಭಾಯಿಸುವುದು ಕಷ್ಟಕರವಾಗಿತ್ತು. ಇದ್ದಿಲು ವ್ಯಾಪಾರದಲ್ಲಿ ತೊಡಗಿದ ಕುಟುಂಬದ ಜನರು ಸಾಲ, ಅನಾರೋಗ್ಯ ಮತ್ತು ಬಂಜರು ಭೂಮಿಯ ಕಾರಣದಿಂದ ಸೋತು ಸುಣ್ಣವಾಗಿ ಒಬ್ಬೊಬ್ಬರೇ ಮರಣವನ್ನಪ್ಪುತ್ತಿದ್ದರು.

ಊಟವಾದ ನಂತರ ಆ ಮುದುಕನು ಒಂದು ಸಣ್ಣ ಚೀಲವನ್ನು ತಂದು, ಅದರಲ್ಲಿಯ ಬೀಜಗಳನ್ನು ಮೇಜಿನ ಮೇಲೆ ಸುರಿದನು. ಅವುಗಳನ್ನು ಚೆನ್ನಾಗಿ ಪರೀಕ್ಷಿಸತೊಡಗಿದನು. ಒಂದೊಂದೇ ಬೀಜವನ್ನು ತೆಗೆದುಕೊಂಡು ಚೆನ್ನಾಗಿ ಗಮನಿಸಿ ಒಳ್ಳೆಯ ಬೀಜಗಳನ್ನು ಬೇರೆ ಇಡತೊಡಗಿದನು. ಸಿಗರೇಟಿನ ಒಂದು ದಮ್ಮು ಎಳೆದು, ನಾನೂ ಅವನ ಕೆಲಸದಲ್ಲಿ ಸಹಾಯಮಾಡುವೆನೆಂದು ಹೇಳಿದೆ. ಆದರೆ ಆತ ಆ ಕೆಲಸ ತಾನೇ ಮಾಡುವೆನೆಂದು ಹೇಳಿದಾಗ ನಾನು ಸುಮ್ಮನಾದೆ. ಆತನಿಗೆ ಆ ಕೆಲಸದಲ್ಲಿದ್ದ ಏಕಾಗ್ರತೆಯನ್ನು ನೋಡಿ, ಅದರಲ್ಲಿ ನಾನು ಕೈ ಹಾಕುವುದು ಸರಿಯೆನಿಸಲಿಲ್ಲ. ನಮ್ಮಿಬ್ಬರ ನಡುವೆ ನಡೆದದ್ದು ಇಷ್ಟೇ ಮಾತು. ಬೀಜಗಳನ್ನು ಬೇರ್ಪಡಿಸಿದ ನಂತರ ಅವುಗಳನ್ನು ೧೦ರ ಗುಂಪುಗಳನ್ನಾಗಿ ವಿಂಗಡಿಸಿದನು. ಹಾಗೆ ಮಾಡುವಾಗ ಅವನು ಬೀಜಗಳನ್ನು ಇನ್ನೊಮ್ಮೆ ಸೂಕ್ಷ್ಮವಾಗಿ ಗಮನಿಸುತ್ತಿದ್ದನು. ಅವುಗಳಲ್ಲೇನಾದರು ಕುಂದು ಕಂಡುಬಂದರೆ ಅವುಗಳನ್ನು ಬೇರೆ ಇಡುತ್ತಿದ್ದನು. ಈ ರೀತಿಯಾಗಿ ಒಂದು ನೂರು ಬೀಜಗಳನ್ನು ಆರಿಸಿ ಒಂದು ಚೀಲದಲ್ಲಿ ಹಾಕಿದ ನಂತರ ಮಲಗಲು ಹೋದನು.

ಏಕೋ ಏನೋ ಅವನೊಂದಿಗಿರುವಾಗ ನನಗೆ ಬಹಳ ನೆಮ್ಮದಿಯ ಅನುಭವವಾಗುತ್ತಿತ್ತು. ಮರುದಿನ ಬೆಳಿಗ್ಗೆ, ಇನ್ನೊಂದು ದಿನ ನಾನು ಅವನೊಂದಿಗೆ ಇರಬಹುದೆ ಎಂದು ಕೇಳಿದೆ. ಅವನು ಸಹಜವಾಗಿಯೇ ಸಮ್ಮತಿಸಿದನು. ಆನಂತರ ಆತನು ಮತ್ತೆ ತನ್ನ ಕೆಲಸದಲ್ಲಿ ಮಗ್ನನಾದನು. ಮುಂದೆ ಇನ್ನಾವ ಮಾತಿನ ಅವಶ್ಯಕತೆಯೂ ಇರಲಿಲ್ಲ. ಆದರೆ ನನಗೆ ಆತನ ಜೀವನದ ಬಗ್ಗೆ ತಿಳಿಯುವ ಕುತೂಹಲ ಉಂಟಾಯಿತು.

ತಾನು ಆರಿಸಿದ ಬೀಜಗಳನ್ನೆಲ್ಲ ಒಂದು ನೀರಿನ ಪಾತ್ರೆಯಲ್ಲಿ ಹಾಕಿದನು. ಆಮೇಲೆ ದೊಡ್ಡಿಯಲ್ಲಿಯ ಕುರಿಗಳನ್ನು ಮೇಯಿಸಲು ಹೊರಟನು. ಆತನ ಕೈಯಲ್ಲಿ ಐದು ಅಡಿ ಉದ್ದದ ಒಂದು ಕಬ್ಬಿಣದ ಸಲಾಕೆ ಇತ್ತು. ಅದು ಒಂದು ಹೆಬ್ಬೆರಳಿನಷ್ಟು ದಪ್ಪವಿದ್ದಿರಬಹುದು. ನಾನೂ ಮೌನವಾಗಿ ಅವನನ್ನು ಹಿಂಬಾಲಿಸತೊಡಗಿದೆ. ಕುರಿಗಳು ಮೇಯುವ ಹುಲ್ಲುಗಾವಲು ಕಣಿವೆಯಲ್ಲಿತ್ತು. ಅಲ್ಲಿಗೆ ಹೋದಮೇಲೆ ಕುರಿಗಳನ್ನು ತನ್ನ ನಾಯಿಯ ಉಸ್ತುವಾರಿಯಲ್ಲಿ ಬಿಟ್ಟು ಬೆಟ್ಟದ ಮೇಲೆ ನನ್ನ ಕಡೆಗೆ ಬರತೊಡಗಿದನು. ನನ್ನ ನಡತೆಯಿಂದ ಬೇಸರಗೊಂಡು ನನ್ನನ್ನು ಗದರಿಸುವನೆಂದು ನನಗೆ ಭಯವಾಯಿತು. ಆದರೆ ಆತನು ಹಾಗೇನೂ ಮಾಡಲಿಲ್ಲ, ತನ್ನ ದಾರಿಯಲ್ಲಿ ಮುನ್ನಡೆದನು. ನನಗೆ ಮಾಡಲು ಏನೂ ಇಲ್ಲದ್ದರಿಂದ ನಾನೂ ಅವನ ಹಿಂದೆ ನಡೆದೆ. ಅವನು ಸುಮಾರು ನೂರು ಗಜ ದೂರದಲ್ಲಿದ್ದ ದಿಣ್ಣೆಯನ್ನು ಏರಿದನು.

ಅಲ್ಲಿ ಅವನು ಕಬ್ಬಿಣದ ಸಲಾಕೆಯಿಂದ ನೆಲವನ್ನು ಅಗೆದು, ಒಂದು ಬೀಜವನ್ನು ಬಿತ್ತಿ ಮೇಲೆ ಮಣ್ಣು ಮುಚ್ಚಿದನು. ಅವನು ನಾಟಿ ಜಾತಿಯ ಬೀಜಗಳನ್ನು ಬಿತ್ತುತ್ತಿದ್ದನು. ಆ ಭೂಮಿ ಅವನಿಗೆ ಸೇರಿದುದೇ ಎಂದು ನಾನು ಕೇಳಿದೆ. ಆದರೆ ಅದು ಯಾರಿಗೆ ಸೇರಿದೆ ಎಂದುಕೂಡ ಅವನಿಗೆ ತಿಳಿದಿರಲಿಲ್ಲ. ಅದು ಊರಿನ ಒಂದು ಸಮುದಾಯಕ್ಕೆ ಸೇರಿತ್ತೋ, ಅಥವಾ, ಯಾರೋ ಶ್ರೀಮಂತನದಾಗಿದ್ದು, ಅವನಿಗೆ ಅದರ ಬಗ್ಗೆ ಗಮನವೇ ಇರಲಿಲ್ಲವೋ! ಏನೇ ಇರಲಿ, ಅದರ ಯಜಮಾನನು ಯಾರು ಎಂಬುದನ್ನು ತಿಳಿಯಬೇಕೆಂಬ ಯಾವ ಇಚ್ಛೆಯೂ ಆತನಿಗಿರಲಿಲ್ಲ. ಆತನು ಆ ಒಂದು ನೂರು ಬೀಜಗಳನ್ನು ಅತ್ಯಂತ ಪ್ರೀತಿಯಿಂದ ಬಿತ್ತಿದನು.

ಮಧ್ಯಾಹ್ನದ ಊಟದ ನಂತರ ಆತನು ಮತ್ತೊಮ್ಮೆ ಬೀಜ ಬಿತ್ತುವ ಕೆಲಸದಲ್ಲಿ ತೊಡಗಿದನು. ನಾನು ಮತ್ತೆ ಮತ್ತೆ ಪ್ರಶ್ನೆಗಳನ್ನು ಕೇಳಿ ಆತನನ್ನು ಪೀಡಿಸಿದೆನೆಂದು ತೋರುತ್ತದೆ. ಏಕೆಂದರೆ, ಕೊನೆಗೆ, ನನಗೆ, ಆತನ ಬಗ್ಗೆ ಅಲ್ಪಸ್ವಲ್ಪ ತಿಳಿದುಬಂದಿತು; ಕಳೆದ ಮೂರು ವರ್ಷಗಳಿಂದ ಆತನು ಆ ಬಂಜರು ಭೂಮಿಯಲ್ಲಿ ಬೀಜಗಳನ್ನು ಬಿತ್ತುತ್ತಿದ್ದನು. ಇಲ್ಲಿಯವರೆಗೆ, ಒಂದು ಲಕ್ಷ ಬೀಜಗಳನ್ನು ಬಿತ್ತಿದ್ದನು. ಆ ಒಂದು ಲಕ್ಷದಲ್ಲಿ ಕೇವಲ ಇಪ್ಪತ್ತು ಸಾವಿರ ಸಸಿಗಳು ಮಾತ್ರ ಹುಟ್ಟಿಕೊಂಡಿದ್ದವು. ಅದರಲ್ಲಿಯೂ ಕೇವಲ ಅರ್ಧದಷ್ಟು ಮಾತ್ರ ಜೀವಿಸುತ್ತವೆ ಎಂದು ಆತ ಹೇಳಿದ. ಏಕೆಂದರೆ, ಅರ್ಧ ಇಲಿಗಳ ಪಾಲಾಗಬಹುದು ಇಲ್ಲವೆ, ಪ್ರಕೃತಿಯ ವಿಕೋಪಕ್ಕೆ ತುತ್ತಾಗಬಹುದು ಎಂಬುದು ಆತನ ಎಣಿಕೆಯಾಗಿತ್ತು. ಆದರೆ ಮೊದಲು ಏನೂ ಇಲ್ಲದ ಭೂಮಿಯಲ್ಲಿ ಇಂದು ಹತ್ತು ಸಾವಿರ ಸಸಿಗಳಾದರೂ ಬೆಳೆದಿವೆಯಲ್ಲ!

ಇದೆಲ್ಲ ಕೇಳಿದ ಮೇಲೆ ನಾನು ಈ ವ್ಯಕ್ತಿಯ ವಯಸ್ಸಿನ ಬಗ್ಗೆ ಲೆಕ್ಕ ಹಾಕತೊಡಗಿದೆ. ಖಂಡಿತವಾಗಿಯೂ ಆತನ ವಯಸ್ಸು ಐವತ್ತಕ್ಕೆ ಮೀರಿರಬಹುದು. ತನಗೆ ಐವತ್ತೈದು ವರ್ಷ ವಯಸ್ಸು ಎಂದು ಆತ ಸ್ವತಃ ನನಗೆ ಹೇಳಿದ. ಹಿಂದೊಮ್ಮೆ ಬೆಟ್ಟದ ಕೆಳಭಾಗದಲ್ಲಿ ಆತನ ಹೊಲವಿತ್ತು. ಆದರೆ ಇದ್ದಕ್ಕಿದ್ದಂತೆ ಆತನ ಮಗ ಮತ್ತು ಹೆಂಡತಿ ತೀರಿಕೊಂಡರು. ಇದರಿಂದ ಆತನ ಮನಸ್ಸಿಗೆ ಆಘಾತವಾಯಿತು. ಅಂದಿನಿಂದಲೇ ಆತನು ತನ್ನ ನಾಯಿ ಮತ್ತು ಕುರಿಗಳೊಂದಿಗೆ ಏಕಾಂತವಾಸಕ್ಕಾಗಿ ಇಲ್ಲಿಗೆ ಬಂದು ನೆಲೆಸಿದನು. ಮರಗಿಡಗಳಿಲ್ಲದೆ ಅಲ್ಲಿಯ ಭೂಮಿ ನಿಧಾನವಾಗಿ ಸಾಯುತ್ತಿದೆ ಎಂದೆನಿಸಿತು ಅವನಿಗೆ. ಆತನಿಗೆ ಬೇರಾವ ಹೊಣೆಗಾರಿಕೆ ಇಲ್ಲದಿದ್ದರಿಂದ ಆ ಭೂಮಿಯಲ್ಲಿ ಜೀವ ತುಂಬುವ ಸಂಕಲ್ಪ ಮಾಡಿದನು.

ನಾನು ಯುವಕನಾಗಿದ್ದೆ, ಆ ಮರುಭೂಮಿಯಂತಹ ಪ್ರದೇಶದಲ್ಲಿ ತಿರುಗಾಟ ಕೈಗೊಂಡಿದ್ದರಿಂದ ನನಗೆ ಆತನ ರಹಸ್ಯ ಸ್ವಲ್ಪ ತಿಳಿದುಬಂತು. ಆಗ, ನನಗೆ ಜೀವನದ ಬಗ್ಗೆ ಹೆಚ್ಚಿನ ತಿಳುವಳಿಕೆ ಇರಲಿಲ್ಲ, ಸುಖಮಯ ಭವಿಷ್ಯದ ದಾರಿಯನ್ನು ಹುಡುಕುತ್ತಿದ್ದೆ. ಮುಂಬರುವ ಮೂವತ್ತು ವರ್ಷಗಳಲ್ಲಿ ಆತನು ಬೆಳೆಸಿದ್ದ ಹತ್ತು ಸಾವಿರ ಮರಗಳು ಒಂದು ದಟ್ಟವಾದ ಕಾಡಿನ ರೂಪ ತಾಳುವುವೆಂದು ನಾನು ಅವನಿಗೆ ಹೇಳಿದೆ. ಅದಕ್ಕೆ ಆತ, "ದೇವರು ದೀರ್ಘಾಯುಸ್ಸು ಕೊಟ್ಟರೆ, ನಾನು ಇನ್ನೂ ಅನೇಕ ಮರಗಳನ್ನು ನೆಡುವೆನು. ಆಗ ಈ ಹತ್ತು ಸಾವಿರ ಮರಗಳು ಯಾವ ಲೆಕ್ಕಕ್ಕೂ ಬರುವುದಿಲ್ಲ, ಅವು ಸಮುದ್ರದ ನೀರಿನಲ್ಲಿ ಒಂದು ಹನಿಗೆ ಸಮನಾಗುವುವು" ಎಂದು ಹೇಳಿದ. ಇದಲ್ಲದೆ ಆತನು ಕೆಲವು ಹಣ್ಣಿನ ಸಸಿಗಳನ್ನು ಬೆಳೆಸುವ ಪ್ರಯೋಗವನ್ನೂ ಮಾಡುತ್ತಿದ್ದ. ಇದಕ್ಕಾಗಿ ಆತನು ತನ್ನ ಮನೆಯ ಮುಂದೆ ಒಂದು ಸಸ್ಯಾಗಾರವನ್ನು ನಿರ್ಮಿಸಿದ್ದ. ಅದರ ಸುತ್ತ ತಂತಿಯ ಬೇಲಿಯನ್ನು ಕಟ್ಟಿ ಕುರಿಗಳಿಂದ ರಕ್ಷಿಸಿದ್ದ. ಈ ಸಸಿಗಳು ಬಹಳ ಚೆನ್ನಾಗಿ ಬೆಳೆಯುತ್ತಿದ್ದವು. ಕೆಳಗಿನ ಕಣಿವೆಯಲ್ಲಿ ಇನ್ನೊಂದೇ ರೀತಿಯ ಬೀಜಗಳನ್ನು ಬಿತ್ತುವ ಆಲೋಚನೆ ಮಾಡಿದ್ದನು. ಕಣಿವೆಯ ಭೂಮಿಯ ಸ್ವಲ್ಪ ಆಳದಲ್ಲಿ ಆರ್ದ್ರತೆ ಇದ್ದುದರಿಂದ ಸಸಿಗಳು ಚೆನ್ನಾಗಿ ಬೆಳೆಯುವ ಸಂಭವ ಇತ್ತು.



ಮರುದಿವಸ ನಾನು ಅಲ್ಲಿಂದ ಹೊರಟುಬಿಟ್ಟೆ. ಮುಂದಿನ ವರ್ಷ, ೧೯೧೪ರಲ್ಲಿ ಮೊದಲ ಮಹಾಯುದ್ಧ ಆರಂಭವಾಯಿತು. ನಾನಿದ್ದ ಸೈನ್ಯದ ಭಾಗ ಸತತವಾಗಿ ಐದು ವರ್ಷಗಳ ವರೆಗೆ ಈ ಯುದ್ಧದಲ್ಲಿ ತೊಡಗಿತ್ತು. ಸೈನಿಕನಾಗಿದ್ದ ನಾನೂ ಈ ಯುದ್ಧದಲ್ಲಿ ತೊಡಗಿದ್ದರಿಂದ ನನಗೆ ಮರಗಳ ಬಗ್ಗೆ ಯೋಚಿಸುವ ವ್ಯವಧಾನವೇ ಇರಲಿಲ್ಲ. ನಿಜ ಹೇಳಬೇಕೆಂದರೆ ಆ

ಕುರಿಗಾಹಿಯ ಕೆಲಸದ ಪ್ರಭಾವ ನನ್ನ ಮೇಲೆ ತಿಲಮಾತ್ರವೂ ಆಗಿರಲಿಲ್ಲ. ಜನರಿಗೆ ಬಗೆ ಬಗೆಯ ಹವ್ಯಾಸಗಳಿರುತ್ತವೆ. ಕೆಲವರು ಅಂಚೆ ಚೀಟಿಗಳನ್ನು ಸಂಗ್ರಹಿಸಿದರೆ ಇನ್ನು ಕೆಲವರು ದೇಶ ವಿದೇಶಗಳ ನಾಣ್ಯ, ನೋಟುಗಳನ್ನು ಸಂಗ್ರಹಿಸುತ್ತಾರೆ. ಹಾಗೆಯೇ ಕೆಲವರಿಗೆ ಮರ ಬೆಳೆಸುವ ಹವ್ಯಾಸವೂ ಇರಬಹುದು. ನಾನು ಈ ಘಟನೆಯನ್ನು ಮರೆತೇಬಿಟ್ಟಿದ್ದೆ.

ಯುದ್ಧ ಮುಗಿದ ಮೇಲೆ ನನಗೆ ದೀರ್ಘವಾದ ರಜೆ ಮತ್ತು ಸಾಕಷ್ಟು ಹಣವೂ ದೊರೆಯಿತು. ಪ್ರಕೃತಿಯ ಮಡಿಲಲ್ಲಿ ಸುತ್ತುವ ಮನಸ್ಸಾಯಿತು. ಮತ್ತೊಮ್ಮೆ ಅದೇ ಬಂಜರು ಪ್ರದೇಶದಲ್ಲಿ ತಿರುಗಾಟಕ್ಕೆ ಹೊರಟೆ. ಅಲ್ಲಿಯ ವಾತಾವರಣದಲ್ಲಿ ಯಾವ ಬದಲಾವಣೆಯೂ ತೋರಲಿಲ್ಲ. ಆದರೆ ಆ ಹಾಳುಬಿದ್ದ ಊರ ಬಳಿ ಹೋಗಿ ನೋಡಿದಾಗ, ದೂರದ ಬೆಟ್ಟಗಳ ಮೇಲೆ ಮಂಜು ಕವಿದಂತೆ ಕಂಡಿತು. ಅಲ್ಲಿಂದ ನಾನು ಆ ಕುರುಬನ ಮನೆಯ ಕಡೆಗೆ ಹೋದಂತೆಲ್ಲ ಆತನ ನೆನಪು ಹೆಚ್ಚು ಸ್ಪಷ್ಟವಾಗತೊಡಗಿತು. ಆ ಹತ್ತು ಸಾವಿರ ಮರಗಳು ಈಗ ಎಷ್ಟು ಎತ್ತರ ಬೆಳೆದಿರಬಹುದೆಂಬ ಕುತೂಹಲ ಹುಟ್ಟಿತು.




ಯುದ್ಧದಲ್ಲಿ ಬಹಳಷ್ಟು ಜನರು ಸಾಯುವುದನ್ನು ನಾನು ನೋಡಿದ್ದೆ. ಆ ಕುರುಬನು ಸತ್ತುಹೋಗಿದ್ದಾನೆಂದು ಯಾರಾದರೂ ಹೇಳಿದ್ದರೆ ನಾನು ಅದನ್ನು ಸುಲಭವಾಗಿ ನಂಬುತ್ತಿದ್ದೆ. ಐವತ್ತು ವರ್ಷದ ಮುದುಕನಿಗೆ ಜೀವನದಲ್ಲಿ ಸಾವಲ್ಲದೆ ಇನ್ನೇನು ಉಳಿದಿರುತ್ತದೆ ! ಆದರೆ ಆ ಕುರುಬನು ಸತ್ತಿರಲಿಲ್ಲ. ಅವನು ಬದುಕಿದ್ದನಲ್ಲದೆ ಗಟ್ಟಿಮುಟ್ಟಾಗಿದ್ದನು. ಅವನ ಕೆಲಸದಲ್ಲಿ ಸ್ವಲ್ಪ ಬದಲಾವಣೆಯಾಗಿತ್ತು. ಅವನ ಹತ್ತಿರ ಈಗ ಕೇವಲ ನಾಲ್ಕು ಕುರಿಗಳು ಮತ್ತು ನೂರು ಜೇನುಗೂಡುಗಳಿದ್ದವು. ತಾನು ಬೆಳೆಸಿದ ಸಸಿಗಳನ್ನು ಕುರಿಗಳು ತಿನ್ನಬಹುದೆಂಬ ಚಿಂತೆಯಿಂದ ಅವನು ತನ್ನ ಕುರಿಗಳನ್ನು ಮಾರಿಬಿಟ್ಟಿದ್ದನು. ಅವನ ಕೆಲಸದ ಮೇಲೆ ಮಹಾಯುದ್ಧದ ಪರಿಣಾಮ ಎಳ್ಳಷ್ಟೂ ಆಗಿರಲಿಲ್ಲ. ಆ ಭೀಷಣ ಯುದ್ಧದ ಪರಿವೆ ಇಲ್ಲದೆ ನಿರಂತರವಾಗಿ ಬೀಜಗಳನ್ನು ಬಿತ್ತುತ್ತಿದ್ದನು.

೧೯೧೦ರಲ್ಲಿ ನೆಟ್ಟಿದ್ದ ಮರಗಳು ಎತ್ತರವಾಗಿ ಬೆಳೆದಿದ್ದವು. ಅವುಗಳ ಮುಂದೆ ನಾವು ಕುಬ್ಜರಂತೆ ಕಾಣುತ್ತಿದ್ದೆವು. ಹಸುರಿನಿಂದ ಮೈದುಂಬಿ ನಿಂತ ಆ ಮರಗಳನ್ನು ನೋಡಲು ಎರಡು ಕಣ್ಣುಗಳು ಸಾಲುತ್ತಿರಲಿಲ್ಲ. ಈ ಅದ್ಭುತವಾದ ಬದಲಾವಣೆಯನ್ನು ವರ್ಣಿಸುವುದು ಸಾಧ್ಯವಿಲ್ಲ. ನಾವು ಇಡೀ ದಿನ ಮೌನವಾಗಿ ಆ ಹಸುರಿನಿಂದ ನಳನಳಿಸುವ ಕಾಡಿನಲ್ಲಿ ಸುತ್ತಾಡಿದೆವು. ಅದು ಈಗ ೧೧ ಕಿಲೋಮೀಟರು ಉದ್ದ ಹಾಗೂ ೩ ಕಿಲೋಮೀಟರು ಅಗಲವಾಗಿ ವ್ಯಾಪಿಸಿತ್ತು. ಇದೆಲ್ಲವೂ ಅಶಿಕ್ಷಿತನಾದ ಒಬ್ಬ ಕುರುಬನ ಸತತ ದುಡಿತದ ಫಲವಾಗಿತ್ತು. ಆತನ ಮಾನವೀಯತೆ ಮತ್ತು ಉದಾರ ಮನವನ್ನು ನೋಡಿ ನನ್ನ ಹೃದಯ ತುಂಬಿ ಬಂತು. ಬಯಸಿದರೆ ಒಬ್ಬ ವ್ಯಕ್ತಿ, ಸಂಹಾರ ಮತ್ತು ಹಿಂಸೆಯ ದಾರಿಯನ್ನು ಬಿಟ್ಟು, ಒಂದು ಸೊಗಸಾದ ಪ್ರೇಮಮಯ ಜಗತ್ತನ್ನು ಸೃಷ್ಟಿಸಿ ಭಗವಂತನಿಗೆ ಸಮಾನನಾಗಬಹುದು ಎನಿಸಿತು.

ಆ ಕುರುಬನು, ಜಗತ್ತಿನಲ್ಲಿ ನಡೆಯುತ್ತಿದ್ದ ಕೋಲಾಹಲಗಳಿಂದ ಪೂರ್ತಿಯಾಗಿ ದೂರವಿದ್ದು, ತನ್ನ ಕನಸುಗಳನ್ನು ಸಾಕಾರಗೊಳಿಸುವುದರಲ್ಲಿ ಮಗ್ನನಾಗಿದ್ದನು. ಗಾಳಿಯಲ್ಲಿ ಓಲಾಡುತ್ತ ನಳನಳಿಸುವ ಅಸಂಖ್ಯ ಮರಗಳು ಆತನ ಕೆಲಸದ ಮೂಕ ಸಾಕ್ಷಿಯಾಗಿದ್ದವು. ಅವನು ನನಗೆ ಐದು ವರ್ಷದ ಕೆಲವು ತೇಗದ ಮರಗಳನ್ನು ತೋರಿಸಿದ. ಆತ ಅವುಗಳನ್ನು ನೆಡುತ್ತಿದ್ದಾಗ ನಾನು ಯುದ್ಧದಲ್ಲಿ ತೊಡಗಿದ್ದೆ. ಈ ಮರಗಳನ್ನು ಕಣಿವೆಯ ದಡದಲ್ಲಿ ನೆಟ್ಟಿದ್ದನು. ಅಲ್ಲಿಯ ಮಣ್ಣಿನಲ್ಲಿ ಹೆಚ್ಚು ಆರ್ದ್ರತೆ ಇತ್ತು. ಈ ಮರಗಳ ಬೇರುಗಳು ಮಣ್ಣನ್ನು ತಬ್ಬಿ ಹಿಡಿದಿದ್ದವು. ಅವುಗಳ ಅಗಲವಾದ ಎಲೆಗಳು, ಸೂರ್ಯನ ಪ್ರಖರವಾದ ಬಿಸಿಲಿನಿಂದ ಭೂಮಿಯನ್ನು ರಕ್ಷಿಸುತ್ತಿದ್ದವು. ಮರಗಳ ಬೆಳವಣಿಗೆಯಿಂದ ಈ ಭೂಮಿಗೆ ಹೊಸ ಜೀವ ಬಂದಂತಾಗಿತ್ತು, ಆದರೆ ಆತನಿಗೆ ಇದನ್ನೆಲ್ಲ ನೋಡುತ್ತ ಕುಳಿತಿರಲು ಸಮಯವೆಲ್ಲಿ? ಆತನಂತೂ ಸದಾ ತನ್ನ ಕೆಲಸದಲ್ಲಿ ನಿರತನಾಗಿರುತ್ತಿದ್ದ. ನಾನು ಹಿಂತಿರುಗುತ್ತಿದ್ದಾಗ, ಕೆಲವು ಹಳ್ಳಗಳಲ್ಲಿ ಕಲಕಲ ಸದ್ದು ಕೇಳಿಸಿತು. ಅವು ಎಷ್ಟು ದಿನಗಳಿಂದ ಬತ್ತಿ ಹೋಗಿದ್ದವೋ ಏನೋ. ಇದು ಮರಗಳ ಬೆಳವಣಿಗೆಯ ಆಶ್ಚರ್ಯಕರ ಪರಿಣಾಮವಾಗಿ ಜನರ ಮನದಲ್ಲಿ ಉತ್ಸಾಹ ಹುಟ್ಟಿಸುತಿತ್ತು. ಬಹುಕಾಲದ ಹಿಂದೆ ಇಲ್ಲಿ ನೀರು ಹರಿಯುತ್ತಿದ್ದಿರಬಹುದು. ನಾನು ಹಿಂದೆ ಉಲ್ಲೇಖಿಸಿದ ಆ ಹಾಳುಬಿದ್ದ ಹಳ್ಳಿಗಳು ಒಮ್ಮೆ ಈ ನೀರಿನ ಒರತೆಗಳ ದಡದಲ್ಲಿಯೇ ಇದ್ದಿರಬಹುದು.

ಗಾಳಿಯೂ ಸಹ ಬೀಜಗಳನ್ನು ದೂರ ದೂರದವರೆಗೆ ಪ್ರಸರಿಸುತ್ತಿತ್ತು. ಬತ್ತಿಹೋದ ನದಿಪಾತ್ರಗಳಲ್ಲಿ ಮತ್ತೆ ನೀರು ಹರಿಯತೊಡಗಿದ್ದರಿಂದ ಅದರ ದಂಡೆಯಲ್ಲಿ ಹುಲ್ಲು ಮತ್ತು ವಿವಿಧ ಜಾತಿಯ ಪೊದೆಗಳು ಬೆಳೆದುಕೊಂಡಿದ್ದವು. ಮಣ್ಣಿನ ಹೊದಿಕೆಯನ್ನು ಹೊದ್ದು ಮಲಗಿದ್ದ ವಿಧವಿಧವಾದ ಬೀಜಗಳು, ಈಗ ಎಚ್ಚರಗೊಂಡು ಹೊಸ ರೂಪದಿಂದ ಮೇಲೇಳುತ್ತಿದ್ದವು. ಆಕರ್ಷಕವಾದ ಬಣ್ಣಗಳ ಕಾಡುಹೂಗಳು ಅರಳಿದ್ದವು. ಒಟ್ಟಿನಲ್ಲಿ ಬದುಕಿಗೊಂದು ಅರ್ಥ ಹುಟ್ಟಿತ್ತು. ಆದರೆ ಈ ಎಲ್ಲ ಬದಲಾವಣೆ ಬಹಳ ನಿಧಾನವಾಗಿ, ಪ್ರಕೃತಿಗೆ ಸಹಜವಾದ ರೀತಿಯಿಂದ ನಡೆದದ್ದರಿಂದ ಅದು ಅತ್ಯದ್ಭುತವೆಂದು ತೋರಲೇ ಇಲ್ಲ. ಮೊಲ ಮತ್ತು ಕಾಡುಹಂದಿಗಳನ್ನು ಬೇಟೆಯಾಡುವವರು ಅದನ್ನು ಕಂಡಿದ್ದರು, ಹೌದು. ಆದರೆ, ಅದನ್ನು ಅವರು, ತಮಗೆ ಕಾರಣ ತಿಳಿಯದ ಪ್ರಕೃತಿಯ ಯಾವುದೋ ಗುಣಧರ್ಮವಿರಬೇಕೆಂದುಕೊಂಡರು. ಆದ್ದರಿಂದ ಯಾರೂ ಆ ಕುರುಬನ ಕೆಲಸದ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ಅವನ ಕೆಲಸ ಅವರ ಗಮನಕ್ಕೆ ಬಂದಿದ್ದರೆ ಅದಕ್ಕೆ ವಿರೋಧವಿರುತ್ತಿತ್ತು. ಆದರೆ, ಆತನು ಯಾರ ಕಣ್ಣಿಗೂ ಬೀಳುತ್ತಿರಲಿಲ್ಲ. ಸರಕಾರದವರೇ ಆಗಲಿ ಅಥವಾ ಹಳ್ಳಿಯವರೇ ಆಗಲಿ ಆ ದೊಡ್ಡ ಕಾಡನ್ನು ಒಬ್ಬ ವ್ಯಕ್ತಿ ನಿರ್ಮಿಸಿದ್ದಾನೆಂದು ನಂಬುವುದು ಸಾಧ್ಯವಿರಲಿಲ್ಲ. ಆ ವ್ಯಕ್ತಿಯನ್ನು ಅರ್ಥಮಾಡಿಕೊಳ್ಳಲು, ಆತನು, ಸಂಪೂರ್ಣವಾಗಿ ಒಬ್ಬೊಂಟಿಯಾಗಿ, ನಿರ್ಜನವಾದ ಪ್ರದೇಶದಲ್ಲಿ ಕೆಲಸ ಮಾಡುತ್ತಿದ್ದನೆಂಬುದನ್ನು ತಿಳಿದುಕೊಳ್ಳುವುದು ಬಹುಮುಖ್ಯ. ಏಕಾಂತದ ವಾತಾವರಣದಲ್ಲಿದ್ದು ಆತ ಕೊನೆಗೆ ಮಾತಾಡುವುದನ್ನೇ ಮರೆತು ಬಿಟ್ಟ. ಬದುಕಿನಲ್ಲಿ ಮಾತಿನ ಅವಶ್ಯಕತೆ ಇಲ್ಲದಿರುವುದೇ ಅದಕ್ಕೆ ಕಾರಣವಾಗಿರಬಹುದು.

೧೯೩೩ರಲ್ಲಿ ಮೊಟ್ಟ ಮೊದಲಿಗೆ ಒಬ್ಬ ಅರಣ್ಯಾಧಿಕಾರಿ ಅಲ್ಲಿಗೆ ಬಂದನು. ಕಾಡಿನ ಪಕ್ಕದಲ್ಲಿ ಬೀಡಿ, ಸಿಗರೇಟು ಅಥವಾ ಯಾವುದೇ ರೀತಿಯ ಬೆಂಕಿ ಹಾಕುವುದನ್ನು ನಿಷೇಧಿಸಲಾಗಿದೆ ಎಂದು ಹೇಳಿದ. ಅದರಿಂದ ಆ ಸರಕಾರಿ ಕಾಡಿಗೆ ಅಪಾಯವಿದೆ ಎಂದು ಹೇಳಿದ. ಅಷ್ಟೇ ಅಲ್ಲದೆ, ಅಲ್ಲಿ ತಾನೇ ತಾನಾಗಿ ಕಾಡು ಬೆಳೆಯುತ್ತಿದ್ದುದನ್ನು ಕಂಡು, ಅಚ್ಚರಿ ವ್ಯಕ್ತಗೊಳಿಸಿದ. ಆ ಸಮಯದಲ್ಲಿ ಕುರುಬನು, ೧೨ ಕಿಲೋಮೀಟರು ದೂರದಲ್ಲಿ ಕೆಲವು ಮತ್ತಿ ಮತ್ತು ಬೀಟೆ ಮರಗಳನ್ನು ನೆಡುವ ಯೋಚನೆಯಲ್ಲಿದ್ದನು. ಪ್ರತಿದಿನವೂ ಅಷ್ಟು ದೂರ ಹೋಗಿಬರುವುದನ್ನು ತಪ್ಪಿಸಲು ತನ್ನ ಮನೆಯನ್ನು ಅಲ್ಲಿಗೆ ಸ್ಥಳಾಂತರಿಸಲು ಯೋಚಿಸಿದ. ಮರುವರ್ಷ ಹೊಸ ಮನೆ ಮಾಡಿಕೊಂಡು ಅಲ್ಲಿಗೆ ಹೋದ.

೧೯೩೫ ರಲ್ಲಿ, ಆ 'ಸಹಜ ವನ'ವನ್ನು ವೀಕ್ಷಿಸಲು ಸರಕಾರದಿಂದ ನೇಮಕಗೊಂಡ ಅರಣ್ಯಾಧಿಕಾರಿಗಳ ಒಂದು ದೊಡ್ಡ ದಳವೇ ಬಂದಿತು. ಅವರೆಲ್ಲ ಸಾಕಷ್ಟು ನಿರರ್ಥಕವಾದ ಮಾತುಗಳನ್ನಾಡಿದರು. ಇದರಿಂದ ಹೆಚ್ಚಿನದೇನೂ ಆಗದಿದ್ದರೂ ಆ ಇಡೀ ಕಾಡನ್ನು 'ಅಭಯಾರಣ್ಯ'ವೆಂದು ಘೋಷಿಸಲಾಯಿತು. ಇದರಿಂದಾದ ದೊಡ್ಡ ಲಾಭವೆಂದರೆ, ಮರಗಳನ್ನು ಸುಟ್ಟು ಇದ್ದಿಲು ಮಾಡುವ ಉದ್ಯೋಗದ ನಿಷೇಧ. ಯಾರೇ ಆಗಲಿ ಈ ಕಾಡಿನ ಸೌಂದರ್ಯದಿಂದ ಪ್ರಭಾವಿತರಾಗದೆ ಇರುವುದು ಅಸಂಭವವಾಗಿತ್ತು. ಬಹುಶಃ ಇದೇ ಕಾರಣದಿಂದ ಆ ಸರಕಾರಿ ಅಧಿಕಾರಿಯ ಮನಸ್ಸು ಕೂಡ ಕರಗಿತೆಂದು ತೋರುತ್ತದೆ. ಅಲ್ಲಿಗೆ ಬಂದ ಅರಣ್ಯಾಧಿಕಾರಿಗಳ ಪೈಕಿ ಒಬ್ಬ ನನ್ನ ಮಿತ್ರನಾಗಿದ್ದ. ನಾನು ಆತನಿಗೆ ಈ ಸಹಜ ವನದ ರಹಸ್ಯವನ್ನು ತಿಳಿಸಿದಾಗ ಆತನು ಆಶ್ಚರ್ಯಚಕಿತನಾದನು. ಮರುದಿನ ನಾವಿಬ್ಬರು ಆ ಕುರುಬನಿದ್ದ ಸ್ಥಳಕ್ಕೆ ಹೋದೆವು. ಅದು, ಅಧಿಕಾರಿಗಳು ಪರೀಕ್ಷಿಸಲು ಬಂದ ಸ್ಥಳದಿಂದ ಸುಮಾರು ಹತ್ತು ಕಿಲೋಮೀಟರು ದೂರದಲ್ಲಿತ್ತು. ಯಥಾಪ್ರಕಾರ ಅವನು ತನ್ನ ಕೆಲಸದಲ್ಲಿ ನಿರತನಾಗಿದ್ದನು. ಆ ಅಧಿಕಾರಿ ನನ್ನ ಮಿತ್ರನಾಗಲು ಒಂದು ಕಾರಣವಿತ್ತು. ಆತನಿಗೂ ಸಹ ಮೌಲ್ಯಗಳ ಬಗ್ಗೆ ಆದರವಿತ್ತು. ನಾನು ತಂದ ಬುತ್ತಿಯನ್ನು ನಾವು ಮೂವರೂ ಊಟ ಮಾಡಿದೆವು. ಅದಾದ ಮೇಲೆ, ಆ ಕಾಡಿನ ಸೌಂದರ್ಯವನ್ನು ಕಣ್ಣಿನಲ್ಲಿ ತುಂಬಿಕೊಳ್ಳುತ್ತ ಬಹಳ ಸಮಯ ಕಳೆದೆವು. ನಾವು ಬಂದ ದಿಕ್ಕಿನಲ್ಲಿ, ಬೆಟ್ಟದ ಇಳಿಜಾರಿನಲ್ಲಿ, ಈಗ ಮರಗಳು ಸುಮಾರು ಇಪ್ಪತ್ತು ಇಪ್ಪತ್ತೈದು



ಅಡಿಗಳಷ್ಟು ಎತ್ತರ ಬೆಳೆದಿದ್ದವು. ೧೯೧೩ರಲ್ಲಿ ಈ ಸ್ಥಳ ಸಂಪೂರ್ಣವಾಗಿ ಬಂಜರಾಗಿದ್ದುದು ನನಗೆ ಸ್ಪಷ್ಟವಾಗಿ ನೆನಪಿದೆ.

ಮಾನಸಿಕ ನೆಮ್ಮದಿ, ಸತತ ದೈಹಿಕ ಶ್ರಮ, ನಿರ್ಮಲವಾದ ಗಾಳಿ ಮತ್ತು ಸಾತ್ವಿಕ ಜೀವನವು ಈತನಿಗೆ ಅತ್ಯುತ್ತಮವಾದ ಆರೋಗ್ಯವನ್ನು ಕರುಣಿಸಿದ್ದವು. ಬಹುಶಃ ಅವನು ಈ ಭೂಮಿಯ ಮೇಲೆ ದೇವರ ವಿಶೇಷ ದೂತನಾಗಿ ಬಂದಿರಬಹುದು. ಇನ್ನೂ ಎಷ್ಟು ಎಕರೆ ಭೂಮಿಯನ್ನು ಅವನು, ತನ್ನ ಕೈಗಳಿಂದ ನೆಟ್ಟ ಮರಗಳಿಂದ ತುಂಬುವನೋ ಎಂಬ ಸಂತಸದ ಕುತೂಹಲ ನನ್ನಲ್ಲಿ ಮೂಡಿತು.

ಹಿಂತಿರುಗುವ ಮೊದಲು ನನ್ನ ಗೆಳೆಯ ಅಲ್ಲಿಯ ಮಣ್ಣನ್ನು ಪರೀಕ್ಷಿಸಿ, ಕೆಲವು ವಿಶೇಷ ಮರಗಳನ್ನು ನೆಡುವ ಸಲಹೆ ನೀಡಿದ, ಆದರೆ ಒತ್ತಾಯಿಸಲಿಲ್ಲ. ''ನಾನು ಒತ್ತಾಯ ಮಾಡದಿರಲು ಕಾರಣವಿದೆ. ಆ ಕುರುಬನಿಗೆ ಮರಗಳ ಬಗ್ಗೆ ನನಗಿಂತ ಹೆಚ್ಚು ತಿಳಿದಿದೆ'' ಎಂದು ನನಗೆ ಹೇಳಿದ. ಸುಮಾರು ಒಂದು ಗಂಟೆ ನಡೆದ ಬಳಿಕ ಮತ್ತೆ ಅವನು ನನಗೆ, ''ಅವನು ಬಹುಶಃ ಮರಗಳ ಬಗ್ಗೆ ಜಗತ್ತಿನಲ್ಲಿಯ ಎಲ್ಲರಿಗಿಂತಲೂ ಹೆಚ್ಚು ತಿಳಿದಿದ್ದಾನೆ. ಎಲ್ಲಕ್ಕಿಂತ ದೊಡ್ಡ ವಿಷಯವೆಂದರೆ, ಆತನು ಸಂತಸವಾಗಿರಲು ಒಂದು ಅದ್ಭುತವಾದ ದಾರಿಯನ್ನು ಕಂಡುಕೊಂಡಿದ್ದಾನೆ'' ಎಂದು ಹೇಳಿದ.

ಅರಣ್ಯಾಧಿಕಾರಿಯಾದ ನನ್ನ ಮಿತ್ರನ ಕಾರಣದಿಂದಲೇ ಆ ಕಾಡು ಸುರಕ್ಷಿತವಾಗಿತ್ತು, ಅಲ್ಲದೆ, ಆ ಕುರುಬನೂ ನೆಮ್ಮದಿಯಿಂದಿದ್ದನು. ನನ್ನ ಮಿತ್ರನು ಕಾಡಿನ ರಕ್ಷಣೆಗಾಗಿ ಮೂವರು ವನರಕ್ಷಕರನ್ನು ನಿಯಮಿಸಿದ್ದನು. ಇದ್ದಿಲು ಮಾಡುವವರು ಕೊಡುವ ಮದ್ಯ ಮತ್ತು ಇತರ ರೀತಿಯ ಲಂಚಗಳನ್ನು ತೆಗೆದುಕೊಳ್ಳದಂತೆ ಅವರನ್ನು ಅಂಕೆಯಲ್ಲಿಟ್ಟುಕೊಂಡಿದ್ದನು. ಆದರೆ ೧೯೩೦ರಲ್ಲಿ ಈ ಕೆಲಸಕ್ಕೆ ಧಕ್ಕೆಯೊದಗಿತು. ರೈಲುದಾರಿ ನಿರ್ಮಿಸಲು ಮರದ ದಿಮ್ಮಿಗಳ ಹೆಚ್ಚಿನ ಅವಶ್ಯಕತೆ ಉಂಟಾಯಿತು. ಆದ್ದರಿಂದ ಮನಬಂದಂತೆ ಮರಗಳನ್ನು ಕಡಿಯತೊಡಗಿದರು. ಆದರೆ ಈ ಸ್ಥಳ ರೈಲು ನಿಲ್ದಾಣ ಅಥವಾ ಒಳ್ಳೆಯ ರಸ್ತೆಯಿಂದ ಬಹಳ ದೂರವಿತ್ತು. ಕಡಿದ ಮರಗಳನ್ನು ಇಲ್ಲಿಂದ ಸಾಗಿಸುವುದು ದುಬಾರಿಯಾದ್ದರಿಂದ ಬಹು ಬೇಗ ಅದು ನಿಂತುಹೋಯಿತು. ಕುರುಬನಿಗೆ ಇದರ ಅರಿವು ಲವಲೇಶವೂ ಇರಲಿಲ್ಲ. ಅವನು ೩೦ ಕಿಲೋಮೀಟರು ದೂರದಲ್ಲಿ ನಿರಾತಂಕವಾಗಿ ಮರ ನೆಡುವುದರಲ್ಲಿ ನಿರತನಾಗಿದ್ದ. ೧೯೧೪ರ ಯುದ್ಧವನ್ನು ನಿರ್ಲಕ್ಷಿಸಿದಂತೆ ಈಗಲೂ ಇದ್ದ.

೧೯೪೫ರಲ್ಲಿ ನನಗೆ, ಮುದುಕನಾದ ಆ ಕುರುಬನನ್ನು ಕೊನೆಯ ಸಲ ನೋಡುವ ಅವಕಾಶ ದೊರೆಯಿತು. ಆಗ ಆತನಿಗೆ ೮೭ ವರ್ಷ ವಯಸ್ಸು. ಈ ನಡುವೆ ಅಲ್ಲಿ ಬಹಳ ಬದಲಾವಣೆಯಾಗಿತ್ತು. ನಿರ್ಜನವಾಗಿದ್ದ ಆ ಪ್ರದೇಶದಲ್ಲಿ ಬಸ್ಸಿನ ಸಂಚಾರವನ್ನು ಕಂಡು ನನಗೆ ಎಲ್ಲಿಲ್ಲದ ಆಶ್ಚರ್ಯವಾಯಿತು. ಹಿಂದೆ ಪರಿಚಿತವಾಗಿದ್ದ ಸ್ಥಳಗಳನ್ನು ಈಗ ಗುರುತಿಸಲಾಗಲಿಲ್ಲ. ಬಸ್ಸು ನನ್ನನ್ನು ಅನೇಕ ಹೊಸ ಸ್ಥಳಗಳ ಮೂಲಕ ಕೊಂಡೊಯ್ಯಿತು. ಒಂದು ಹಲಗೆಯ ಮೇಲೆ ಬರೆದ ಊರ ಹೆಸರನ್ನು ಓದಿಯೇ ಅದು ನಾನು ಹಿಂದೆ ನೋಡಿದ ಹಾಳುಬಿದ್ದ ಊರೆಂದು ತಿಳಿಯಿತು. ನಾನು ಬಸ್ಸಿನಿಂದ ಇಳಿದು ಊರ ಕಡೆಗೆ ನಡೆಯತೊಡಗಿದೆ. ೧೯೧೩ರಲ್ಲಿ ಇದ್ದ ಹತ್ತು ಹನ್ನೆರಡು ಮುರಿದು ಹಾಳಾದ ಮನೆಗಳಲ್ಲಿ ಆಗ ಕೇವಲ ಮೂವರು ವಾಸ ಮಾಡುತ್ತಿದ್ದರೆಂದು ನನಗೆ ಸ್ಪಷ್ಟವಾಗಿ ನೆನಪಿದೆ. ಬಿಸಿಲಿನ ಬೇಗೆ ಮತ್ತು ಬಡತನದ ಕಾರಣದಿಂದ ಅವರು ಬಹು ದುಃಸ್ಥಿತಿಯಲ್ಲಿದ್ದರು. ಗುಹೆಗಳಲ್ಲಿ ವಾಸಮಾಡುವ ಕಾಡುಮನುಷ್ಯರಂತಿದ್ದರು. ಅವರ ಅಕ್ಕ ಪಕ್ಕದ ಮನೆಗಳಲ್ಲಿ ಮುಳ್ಳು ಪೊದೆಗಳು ಬೆಳೆದಿದ್ದವು. ಆ ನಿರಾಶೆಯ ಬದುಕಿನಿಂದ ಕೇವಲ ಮೃತ್ಯುವಿನ ಮೂಲಕ ಮಾತ್ರ ಅವರು ಬಿಡುಗಡೆ ಪಡೆಯಲು ಸಾಧ್ಯವಿತ್ತು.

ಆದರೆ ಈಗ ಎಲ್ಲ ಬದಲಾದಂತೆ ಕಂಡಿತು. ಗಾಳಿಯಲ್ಲಿ ಒಳ್ಳೆಯ ಪರಿಮಳವಿತ್ತು. ಅಂದಿನ ಒಣ ಮತ್ತು ಬಿಸಿ ಗಾಳಿಯ ಬದಲು ಇಂದು ಗಾಳಿಯಲ್ಲಿ ಆರ್ದ್ರತೆ ಇತ್ತು. ಒಂದು ಕಡೆ ನನಗೆ ನೀರು ಬೀಳುವ ಸದ್ದು ಕೂಡ ಕೇಳಿಸಿತು. ಅಲ್ಲಿಯ ಒಂದು ಕೊಳದಲ್ಲಿ ಕಾರಂಜಿಯನ್ನು ನೋಡಿದಾಗ ನನ್ನ ಅಚ್ಚರಿ ಮೇರೆಮೀರಿತು. ಬಳಿಯಲ್ಲಿಯೇ ಯಾರೋ ಕೆಂಡಸಂಪಿಗೆಯ ಮರ ಕೂಡ ಬೆಳೆಸಿದ್ದರು. ನಾಲ್ಕು ವರ್ಷದ ಆ ಮರ ಚೆನ್ನಾಗಿ ಬೆಳೆದು ನಳನಳಿಸುತ್ತಿತ್ತು. ಆ ಬಂಜರು ಭೂಮಿಯಲ್ಲಿ ಮತ್ತೆ ಜೀವ ಚಿಮ್ಮುತ್ತಿರುವುದರ ಪ್ರತೀಕವಾಗಿತ್ತು ಆ ಮರ. ಆ ಊರನ್ನು ನೋಡಿ, ಅಲ್ಲಿಯ ಜನರಿಗೆ, ಉಜ್ವಲವಾದ ಭವಿಷ್ಯದಲ್ಲಿ ಭರವಸೆ ಹುಟ್ಟಿದೆ ಎನಿಸಿತು. ಅವರ ಬದುಕಿನಲ್ಲಿ ಹೊಸ ಆಶಾಕಿರಣ ಉದಯಿಸಿದೆ ಎನಿಸಿತು. ಮುರಿದ ಗೋಡೆಗಳನ್ನು ಸರಿಪಡಿಸಿ ಮನೆಗಳನ್ನು ದೃಢಪಡಿಸಿದ್ದರು. ಈಗ ಊರಲ್ಲಿ ನಾಲ್ವರು ದಂಪತಿಗಳೂ ಸೇರಿದಂತೆ ೨೮ ಜನರು ವಾಸಿಸುತ್ತಿದ್ದರು. ಮನೆಗಳನ್ನು ಸುಣ್ಣಬಣ್ಣಗಳಿಂದ ಅಂದಗೊಳಿಸಿ, ಮನೆಯ ಮುಂದೆ ಹೂ ಹಣ್ಣುಗಳನ್ನು ಬೆಳೆಸಿದ್ದರು. ಒಂದುಕಡೆ ಮಲ್ಲಿಗೆ, ಪಾರಿಜಾತಗಳಿದ್ದರೆ ಇನ್ನೊಂದು ಕಡೆ ಸೀತಾಫಲ ಮತ್ತು ಪೇರಲ ಮರಗಳಿದ್ದವು. ಅದು ಈಗ ಪ್ರತಿಯೊಬ್ಬರೂ ಬಂದು ವಾಸಮಾಡಲು ಬಯಸಬಹುದಾದಂತಹ ಊರಾಗಿತ್ತು.

ಮಹಾಯುದ್ಧ ಅದೇ ತಾನೆ ಮುಗಿದಿತ್ತು. ಆದ್ದರಿಂದ ಜನರ ಜೀವನ ಇನ್ನೂ ಸಾಮಾನ್ಯ ಸ್ಥಿತಿಗೆ ಬಂದಿರಲಿಲ್ಲ. ಬೆಟ್ಟದ ಬುಡದಲ್ಲಿ ನಾನು ರಾಗಿ ಮತ್ತು ಜೋಳದ ಹೊಲಗಳನ್ನು ಕಂಡೆ. ಇಕ್ಕಟ್ಟಾದ ಕಣಿವೆಯಲ್ಲಿ, ನೀರಿನ ಪಸೆ ಇದ್ದುದರಿಂದ ಹಸಿರು ಪಸರಿಸಿತ್ತು.

ಕೇವಲ ಎಂಟು ವರ್ಷಗಳಲ್ಲಿ ಈ ಪ್ರದೇಶ ಹಸುರಿನಿಂದ ತುಂಬಿಕೊಂಡು ಸಮೃದ್ಧಗೊಂಡಿತ್ತು. ೧೯೧೩ರಲ್ಲಿ ನಾನು ಕಂಡಿದ್ದ ಹಾಳುಬಿದ್ದ ಊರಿನಲ್ಲಿ ಈಗ ಹಸಿರು ತುಂಬಿದ ಹೊಲಗಳು ಕಂಗೊಳಿಸುತ್ತಿದ್ದವು. ಗುಡ್ಡಗಾಡುಗಳ ಬತ್ತಿದ್ದ ಹಳ್ಳಗಳಲ್ಲಿ ನಿರ್ಮಲವಾದ ನೀರು ಹರಿಯತೊಡಗಿತ್ತು. ಈ ನೀರನ್ನು ಕಾಲುವೆಗಳ ಮೂಲಕ ಬೇರೆ ಬೇರೆ ಹೊಲಗಳಿಗೆ ಹೋಗುವಂತೆ ಮಾಡಲಾಗಿತ್ತು. ಹೊಲಗಳ ಬದಿಯಲ್ಲಿ, ಒಳ್ಳೆಯ ನೆರಳು ಕೊಡುವ ಮರಗಳ ತೋಪುಗಳಿದ್ದವು. ನಿಧಾನವಾಗಿ ಊರಿನ ಜನಸಂಖ್ಯೆ ಬೆಳೆಯತೊಡಗಿತ್ತು. ಬಯಲು ಪ್ರದೇಶದಲ್ಲಿ ಭೂಮಿಯ ಬೆಲೆ ಹೆಚ್ಚಾಗಿದ್ದರಿಂದ ಜನ ಅಲ್ಲಿಂದ ಹೊರಟು ಇಲ್ಲಿಗೆ ಬಂದು ನೆಲೆಸಿದರು. ಅವರು ತಮ್ಮೊಂದಿಗೆ ಉತ್ಸಾಹ ಮತ್ತು ಆಸೆಗಳನ್ನು ತಂದರು. ಈಗ ಆ ಊರಿನ ರಸ್ತೆಯಲ್ಲಿ ಓಡಾಡುವ ಜನರ ಮುಖದಲ್ಲಿ ನಗೆ ಮತ್ತು ಕಣ್ಣಲ್ಲಿ ಹೊಳಪು ಕಾಣುತ್ತಿತ್ತು. ಅಲ್ಲಿಯ ಜನಸಂಖ್ಯೆ ಈಗ ೧೦,೦೦೦ ಆಗಿತ್ತು. ಆ ಎಲ್ಲರ ಸುಖ ಸಂತೋಷಕ್ಕೆ ಆ ಒಬ್ಬ ಅಶಿಕ್ಷಿತ ಕುರುಬನು ಕಾರಣನಾಗಿದ್ದನು.

ಈ ಸುಖ ಸಂತೋಷವೆಲ್ಲ, ಒಬ್ಬನೇ ಒಬ್ಬ ವ್ಯಕ್ತಿಯ ಕೈಗಳಿಂದ ಸಾಧ್ಯವಾಯಿತೆಂದು ಅರಿವಾದಾಗ ಮನಸ್ಸು ಮೂಕವಾಗಿ ಆತನಿಗೆ ತಲೆ ಬಾಗುತ್ತದೆ. ಒಬ್ಬ ಸಾಮಾನ್ಯ ವ್ಯಕ್ತಿಯು, ಒಬ್ಬೊಂಟಿಗನಾಗಿ, ಬಂಜರು ಭೂಮಿಯನ್ನು ಸಮೃದ್ಧಗೊಳಿಸಿದ್ದನು. ಇದನ್ನು ಯೋಚಿಸಿದಾಗ, ಏನೇ ಆದರೂ, ಮಾನವೀಯತೆಯಲ್ಲಿ ನನ್ನ ವಿಶ್ವಾಸ ಮತ್ತೆ ನೆಲೆಗೊಳ್ಳುತ್ತದೆ. ಮನಸ್ಸು ಮಾಡಿದರೆ, ಮಾನವನು, ಭೂಮಿಯ ಮೇಲಿದ್ದುಕೊಂಡೂ ದೇವರಿಗೆ ಸಮಾನವಾದ ಕೆಲಸ ಮಾಡಲು ಸಾಧ್ಯವೆಂಬುದು ಆ ವ್ಯಕ್ತಿಯನ್ನು ಕಂಡಾಗ ಅರಿವಾಗುತ್ತದೆ. ೧೯೪೭ರಲ್ಲಿ ಒಂದು ಮರದ ನೆರಳಲ್ಲಿ ಆ ಕುರುಬನು ಚಿರನಿದ್ರೆಯಲ್ಲಿ ಮುಳುಗಿದನು.



ಅನುವಾದ : ಲೀಲಾ ಗರಡಿ

# ಇಲ್ಲದಿರುವದು ಶೂನ್ಯತೆಯೂ ಹೌದು, ಅನಂತವೂ ಹೌದು

**ಪ್ರೊ॥ ಆರ್. ಪಿ. ಪುನಗಿನ**

ಆಗ ೬೦ರ ದಶಕ. ಹುಬ್ಬಳ್ಳಿಯ ಭೂಮರಡ್ಡಿ ಇಂಜಿನಿಯರಿಂಗ ಕಾಲೇಜಿನಲ್ಲಿ, ಮೊದಲನೆಯ ವರ್ಷದಲ್ಲಿ, ನಾನು ಓದುತ್ತಿದ್ದೆ. ಆಗ ನಾನು ನನ್ನ ಸಹಪಾಠಿಗಳಿಗಿಂತ ತುಸು ಭಿನ್ನವಾಗಿ ಗುರುತಿಸಿಕೊಂಡಿದ್ದೆ. ಅದಕ್ಕೆ ನನ್ನ ಬಿಳಿ ಪಾಯಿಜಾಮು, ಅಂಗಿ, ತಲೆಯ ಮೇಲೊಂದು ಗಾಂಧಿ ಟೊಪ್ಪಿಗೆ ಹಾಗೂ ಚಪ್ಪಲಿಗಳೂ ಇಲ್ಲದ ಬರಿಗಾಲುಗಳು ಕಾರಣವಿರಬಹುದು. ಪಾಠದಲ್ಲಿಯೂ ನಾನು ಎಲ್ಲರಿಗಿಂತ ಸ್ವಲ್ಪ ಮುಂದಿರುವದೂ ಅದಕ್ಕೆ ಪೂರಕವಾಗಿತ್ತು.

ಆಗ ತಾನೇ ಮುಂಗಾರು ಮಳೆ ಪ್ರಾರಂಭವಾಗಿತ್ತು. ಕ್ಲಾಸಿನ ಕಿಟಕಿಗಳೆಲ್ಲ ಮುಚ್ಚಿದ್ದವು. ಸಾಯಂಕಾಲದ ಬಾನಲ್ಲಿ, ಕಪ್ಪು ಛಾಯೆ ಮೂಡಿಸುವ ಮೋಡಗಳು, ಮಧ್ಯಾಹ್ನವೇ ಹಾಜರಿ ಹಾಕಿದ್ದವು. ಬೆಳಕು ಮಂದವಾಗಿದ್ದರೂ ಆಗಾಗ ಝಳಪಿಸುವ ಮಿಂಚು, ಕಿಡಿಕಿಯ ಗಾಜಿನಿಂದ, ಒಳಗೆ ತೂರಿ ಬೆಳಕು ಚೆಲ್ಲುತ್ತಿತ್ತು. ಆಗಾಗ ಸುರಿಯುವ ಗುಡುಗು ಮಿಶ್ರಿತ ಮಳೆಯ ಸೆಳಕುಗಳು ವಾತಾವರಣದಲ್ಲಿ ತಂಪನ್ನು ತಂದಿದ್ದವು. ಬೇಸಿಗೆಯ ಧಗೆ ಕಡಿಮೆಯಾಗಿತ್ತು. ಉಷ್ಣತೆ ಪ್ರವಹಿಸುವ ಕ್ರಿಯೆ ಹಾಗೂ ಅದರ ಏರಿಳಿತದ ಕಾರಣಗಳ ಬಗ್ಗೆಯೇ ಪಾಠ ನಡೆದಿತ್ತು. ಗಂಭೀರವಾಗಿ ಪಾಠ ಮಾಡುತ್ತಿದ್ದ ಫಿಜಿಕ್ಸ್ ಲೆಕ್ಚರರ್ ದೇಸಾಯಿಯವರ ಧ್ವನಿ, ಹೊರಗಿನ ಎಲ್ಲ ಸಪ್ಪಳ ದಾಟಿ, ನಮ್ಮ ಕಿವಿಗಳಿಗೆ ಅಪ್ಪಳಿಸುತ್ತಿತ್ತು. ನಮ್ಮ ಮನಸ್ಸು ಮಾತ್ರ, ಹೊರಗಿನ ಅಬ್ಬರದ ಮಧ್ಯೆಯೂ, ಪಾಠದಲ್ಲಿ ಕೇಂದ್ರೀಕೃತವಾಗಿತ್ತು. ಪ್ರಕೃತಿ ನಮ್ಮೊಂದಿಗೆ ಪೈಪೋಟಿಗಿಳಿದಂತಿತ್ತು.

ಒಮ್ಮೆಲೇ ಕೋಲ್ಮಿಂಚು ಝಳಪಿಸಿ, ಕ್ಷಣಾರ್ಧದಲ್ಲಿ ಅಬ್ಬರಿಸಿದ ಸಿಡಿಲಿನ ಸಪ್ಪಳ ಮೌನ ಆವರಿಸುವಂತೆ ಮಾಡಿತ್ತು. ವಿದ್ಯುತ್ ನಿಂತು ಬೆಳಕು ಮಾಯವಾಗಿತ್ತು. ಪಾಠ ನಿಲ್ಲಿಸಿದ ದೇಸಾಯಿಯವರು, ಅಲ್ಲಿಯೇ ಇದ್ದ ಟೇಬಲ್ಲಿಗೆ ಒರಗಿ, ತಮ್ಮೆರಡೂ ಅಂಗೈಗಳನ್ನು ಟೇಬಲ್ ಮೇಲೆ ಆಸರೆಯಾಗಿಟ್ಟು, ಬಲಗಾಲನ್ನು ಎಡಗಾಲ ಮೇಲೆ ವಕ್ರವಾಗಿರಿಸಿ, ತಿರುಗಿ ನಿಂತರು. ಅಷ್ಟೊತ್ತಿಗೆ ಪಾಠದ ಸಮಯ ಮುಗಿಯುವದರಲ್ಲಿತ್ತು. ''ಫಾಯಿನ್, ಈಗ ನಾನು ಒಂದು ಪ್ರಶ್ನೆಯನ್ನು ಕೇಳುತ್ತೇನೆ. ಅದಕ್ಕೆ ಉತ್ತರವನ್ನು, ನಾಳೆ, ನೀವು ನಮಗೆ ಹೇಳಬೇಕು'' ಎಂದಾಗ, ಅದೆಂತ ಪ್ರಶ್ನೆ ಇರಬೇಕು ಎಂಬ ಕುತೂಹಲ ಇನ್ನೂ ಹೆಚ್ಚಾಗಿತ್ತು. ''ಒಂದು ಚಮಚೆ ಹಾಗೂ ಅಷ್ಟೇ ಗಾತ್ರದ ಒಂದು ಕಟ್ಟಿಗೆಯ ತುಂಡನ್ನು ನಿಮ್ಮ ರೆಫ್ರಿಜಿರೇಟರ್‌ದಲ್ಲಿ ರಾತ್ರಿ ಇಟ್ಟರೆ, ಮುಂಜಾನೆಯ ಹೊತ್ತಿಗೆ ಯಾವದು ಹೆಚ್ಚು ತಂಪಾಗುತ್ತದೆ ? ಕಟ್ಟಿಗೆಯ ತುಂಡೋ ಅಥವಾ ಸ್ಟೀಲಿನ ಚಮಚೆಯೋ ?'' ಈ ಪ್ರಶ್ನೆಯ ಉತ್ತರಕ್ಕಾಗಿ ನಾಳೆಯವರೆಗೆ ಕಾಯುವ ತಾಳ್ಮೆ ನಮ್ಮೆಲ್ಲಾರಿಗೂ ಇರಲಿಲ್ಲ. ಆಗಲೇ ದೇಸಾಯಿಯವರು ಕ್ಲಾಸಿನ ಹೊರಗೆ ಸಾಗಿದ್ದರು, ಯೋಚಿಸುವದನ್ನು ಬಿಟ್ಟರೆ ನಮಗೆ ಬೇರೆ ದಾರಿಯೇ ಇರಲಿಲ್ಲ.

ನಮ್ಮ ಸಹಪಾಠಿಗಳಲ್ಲಿ ಪರಸ್ಪರ ವಾದವಿವಾದಗಳು ಪ್ರಾರಂಭವಾದವು. ಉತ್ತರಗಳು ವಿಭಿನ್ನವಾಗಿದ್ದವು. ಪ್ರಯೋಗ ಮಾಡಿಯೇ ನೋಡಬೇಕೆಂಬ ನಿರ್ಧಾರಕ್ಕೆ ಬಂದೆವು. ನಮ್ಮ ಮನೆಯಲ್ಲಂತೂ ಫ್ರಿಜ್ ಇರಲಿಲ್ಲ. ಕಾಲೇಜ ಮುಗಿದ ತಕ್ಷಣ, ನನ್ನ ಶ್ರೀಮಂತ ಗೆಳೆಯ, ಗಂಗಾಧರನ ಬೆನ್ನು ಹತ್ತಿ ಅವನ ಮನೆ ತಲುಪಿದ್ದೆ. ಒಂದು ಕಟ್ಟಿಗೆಯ ತುಂಡನ್ನು ಹಾಗೂ ಒಂದು ಸ್ಟೀಲಿನ ಚಮಚೆಯನ್ನು ಫ್ರಿಜ್‌ನಲ್ಲಿಟ್ಟು, ಅವರ ಮನೆಯಲ್ಲಿಯೇ ಊಟ ಮಾಡಿ ಮಲಗಿದೆ. ಪ್ರಶ್ನೆಗೆ ಉತ್ತರ ಹುಡುಕುತ್ತ ನಿದ್ರೆ ಎಲ್ಲೋ ದೂರ ಹೋಗಿತ್ತು. ಹೇಗಾದರೂ ಮುಂಜಾನೆ ಉತ್ತರ ದೊರೆಯಲಿದೆ ಎಂಬ ಸಮಾಧಾನ ಜಂಪರು ತಂದಿತ್ತು. ಬೇಗನೆ ಎದ್ದು ಫ್ರಿಜ್ ಬಾಗಿಲು ತೆರೆದು ಪರೀಕ್ಷೆ ಪ್ರಾರಂಭಿಸಿದೆ. ಕಟ್ಟಿಗೆಯ ತುಂಡು ಅಷ್ಟೇನು ತಂಪಾಗಿರಲಿಲ್ಲ. ಚಮಚೆ ಮಾತ್ರ ಹೆಚ್ಚು ತಂಪೆನಿಸಿತು. ಉತ್ತರ ಸಿಕ್ಕ ಭರಾಟೆಯಲ್ಲಿ ಬೇಗ ಕಾಲೇಜ ತಲುಪಿದೆ.

ಫಿಜಿಕ್ಸ್ ಕ್ಲಾಸ ಪ್ರಾರಂಭವಾಯಿತು. ನನ್ನ ಹಾಗೆಯೇ ಸುಮಾರು ಗೆಳೆಯರು ತಮ್ಮ ಉತ್ತರದೊಂದಿಗೆ ಸಿದ್ಧರಾಗಿ ಬಂದಿದ್ದರು. ಕಟ್ಟಿಗೆಯ ತುಂಡು ಹೆಚ್ಚು ತಂಪಾಗುವ ಛಾನ್ಸೇ ಇಲ್ಲ, ಧಾತುವಿನ ಚಮಚೆಯೇ ಹೆಚ್ಚು ತಂಪಾಗುವದು, ಎಂದು ಅನೇಕ ಗೆಳೆಯರು ವಾದಿಸಿದರು. ನಿಮ್ಮ ಉತ್ತರವೂ ಅದೇ ಇರಬಹುದು ಎಂಬುದು ನನ್ನ ಭಾವನೆ. ಏಕೆಂದರೆ, ಅದು ನಮ್ಮೆಲ್ಲರ ಸಾಮಾನ್ಯ ಅನುಭವ ಅಲ್ಲವೇ ? ಆದರೆ, ಅಡ್ಡ ಯೋಚಿಸುವ ಕೆಲವರು ಕಟ್ಟಿಗೆಯ ತುಂಡು ಹೆಚ್ಚು ತಂಪಾಗುತ್ತದೆ ಎಂದು ಹೇಳಿದರೂ ಅದಕ್ಕೆ ಅವರು ಕೊಟ್ಟ ಕಾರಣಗಳು ಮಾತ್ರ ದೇಸಾಯಿಯವರಿಗೆ ಒಪ್ಪಿಗೆಯಾಗಲಿಲ್ಲ. ಅದಕ್ಕೆ ದೇಸಾಯಿಯವರು ''ನೋಡಿ, ಪ್ರಶ್ನೆ ಸರಳವಾಗಿದೆ, ಚಮಚೆ ಹೆಚ್ಚು ತಂಪೆನಿಸುವ ನಿಮ್ಮ ಅನುಭವವೂ ನಿಜವಾಗಿದೆ'' ಅಂದಾಗ, ಆ ಉತ್ತರ ಕೊಟ್ಟ ಎಲ್ಲರ ಮುಖದಲ್ಲಿ ಮುಗುಳ್ನಗೆ ಮೂಡಿತ್ತು. ಆದರೆ, ಮುಗುಳ್ನಗೆ, ನಮ್ಮ ಮುಖದಲ್ಲಿ ಹೆಚ್ಚು ಹೊತ್ತು ಉಳಿಯಲಿಲ್ಲ. ಏಕೆಂದರೆ ದೇಸಾಯಿಯವರ ಉತ್ತರ ನಮ್ಮೆಲ್ಲರಿಗಿಂತ ಭಿನ್ನವಾಗಿತ್ತು. ವಿವರಣೆ ಅಚ್ಚರಿ ಮೂಡಿಸಿತ್ತು. ಈ ಪ್ರಸಂಗವು, ನಮ್ಮ ಕೆಲವರಲ್ಲಿ ವೈಚಾರಿಕತೆಯ ಅಲೆಗಳನ್ನೆಬ್ಬಿಸಿತ್ತು. ಅಂದು ಅವರು ಕೊಟ್ಟ ವಿವರಣೆ ಹೀಗಿತ್ತು :

''ರೆಫ್ರಿಜಿರೇಟರ್‌ನಲ್ಲಿಟ್ಟ ಕಟ್ಟಿಗೆಯ ತುಂಡಾಗಲಿ, ಸ್ಟೀಲಿನ ಚಮಚೆಯಾಗಲಿ ಅಥವಾ ಬೇರೆ ಯಾವುದೇ ವಸ್ತುವಾಗಲಿ, ಫ್ರಿಜ್‌ನಲ್ಲಿ ಸಾಕಷ್ಟು ಸಮಯದವರೆಗೆ ಇಟ್ಟಾಗ, ಅವೆಲ್ಲವುಗಳ ತಾಪಮಾನ ಒಂದೇ ಆಗಿರುತ್ತದೆ. ಅಲ್ಲಿ ಸಮಶೀತೋಷ್ಣ ವಲಯ ನಿರ್ಮಾಣವಾಗಿರುತ್ತದೆ. ಆದರೆ, ಕೆಲ ವಸ್ತುಗಳಲ್ಲಿ, ಉಷ್ಣತೆ ಪ್ರವಹಿಸುವ ವೇಗ ಹೆಚ್ಚು ಕಡಿಮೆ ಇರುವದರಿಂದ, ನಾವು ಆ ವಸ್ತುಗಳನ್ನು ಮುಟ್ಟಿದಾಗ, ನಮಗೆ ಕೆಲ ವಸ್ತುಗಳು ಹೆಚ್ಚು ತಂಪೆಂದು ಭಾಸವಾಗುತ್ತವೆ'' ಎಂದಾಗ 'ಹೌದಲ್ಲವೇ ?' ಎಂದು ನಾವೆಲ್ಲರೂ ತಲೆ ಅಲ್ಲಾಡಿಸಿದ್ದೆವು. ಅಂದು ಈ ಪ್ರಸಂಗವನ್ನು ದೇಸಾಯಿಯವರು ಈ ಮೂರು ಭೌತಿಕ ಸೂತ್ರಗಳನ್ನು ಕಲಿಸಲು ಬಳಸಿಕೊಂಡಿದ್ದರು :

**ಸೂತ್ರ-೧ :** ಸಾಮಾನ್ಯವಾಗಿ 'ತಂಪು' ಎನ್ನುವದು ಇಲ್ಲವೇ ಇಲ್ಲ. ಇರುವದು ಹೆಚ್ಚು ಉಷ್ಣ ಅಥವಾ ಕಡಿಮೆ ಉಷ್ಣವಿರುವಂಥವು. ತಂಪು ಎನ್ನುವದು ಮಾನವರ ಸ್ಪರ್ಶಾನುಭವ. ಧಾತುವಿನ ಚಮಚೆ ನಮ್ಮ ಕೈಯಿಂದ ಹೆಚ್ಚು ಬೇಗನೆ ಉಷ್ಣತೆ ಹೀರುವ ಗುಣ ಹೊಂದಿರುತ್ತದೆ. ಕಾರಣ ಅದು ನಮಗೆ ಹೆಚ್ಚು ತಂಪೆಂದು ಅನಿಸುತ್ತದೆ.

**ಸೂತ್ರ-೨ :** ಹೆಚ್ಚು ಉಷ್ಣತೆ ಇರುವ ವಸ್ತುವಿನಿಂದ ಕಡಿಮೆ ಉಷ್ಣತೆ ಇರುವ ವಸ್ತುವಿನ ಕಡೆಗೆ ಉಷ್ಣತೆ ಪ್ರವಹಿಸುತ್ತದೆ. ಮತ್ತು ಸಮತಾಪಮಾನ ಸ್ಥಿತಿ ಮುಟ್ಟುವವರೆಗೆ ಈ ಕ್ರಿಯೆ ಮುಂದುವರಿಯುತ್ತದೆ.

**ಸೂತ್ರ-೩ :** ಉಷ್ಣತೆ ಒಂದು ಶಕ್ತಿ. ಶಕ್ತಿ ಚಂಚಲ, ಅದು ಚಲಿಸುತ್ತದೆ. ಅಂತೆಯೇ ವಸ್ತುಗಳಲ್ಲಿಯ ಅಣುಕಣಗಳ ಚಲನೆಯು ಉಷ್ಣತೆಯ ಪ್ರವಾಹವಾಗಿ ಗೋಚರಿಸುತ್ತದೆ.

ಅಂದಿನ ಫಿಜಿಕ್ಸ್ ಲೆಕ್ಚರರ್ ಅವರ ಈ ಪಾಠ, ಹೊರಗಿನ ಧೋ ಧೋ ಮಳೆಗಿಂತ ಹೆಚ್ಚು ಪ್ರಶ್ನೆಗಳ ಸುರಿಮಳೆಯನ್ನು ನನ್ನ ಮನದಂಗಳದಲ್ಲಿ ಸುರಿಸಿತ್ತು. ವೈಚಾರಿಕ ಅಲೆಗಳನ್ನೆಬ್ಬಿಸಿತ್ತು. ಉಷ್ಣತೆ ವಸ್ತುಗಳ ಅಣುಕಣಗಳಲ್ಲಿ ಚಲನೆಯುಂಟುಮಾಡುತ್ತದೆ. ಅದು ವಸ್ತುಗಳನ್ನು ಸುಟ್ಟು ಬೂದಿ ಮಾಡುತ್ತದೆ, ಕರಗಿಸುತ್ತದೆ ಹಾಗೂ ಕತ ಕತನೆ ಕುದಿಯುವಂತೆ ಮಾಡುತ್ತದೆ. ಆವಿಯನ್ನಾಗಿ ಪರಿವರ್ತಿಸುತ್ತದೆ. ಈ ಎಲ್ಲ ಕ್ರಿಯೆಗಳಿಗೆ ಕಾರಣಗಳೇನು ? ಉಷ್ಣತೆ,

ಇಲ್ಲದುದರ ಕಲ್ಪನೆಯೇ ಒಂದು ಕೌತುಕ. ಇಂಥ ಇಲ್ಲದುದರ ಕಲ್ಪನೆಯನ್ನೇ ಅರಿಯದ ಒಂದು ಲೋಕವಿತ್ತು ಎಂದರೆ ಅಚ್ಚರಿಯಾಗುವದಲ್ಲವೇ ? ಹೌದು, ಬ್ಯಾಬಿಲೋನಿಯನ್ನರ ಹಾಗೂ ನಂತರದ ಗ್ರೀಕರ 200 ಕ್ರಿ.ಶ. ಕಾಲದಲ್ಲಿನ ಕೆಲ ಶತಮಾನಗಳವರೆಗೂ, ಈ ಇಲ್ಲದಿರುವಿಕೆಯ ಕಲ್ಪನೆಯೇ ಹೊಳೆದಿರಲಿಲ್ಲವೆಂದು ಕಾಣುತ್ತದೆ. ಇಲ್ಲದಿರುವದನ್ನು ಊಹಿಸುವದೇ ಆಗ ದಿಗಿಲಾಗಿತ್ತು. ಇಲ್ಲದಿರುವದನ್ನು ಪ್ರಕಟಿಸಲು ಕಷ್ಟವಾಗಿತ್ತು. ಇಲ್ಲದಿರುವದನ್ನು ಊಹಿಸಲು ತರ್ಕ ಬುದ್ಧಿ, ಹಾಗೂ ಕಲ್ಪನಾ ಲೋಕದಲ್ಲಿ ವಿಹರಿಸಬಲ್ಲ ಜಾಣ್ಮೆ ಬೇಕು, ತತ್ವಜ್ಞಾನದ ಅರಿವು ಇರಬೇಕು.

ವಸ್ತುಗಳಲ್ಲಿ ಕಣಗಳ ಅಲ್ಲೋಲಕಲ್ಲೋಲವಾದಂತಹ ಚಲನೆಯನ್ನುಂಟು ಮಾಡುವದಾದರೂ ಹೇಗೆ? ಇಂಥ ಹಲವಾರು ಪ್ರಶ್ನೆಗಳು, ಅನೇಕ ವರ್ಷಗಳವರೆಗೆ ನನ್ನನ್ನು ಕಾಡಿದ್ದವು. ಇಂಥ ಒಂದು ಪಾಠ, ಕೆಲವರ ವಿಚಾರಧಾರೆಯನ್ನೇ ಬದಲಿಸುವಷ್ಟು, ಶಕ್ತಿ ಹೊಂದಿರುತ್ತದೆ ಎಂದು ನನಗನಿಸಿದ್ದು ಇತ್ತೀಚೆಗೆ. ನನ್ನನ್ನೇ ನಾನು ಪ್ರಶ್ನಿಸಿ, ಸಾಮಾನ್ಯ ವೈಜ್ಞಾನಿಕ ಕ್ರಿಯೆಗಳಿಗೆ, ಸಮಾಧಾನ ಪಡೆಯಲು ಆಗಾಗ ಪ್ರಯತ್ನಿಸುತ್ತೇನೆ. ಪ್ರಾಥಮಿಕ ಹಂತದಲ್ಲಿ ಕೇಳಿದ ಇಂಥ ಪಾಠಗಳು, ಪ್ರಪಂಚವನ್ನು ಹಾಗೂ ನಮ್ಮ ಸುತ್ತಲಿನ ಪ್ರತಿ ಕ್ಷಣ ನಡೆಯುವ ಚಿಕ್ಕಚಿಕ್ಕ ಕ್ರಿಯೆಗಳನ್ನು ನೋಡುವ ನನ್ನ ದೃಷ್ಟಿಯನ್ನೇ ಬದಲಿಸಿದ್ದು ನಿಜ.

''ಇರುವದೆಲ್ಲವ ಬಿಟ್ಟು ಇರದುದರೆಡೆಗೆ ತುಡಿಯುವದೇ ಜೀವನ...'', ಇದು ಖ್ಯಾತ ಸಾಹಿತಿ ಗೋಪಾಲಕೃಷ್ಣ ಅಡಿಗರು ಜೀವನಕ್ಕೆ ಕೊಟ್ಟ ವ್ಯಾಖ್ಯಾನ ಎಂದು ನನ್ನ ಅನಿಸಿಕೆ. ಇದು ಬದುಕಿಗೆ ದಾರಿದೀಪ. ದೀಪ ಇರುವದರ ಮೇಲೆ ಬೆಳಕು ಚೆಲ್ಲುತ್ತದೆ. ಇಲ್ಲವೆಂದು ಭಾವಿಸಿರುವ ನಮಗೆ ಇದ್ದದ್ದು ಕಾಣುತ್ತದೆ. ಅಂದರೆ ಇಲ್ಲದ್ದು ಇದೆ, ಆದರೆ ಅದು ನಮಗೆ ಕಾಣುವದಿಲ್ಲ. ಇಲ್ಲದ್ದನ್ನು ಇದೆ ಎಂದು ತಿಳಿಯುವದೇ ಒಂದು ವಿಸ್ಮಯ. ಬೆಳಕು ಚೆಲ್ಲುವ ದೀಪ, ಭೌತಿಕ ಸಾಧನ. ಅದರ ಬೆಳಕು ಎಣ್ಣೆ ಇರುವವರೆಗೆ ಮಾತ್ರ. ಇದ್ದದ್ದನ್ನು ತಿಳಿಯುವದು ಭೌತಿಕ ಶಾಸ್ತ್ರ. ಇದರಲ್ಲಿ ಭೌತಿಕ ಉಪಕರಣಗಳನ್ನು ಬಳಸಿ, ಪ್ರಯೋಗಗಳ ಮೂಲಕ, ಇದ್ದದ್ದನ್ನು ವಿಶ್ಲೇಷಿಸಿ ಅರಿಯುತ್ತೇವೆ. ಇದ್ದದ್ದನ್ನು ಕಾಣುವದು ಒಂದು ಬಗೆಯಾದರೆ ಇಲ್ಲದ್ದನ್ನು ಅರಿಯುವದು ಇನ್ನೊಂದು ಬಗೆಯ ತುಡಿತ. ಇಲ್ಲದ್ದನ್ನು ಅರಿಯಲು ನಮಗೆ ಬೇಕಾದದ್ದು ಆಂತರಿಕ, ಅದೃಶ್ಯ ಜ್ಞಾನದ ದೀಪ, ತುಡಿಯುವ ಮನಸ್ಸು. ಇರದುದರೆಡೆಗೆ ತುಡಿಯುವದು ತಪ್ಪಲ್ಲ, ಆದರೆ, ಇದ್ದದ್ದನ್ನು ತಿಳಿಯದೇ, ಅದನ್ನು ಅನುಭವಿಸದೇ ಇಲ್ಲದ್ದನ್ನು ಬಯಸುವದು ಸರಿ ಎನಿಸದು. ಇಲ್ಲದ್ದನ್ನು ಊಹಿಸುವ ಮನಸ್ಸು ಹೊಸತನ ಕಾಣಬಲ್ಲದು, ವಿಭಿನ್ನ ರೀತಿಯಲ್ಲಿ ವಿಚಾರಿಸಬಲ್ಲದು, ಕಲ್ಪನಾಲೋಕದಲ್ಲಿ ವಿಹರಿಸಬಲ್ಲದು, ಮತ್ತು ಅಸಹಜ ಕನಸುಗಳನ್ನು ಕಾಣಬಲ್ಲದು. ಮನಸ್ಸಿನಲ್ಲಿರುವ ತವಕ ಮೇಲಿಂದಮೇಲೆ ಪ್ರಕಟವಾಗಿ ಕೃತಿಗಿಳಿದರೆ, ಇಲ್ಲದ್ದನ್ನು ಬಯಸಿ ಪಡೆಯಲು ಸಾಧ್ಯ. ಇಲ್ಲದ್ದನ್ನು ಬೇರೆಯವರಿಗೆ ಇದೆ ಎಂದು ತಿಳಿಸಲು ಸಾಧ್ಯ. ಅದು ಸೃಜನಶೀಲತೆಯ ಲಕ್ಷಣ. ಅದು ಆವಿಷ್ಕಾರಕ್ಕೆ ದಾರಿ. ಅಡಿಗರು ಜೀವನಕ್ಕೆ ಕೊಟ್ಟ ವ್ಯಾಖ್ಯಾನವನ್ನು ನಾನು ಅರ್ಥೈಸಿರುವದು ಈ ದೃಷ್ಟಿಯಲ್ಲಿ. ಇದ್ದದ್ದನ್ನು ಅನುಭವಿಸುತ್ತ ಇಲ್ಲದ್ದರ ಬಗೆಗೆ ಕನಸು ಕಾಣುವವರಲ್ಲಿ ನಾನೂ ಒಬ್ಬ. ನಾನಿಲ್ಲಿ ಹೇಳಹೊರಟಿರುವದೂ ಇಲ್ಲದಿರುವದರ ಬಗೆಗೆಯೇ.

ಉಷ್ಣತೆಯಿಂದ ವಸ್ತುಗಳಲ್ಲಿ ಆಗುವ ಅಣುಕಣಗಳ ಅಲ್ಲಕಲ್ಲೋಲ ಚಲನೆಗೂ, ಪ್ರಕೃತಿಯ ಉದಯ ಹಾಗೂ ವಿಕಾಸವಾದಕ್ಕೂ ಏನಾದರೂ ಸಂಬಂಧವಿರಬಹುದೇ? ಇದ್ದದ್ದನ್ನು ಅರಿತು ಇಲ್ಲದ್ದನ್ನು ತಿಳಿಯುವವರೆಗೂ ಈ ವಿಚಾರಧಾರೆಯ ಮಿತಿಯನ್ನು ವಿಸ್ತರಿಸಬಹುದೇ? ಸೌರವ್ಯೂಹದ ಸಮತೋಲನ ಕ್ರಿಯೆಯನ್ನರಿಯಲು ಈ ಚಿಕ್ಕ ಎಳೆ ಆಧಾರವಾಗಬಲ್ಲುದೇ? ಶೂನ್ಯತೆಯ ಕಲ್ಪನೆಗೆ ದಾರಿ ತೋರಬಹುದೇ? ಕೆಲವೊಂದು ಸಲ ಹೌದು, ಎಂದು ನನ್ನ ಮನಸ್ಸು ಹೇಳುತ್ತದೆ. ನಮ್ಮ ಪರಿಸರದಲ್ಲಿ ನಡೆಯುವ ಪ್ರತಿಯೊಂದು ಸಾಮಾನ್ಯ ಕ್ರಿಯೆಗಳಿಗೂ, ಅಂದು ನಾನು ಗಂಗಾಧರನ ಮನೆಯಲ್ಲಿ ಮಾಡಿದ, ಆ ಕಟ್ಟಿಗೆಯ ತುಂಡು ಮತ್ತು ಚಮಚೆಯ ಚಿಕ್ಕ ಪ್ರಯೋಗ ದಿಕ್ಸೂಚಿಯಾಗಬಹುದೇ, ಎಂದು ನನಗರಿವಿಲ್ಲದಂತೆ ಆಗಾಗ ನನ್ನನ್ನು ನಾನೇ ಪ್ರಶ್ನಿಸುತ್ತೇನೆ. ಅತ್ಯಾಧುನಿಕ ವಿದ್ಯುನ್ಮಾನ ರಾಕೆಟ್‌ಗಳಿಲ್ಲದೆ, ಮಿಲಿಯನ್ ಡಾಲರ್ ಉಪಕರಣಗಳಿಲ್ಲದೆ, ಯಾವುದೇ ಭೌತಿಕ ಪ್ರಯೋಗ ಮಾಡದೆ ಪ್ರಪಂಚವನ್ನು ಬಗೆದು ಅರಿಯಲು, ದೇಸಾಯಿಯವರು ಅಂದು ಮಾಡಿದ ಇಂಥ ಪಾಠಗಳು ಹಾಗೂ ಕೊಟ್ಟ ವಿವರಣೆಗಳು ಪುಷ್ಟಿ ನೀಡುತ್ತವೆ ಎಂದರೆ ನಿಮಗೆ ಆಶ್ಚರ್ಯವೆನಿಸಬಹುದಲ್ಲವೇ? ಹೌದು, ಪರಿಸರದಲ್ಲಿ ನಮ್ಮೆದುರಿಗೆ ನಡೆಯುವ ಇಂಥ ಸಾಮಾನ್ಯ ಕ್ರಿಯೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಅನೇಕ ವಿಸ್ಮಯಗಳಿಗೆ ವೈಜ್ಞಾನಿಕ ವಿವರಣೆಗಳು ದೊರೆಯುತ್ತವೆ.

**ಸಮತೋಲನ ಸ್ಥಿತಿ**

ಸಮತೋಲನ ಸ್ಥಿತಿ ನಮಗೆ ಭೌತಿಕವಾಗಿ ಕಾಣುವಂಥದ್ದು. ಭೌತಿಕ ಜಗತ್ತಿನಲ್ಲಿ ಜರುಗುವ ಅನೇಕ ಕ್ರಿಯೆಗಳನ್ನು ಅಭ್ಯಸಿಸಿಯೇ ನ್ಯೂಟನ್ ಸಮತೋಲನ ಸೂತ್ರಗಳನ್ನು ಕಂಡುಹಿಡಿದಿರಬೇಕು. ನಮಗೆಲ್ಲ ತಿಳಿದಂತೆ ಸ್ಥಿರವಸ್ತು ಬೇರೆ ಶಕ್ತಿಗೆ ಒಳಪಡದೇ ಇದ್ದರೆ, ಸ್ಥಿರವಾಗಿಯೇ ಉಳಿಯುತ್ತದೆ, ಹಾಗೆಯೇ, ಚಲಿಸುತ್ತಿರುವದು ಚಲಿಸುತ್ತಲೇ ಇರುತ್ತದೆ. ಸಮತೋಲನ ಕ್ರಿಯೆಯ ವಿಸ್ತಾರದ ಬಗೆಗೆ ಕೆಲ ಅಂಶಗಳನ್ನು ಇಲ್ಲಿ ಚರ್ಚಿಸುವದು ಸರಿ ಎಂದು ನನಗನಿಸುತ್ತದೆ. ಸಮತೋಲನ ಕ್ರಿಯೆ ಭೌತಿಕ ಜಗತ್ತಿನಲ್ಲಿಯ ಜಡ ವಸ್ತುಗಳಿಗೆ ಸಂಬಂಧಪಟ್ಟಿರಬಹುದು, ನಮ್ಮ ಸುತ್ತಲಿನ ಚಿಕ್ಕಚಿಕ್ಕ ಕ್ರಿಯೆಗಳಿಂದ ಹಿಡಿದು, ಭೂಮಿ, ಆಕಾಶ, ಸೌರವ್ಯೂಹ ಅಥವಾ ಅದರಾಚೆಗೂ ಸಂಬಂಧಪಟ್ಟಿರಬಹುದು. ನಮ್ಮ ದೇಹಕ್ಕೆ ಸಂಬಂಧಿಸಿರಬಹುದು, ಅಥವಾ ಮನಸ್ಸಿನಲ್ಲಿಯ ವೈಚಾರಿಕ ಸಮತೋಲನವಾಗಿರಬಹುದು. ಈ ಎಲ್ಲಾ ಸಮತೋಲನ ಕ್ರಿಯೆಗಳಿಗೆ ಅಂದು ಫಿಜಿಕ್ಸ್ ಲೆಕ್ಚರರ್ ಕೊಟ್ಟ ವಿವರಣೆಯಲ್ಲಿ ಉತ್ತರ ಹುಡುಕಲು ನಾನು ಆಗಾಗ ಪ್ರಯತ್ನಿಸುತ್ತೇನೆ. ಕಟ್ಟಿಗೆಯ ತುಂಡನ್ನು ಮತ್ತು ಚಮಚೆಯನ್ನು ಫ್ರಿಜ್‌ನಲ್ಲಿಟ್ಟು, ಅಂದು ನಾನು ಮಾಡಿದ ಆ ಪ್ರಯೋಗದಲ್ಲಿ ಸಮತಾಪಮಾನ ಸ್ಥಿತಿ ಹೇಗೆ ಉಂಟಾಯಿತು? ಸಮತಾಪಮಾನ ಸ್ಥಿತಿಯೂ ಒಂದು ರೀತಿಯಲ್ಲಿ ಸಮತೋಲನ ಸ್ಥಿತಿಯೇ. ಅದನ್ನು ಸ್ಥಾನಿಕ ಹಾಗೂ ಕ್ಷಣಿಕ ಸಮತೋಲನ ಸ್ಥಿತಿ ಎನ್ನಬಹುದೇ, ಎಂದು ತಿಳಿಯಲು ತವಕ ಪಡುತ್ತಿದ್ದೇನೆ. ಆ ಪ್ರಯೋಗದಲ್ಲಿ ಈ ಮೂರು ಸಂಗತಿಗಳನ್ನು ನಾವು ಗಮನಿಸಬೇಕು. ಒಂದು, ಫ್ರಿಜ್‌ನಲ್ಲಿ ನಾವಿಡುವ ವಸ್ತುಗಳ ತಾಪಮಾನ ಒಳಗಿನ ತಾಪಮಾನಕ್ಕಿಂತ ಭಿನ್ನವಾಗಿರುತ್ತದೆ. ಎರಡು, ಇಂಥ ಭಿನ್ನ ತಾಪಮಾನದ ವಸ್ತುಗಳನ್ನು ಫ್ರಿಜ್‌ನಲ್ಲಿಟ್ಟಾಗ, ವಸ್ತುಗಳ ಅಣುಕಣಗಳಲ್ಲಿ ಬದಲಾದ ಸ್ಥಿತಿಯಲ್ಲಿ ಚಲನೆಯ ಪೈಪೋಟಿ ಪ್ರಾರಂಭವಾಗುತ್ತದೆ. ಮೂರು, ಆ ಮೂಲಕ ಉಷ್ಣತೆ ಪ್ರವಹಿಸಲು ಪ್ರಾರಂಭ ಮಾಡುತ್ತದೆ. ಈ ಕ್ರಿಯೆ ಸಮತಾಪಮಾನ ಸ್ಥಿತಿಯವರೆಗೆ ಮುಂದುವರಿಯುತ್ತದೆ. ಅಂದರೆ, ಸಮತೋಲನ ಸ್ಥಿತಿಯಲ್ಲಿ ಅಣುಕಣಗಳ ಚಲನೆಯ ಪೈಪೋಟಿ ಇರುವದಿಲ್ಲ. ಏನಾದರೂ ವ್ಯತ್ಯಾಸವಾಗಿ ಅಸಮತೋಲನ ಉಂಟಾದರೆ, ವಸ್ತುವಿನಲ್ಲಿ ಬದಲಾವಣೆ ಉಂಟಾಗುತ್ತದೆ ಮತ್ತು ಅಣುಕಣಗಳ ಹುಚ್ಚಾಪಟ್ಟೆ ಚಲನೆ ಸಮಸ್ಥಿತಿ ಉಂಟಾಗುವ ವರೆಗೆ ಮುಂದುವರಿಯುತ್ತದೆ ಎಂದಂತಾಯಿತು. ಈ ಚಿಕ್ಕ ಪ್ರಯೋಗ ನಮ್ಮ ಸುತ್ತಲಿನ ಅನೇಕ ಸಮತೋಲನ ಸ್ಥಿತಿಗಳಿಗೆ ಪರಿಹಾರ ಒದಗಿಸುತ್ತದೆ ಎಂದರೆ ನಿಮಗೆ ಆಶ್ಚರ್ಯವೆನಿಸಬಹುದು. ಯಾಕೆಂದರೆ, ಈ ಕಾರಣಗಳನ್ನು ಬಳಸಿ ಯಾವುದೇ ಸಮತೋಲನ ಸ್ಥಿತಿಗೆ ಸಮಾಧಾನ ಪಡೆಯಬಹುದು. ಅಷ್ಟೇ ಏಕೆ, ಈ ವಾದವನ್ನು ಇಲ್ಲದ್ದರವರೆಗೂ ವಿಸ್ತರಿಸಿದರೆ, ಪ್ರಪಂಚ ಇಲ್ಲದ್ದರಿಂದ ಉದಯವಾಗಿ, ಇದ್ದದ್ದು ಬೆಳೆದು ಬೆಳೆದು, ಮತ್ತೆ ಇಲ್ಲದ್ದರವರೆಗೆ ಸಾಗುವದರ ಅರಿವು ನಮಗಾಗುವದು.

ಹದಿನಾಲ್ಕು ಬಿಲಿಯನ್ ವರ್ಷಗಳ ಹಿಂದೆ ಆಕಾಶ, ಭೂಮಿ, ವಸ್ತು, ವಾತಾವರಣ ಮತ್ತು ವೇಳೆ ಯಾವದೂ ಇರಲಿಲ್ಲ ಎಂಬುದು ಒಂದು ಅಂದಾಜು. ಪ್ರಾಣಿ, ಪಕ್ಷಿಸಂಕುಲ ಅಥವಾ ಗಿಡಮರಗಳೂ ಕೂಡ ಇರದಿದ್ದ ಕಾಲ. ಆಗ ನಾವೂ ಅಥವಾ ನೀವೂ ಅಥವಾ ಮತ್ತಾರೂ ಇರಲಿಲ್ಲ, ಆಗ ಏನೂ ಇಲ್ಲದಿರುವಂಥದ್ದೂ, ಮತ್ತು ಪೂರ್ಣವಾಗಲಿ ಅಥವಾ ಭಾಗಶಃ ತುಂಬಿರುವ ಸ್ಥಳವೂ ಇರದ ಸ್ಥಿತಿ. ಶೂನ್ಯತೆಯಾಗಲಿ ಅಥವಾ ಪರಿಪೂರ್ಣತೆಯಾಗಲಿ ಇರದ ಕಾಲವದು. ಆದರೆ, ಒಮ್ಮೆಲೇ 'ಬಿಗ್ ಬ್ಯಾಂಗ' ಅಂದರೆ ಅಗಾಧ ಸ್ಫೋಟವಾಯಿತು. ಪರಿಸ್ಥಿತಿ ಬದಲಾಯಿತು. ಬದಲಾದ ಸ್ಥಿತಿಯಲ್ಲಿ ವೈಭವೋಪೇತ ಅಣುಕಣಗಳ ಚಲನೆ ಉಂಟಾಯಿತು. ಭೂಮಿ, ಆಕಾಶ, ಗ್ರಹಗಳು ನಿರ್ಮಾಣವಾದವು. ಒಂದೊಂದಾಗಿ ಜೀವಿಗಳು ಉತ್ಪತ್ತಿಯಾಗಿ, ಭೌತಿಕ ಜಗತ್ತನ್ನು ಆವರಿಸುತ್ತ, ಈಗಿನ ಸುವ್ಯವಸ್ಥಿತ ಪ್ರಪಂಚ ಉದಯವಾಯಿತು. ಅದಾವುವೋ ಪರಸ್ಪರ ಆಕರ್ಷಣ ಶಕ್ತಿಗಳು ಸಂಯೋಜಿತ ಚಲನೆಗೆ ಕಾರಣವಾದವು. ಭೌತಿಕ ವಸ್ತುಗಳು ಇದ್ದ ಸ್ಥಳವನ್ನು ತುಂಬುತ್ತ ಹೋದವು. ಪರಿಣಾಮ, ಇದ್ದ ಸ್ಥಳ ವಿಸ್ತಾರವಾಗುತ್ತ ಹೋಯಿತು. ನಾವಿನ್ನೂ ಅರಿಯದ ಜಗತ್ತು ಅದೆಷ್ಟು ವಿಸ್ತಾರವಾಗಿದೆಯೊ? ಇನ್ನೂ ಅದೆಷ್ಟು ಗ್ರಹಗಳು, ಜೀವಿಗಳು, ನಮಗೆ ಗೊತ್ತಿದ್ದ ಸೌರವ್ಯೂಹದ ಆಚೆ ಇವೆಯೊ? ಅದು ನಮಗೆ ಗೊತ್ತಿರದ ಜಗತ್ತು. ಬದಲಾವಣೆ ನಿರಂತರ ನಡೆಯುವ ಕ್ರಿಯೆ. ನಮಗರಿಯದಂತೆ ಮುಂದೊಂದು ದಿನ ಮತ್ತೊಂದು 'ಬಿಗ್ ಬ್ಯಾಂಗ' ಸಂಭವಿಸಬಹುದಲ್ಲವೇ? ಆಗ ಮತ್ತೆ ಮೊದಲಿನ ಇಲ್ಲದಿರುವಿಕೆಯ ಸ್ಥಿತಿ ಪುನರಾವರ್ತಿಸಬಹುದಲ್ಲವೆ? ಅದಕ್ಕೇ ನಾನು ಹೇಳಿದ್ದು, ಇಲ್ಲದಿರುವಿಕೆಯಿಂದ ಉದಯಿಸಿದ ಪ್ರಪಂಚ ಮತ್ತೆ ಇಲ್ಲದಿರುವ ಸ್ಥಿತಿ ತಲುಪಬಹುದು ಎಂದು. ಅದನ್ನು ನಾವು ನೀವು ನೋಡದಿರಬಹುದು, ಏಕೆಂದರೆ, ಅದು ನಡೆಯುವ ಸಮಯ ಮತ್ತೆಷ್ಟೋ ಬಿಲಿಯನ್ ವರ್ಷಗಳ ನಂತರ. ಇಲ್ಲದಿರುವಿಕೆ ಶೂನ್ಯತೆಯಿಂದ ಅನಂತದವರೆಗೆ ವಿಸ್ತರಿಸುವದು. ಅದು ಪ್ರಕೃತಿ ನಿಯಮ.

ಇಲ್ಲದುದರ ಕಲ್ಪನೆಯೇ ಒಂದು ಕೌತುಕ. ಇಂಥ ಇಲ್ಲದುದರ ಕಲ್ಪನೆಯನ್ನೇ ಅರಿಯದ ಒಂದು ಲೋಕವಿತ್ತು ಎಂದರೆ ಅಚ್ಚರಿಯಾಗುವದಲ್ಲವೇ? ಹೌದು, ಬ್ಯಾಬಿಲೋನಿಯನ್ನರ ಹಾಗೂ ನಂತರದ ಗ್ರೀಕರ ೨೦೦ ಕ್ರಿ.ಶ. ಕಾಲದಲ್ಲಿನ ಕೆಲ ಶತಮಾನಗಳವರೆಗೂ, ಈ ಇಲ್ಲದಿರುವಿಕೆಯ ಕಲ್ಪನೆಯೇ ಹೊಳೆದಿರಲಿಲ್ಲವೆಂದು ಕಾಣುತ್ತದೆ. ಇಲ್ಲದಿರುವದನ್ನು ಊಹಿಸುವದೇ ಆಗ ದಿಗಿಲಾಗಿತ್ತು. ಇಲ್ಲದಿರುವದನ್ನು ಪ್ರಕಟಿಸಲು ಕಷ್ಟವಾಗಿತ್ತು. ಇಲ್ಲದಿರುವದನ್ನು ಊಹಿಸಲು ತರ್ಕ ಬುದ್ಧಿ, ಹಾಗೂ ಕಲ್ಪನಾ ಲೋಕದಲ್ಲಿ ವಿಹರಿಸಬಲ್ಲ ಜಾಣ್ಮೆ ಬೇಕು. ತತ್ವಜ್ಞಾನದ ಅರಿವು ಇರಬೇಕು. ಪ್ರಾಚೀನ ಕಾಲದಿಂದಲೂ ಇಂಥ ಗುಣವಿಶೇಷಗಳಲ್ಲಿ ಭಾರತೀಯರು ಉಳಿದವರಿಗಿಂತ ಒಂದು ಹೆಜ್ಜೆ ಮುಂದಿದ್ದರು. ಆಗಲೇ ಅವರಿಗೆ ನಿರಾಕಾರ ಬ್ರಹ್ಮನ ಅರಿವಿತ್ತು. ನಶ್ವರ ಹಾಗೂ ಅನಂತಗಳ ಕಲ್ಪನೆ ಹೊಳೆದಿತ್ತು.

ಪ್ರೊ॥ ಆರ್. ಪಿ. ಪುನಗಿನ
ಸಂಖ್ಯೆ. ೯೮೩, 'ಸರಸ್ವತಿ', ಮಹಾವೀರ ನಗರ, ಬೆಳಗಾವಿ - ೫೯೦ ೦೧೬

# ಶಾಲೆಗಳಲ್ಲಿ ಶಿಸ್ತು, ಶಿಕ್ಷೆ, ಸ್ಪರ್ಧೆಗಳು

## – ಕೆಲವು ಟಿಪ್ಪಣಿಗಳು

ಡಾ|| ಮಹಾಬಲೇಶ್ವರ ರಾವ್

'ಶಿಸ್ತು' ಎಂದೊಡನೆ ಸುಮಾರಾಗಿ ಈ ಕೆಳ ಕಾಣಿಸಿದ ಮೂರು ಅರ್ಥಗಳು ಹೊಮ್ಮುತ್ತವೆ :

* ವ್ಯವಸ್ಥಿತವಾದ ನಡವಳಿಕೆ ಅಥವಾ ವಿಧೇಯತೆಯನ್ನು ರೂಢಿಸುವ ಸಾಮಾಜಿಕ ನಿಯಂತ್ರಣ; ಹಿರಿಯರು ಅಥವಾ ವ್ಯವಸ್ಥೆ ವಿಧಿಸುವ, ಪರಿಪಾಲಿಸಬೇಕಾದ ಕಟ್ಟುಪಾಡು; ಎಳೆದ ಲಕ್ಷ್ಮಣರೇಖೆ, ವಿಧಿ ನಿಷೇಧಗಳ ಜಾಲ, ಅನುಮೋದಿತ ವರ್ತನೆ.

* ವರ್ತನೆಯನ್ನು ತಿದ್ದಿ ಬಲಗೊಳಿಸುವುದು; ಅಂದರೆ ಸ್ವಯಂ ಶಿಸ್ತು ರೂಢಿಸುವುದು. ಸ್ವನಿಗ್ರಹ, ಸ್ವನಿರ್ದೇಶನ, ಸ್ವನಿಯಂತ್ರಣದ ಮೂಲಕ ಸ್ವಯಂಶಿಸ್ತು ಸಾಧಿಸುವುದು;

* ಶಿಸ್ತುಕ್ರಮ ಎಂದರೆ ಶಿಕ್ಷೆ ಎಂಬ ಅರ್ಥವೂ ಇದೆ.

ಶಾಲೆಗಳಲ್ಲಿ ಶಿಸ್ತು ಬೇಕು. ಬೋಧನೆ-ಕಲಿಕೆ ಸುಗಮವಾಗಲು ಬೇಕು. ನಾಳೆಯ ಪ್ರಜೆಗಳಾದ ಇಂದಿನ ಮಕ್ಕಳು ಶಿಸ್ತಿನಿಂದ, ಸಭ್ಯತೆಯಿಂದ ವರ್ತಿಸಬೇಕು. ಅವರ ನಾಳಿನ ಬದುಕು ಶಿಸ್ತುಬದ್ಧವಾಗಬೇಕಾದರೆ ಇಂದೇ ಅವರಿಗೆ ಶಿಸ್ತು ಕಲಿಸಬೇಕು. ಗುರುಹಿರಿಯರ ಬಗ್ಗೆ ಗೌರವ, ನೀತಿ ನಿಯಮ ಪರಿಪಾಲನೆ, ನಮ್ರತೆ, ವಿಧೇಯತೆ ಇವೇ ಮುಂತಾದುವನ್ನು ಕಲಿಸಿ ವ್ಯವಸ್ಥೆಗೆ ತಗ್ಗಿ ಬಗ್ಗಿ ನಡೆಯುವ, ಹೊಂದಿಕೊಳ್ಳುವ ವ್ಯಕ್ತಿತ್ವ ನಿರ್ಮಾಣ ಆಗಬೇಕು. ಅಂತೆಯೇ ವಿವೇಕದಿಂದ ವ್ಯವಸ್ಥೆಯನ್ನು ಪರಿಶೀಲಿಸುವ, ಅನ್ಯಾಯಗಳಿಗೆ ತಲೆಬಾಗದ ವ್ಯಕ್ತಿತ್ವವೂ ರೂಪುಗೊಳ್ಳಬೇಕು. ಶಿಕ್ಷಕ ಪ್ರೇರಿತ (ಬಾಹ್ಯ) ಶಿಸ್ತು ಹಾಗೂ ಸ್ವಯಂಪ್ರೇರಿತ (ಆಂತರಿಕ) ಶಿಸ್ತು ಎಂದು ಎರಡು ಬಗೆ. ಆದರೆ ಶಾಲೆಗಳಲ್ಲಿ ಇಂದು ಶಿಕ್ಷಕ ಪ್ರೇರಿತ ಶಿಸ್ತು ಎದ್ದುಕಾಣುತ್ತಿದೆ. ಇದು ತಪ್ಪಲ್ಲ. ವಿದ್ಯಾರ್ಥಿಗಳಿಗೆ ಹಿರಿಯರಾದ ಶಿಕ್ಷಕರು ಶಿಸ್ತು ಕಲಿಸಬೇಕು. ಅವರನ್ನು ನಿಗ್ರಹಿಸಬೇಕು; ಅದರ ಹಿಂದೆ ಸಾಮಾಜಿಕ, ನೈತಿಕ ಕಳಕಳಿ ಇದೆ ಎಂಬುದು ನಿಜ. ಆದರೆ ಸದಾ ಅವರನ್ನು ಶಿಸ್ತಿನ ಹೆಸರಿನಲ್ಲಿ ನಿಯಂತ್ರಿಸಿ ನಿಗ್ರಹಿಸಿದರೆ ಅವರು ಸ್ವನಿರ್ದೇಶನವನ್ನು, ಆತ್ಮನಿಗ್ರಹವನ್ನು ಅಂತಿಮವಾಗಿ ಸ್ವಯಂಪ್ರೇರಿತ ಶಿಸ್ತನ್ನು ರೂಢಿಸಿಕೊಳ್ಳಲಾರರು. ಭಯ ಹಾಗೂ ವಿಪರೀತ ನಿಯಂತ್ರಣದಿಂದ ಕೂಡಿದ ನಮ್ಮ ಶಾಲೆಗಳ ವಾತಾವರಣದಲ್ಲಿ ಮಕ್ಕಳು ಅಧಿಕಾರ ಕೇಂದ್ರಕ್ಕೆ ಹೆದರಿಹೆದರಿ ತಗ್ಗಿಬಗ್ಗಿ ನಡೆದುಕೊಳ್ಳುವ 'ಪರಾವಲಂಬಿ' ವ್ಯಕ್ತಿಗಳಾಗಿ ರೂಪುಗೊಳ್ಳುತ್ತಾರೆ. ಸೆಟೆದು ನಿಲ್ಲುವವರು ಉಡಾಳರಾಗಿ, ಪುಂಡಪೋಕರಿಗಳಾಗಿ, ಬಂಡುಕೋರರಾಗಿ, ಅಶಿಸ್ತಿನವರಾಗಿ ಕಂಡುಬರುತ್ತಾರೆ.

* ವಿದ್ಯಾರ್ಥಿಗಳು ಸ್ವಯಂಪ್ರೇರಿತ ಶಿಸ್ತು ಕಲಿತುಕೊಳ್ಳಲು ಪ್ರೋತ್ಸಾಹ ನೀಡುವುದಕ್ಕಿಂತ ಅವರ ಮೇಲೆ ನಿಯಂತ್ರಣ ಹೇರುವುದು ಶಿಕ್ಷಕರಿಗೆ ಹೆಚ್ಚು ಸುಲಭವೆಂದು ಕಂಡುಬಂದಿದೆ. ಸ್ವನಿಗ್ರಹ, ಸ್ವನಿಯಂತ್ರಣ ಸಾಧಿಸಲು ಪ್ರೋತ್ಸಾಹ ನೀಡುವುದು ತಾಳ್ಮೆಯ, ಕಠಿಣ ಮಾರ್ಗ. ಹೀಗಾಗಿ ಶಿಸ್ತಿನ ಹೆಸರಿನಲ್ಲಿ ಶಿಕ್ಷಕರು ಸುಲಭವಾಗಿ ನಿಯಂತ್ರಣ ಹೇರುತ್ತಾರೆ, ದಮನಿಸುತ್ತಾರೆ. ನಿಯಂತ್ರಿತ ನಿರ್ಬಂಧಿತ ಆವರಣದಲ್ಲಿ ವಿದ್ಯಾರ್ಥಿಗಳೂ ಸ್ವಯಂ ನಿಗ್ರಹ ಕಲಿಯುವರು ಎಂಬ ಭ್ರಮೆ ಅವರದು !

* ಶಿಕ್ಷಕಪ್ರೇರಿತ ಶಿಸ್ತು ದಮನಕಾರಿ ಎಂಬ ಕಾರಣಕ್ಕೆ ಅದನ್ನು ನಿರಾಕರಿಸುವಂತಿಲ್ಲ. ಅದು ಬೇಕು. ಆದರೆ ಎಷ್ಟು ಪ್ರಮಾಣದಲ್ಲಿ ಶಿಕ್ಷಕರ ನಿಯಂತ್ರಣ, ನಿಗ್ರಹ ಅಗತ್ಯ ಎಂಬುದು ಚರ್ಚಾಸ್ಪದ. ವಿದ್ಯಾರ್ಥಿಗಳ ಸಹಜ ವಿಕಾಸಕ್ಕೆ, ಸಹಜ ಅಭಿವ್ಯಕ್ತಿಗೆ ಮುಕ್ತ ಅವಕಾಶ ನೀಡುತ್ತ 'ಸಕಾಲ'ದಲ್ಲಿ ಹಿತಮಿತ ಪ್ರಮಾಣದಲ್ಲಿ ಶಿಕ್ಷಕರು ನಿಯಂತ್ರಣ ಸಾಧಿಸಬೇಕು. ಇದು ತಂತಿಯ ಮೇಲಿನ ನಡಿಗೆ.

* ಶಿಸ್ತಿನ ಪರಿಕಲ್ಪನೆ ಶಿಕ್ಷಕರಲ್ಲಿ ಏಕರೂಪಿಯಾಗಿಲ್ಲ; ಶಿಸ್ತಿನ ಪರಿಕಲ್ಪನೆಯ ವ್ಯಾಖ್ಯಾನ ವೈವಿಧ್ಯಮಯವಾಗಿದೆ. ಒಬ್ಬನಿಗೆ 'ಶಿಸ್ತು' ಎಂದು ಭಾಸವಾದದ್ದು ಮತ್ತೊಬ್ಬನಿಗೆ 'ಅಶಿಸ್ತು' ಎಂಬಂತೆ ಕಾಣಬಹುದು. ಹೆಚ್ಚೇಕೆ, ಮತ್ತೊಬ್ಬ ಶಿಕ್ಷಕ ಸ್ವಚ್ಛಂದ ಪ್ರವೃತ್ತಿಯವನಾಗಿದ್ದು ಅಶಿಸ್ತಿನ ವರ್ತನೆಗೆ ಇಂಬು ನೀಡುತ್ತಿದ್ದಾನೆ ಎಂಬ ಆರೋಪಗಳೂ ಶಾಲೆಯ ವರ್ತುಲದಲ್ಲಿ ಹುಟ್ಟಿಕೊಳ್ಳುತ್ತವೆ.

ವಿದ್ಯಾರ್ಥಿಗಳ ಸಮಸ್ಯೆಗಳನ್ನು ಅರಿತು ಮನೋವೈಜ್ಞಾನಿಕ ನೆಲೆಯಲ್ಲಿ ಪರಿಹಾರಗಳನ್ನು ಕಂಡುಕೊಳ್ಳುವುದರ ಮೂಲಕ ಶಾಲೆಗಳಲ್ಲಿ ಶಿಸ್ತು ಕಾಪಾಡಬಹುದೇ ಹೊರತು ಬಿಗಿಯಾದ ಅರ್ಥಹೀನವಾದ ನೀತಿ ನಿಯಾಮಾವಳಿಗಳಿಂದಲ್ಲ. ವಿದ್ಯಾರ್ಥಿಗಳ ಜೊತೆ ಮಧುರ ಭಾವನಾತ್ಮಕ ಸಂಬಂಧ ಹೊಂದಿದ, ಹಾಗೂ ಪಠ್ಯಬೋಧನೆಯಲ್ಲಿ ಪ್ರಭುತ್ವ ಸಾಧಿಸಿದ ಶಿಕ್ಷಕರು ಆಶಿಸ್ತಿನ ಸಮಸ್ಯೆಗಳನ್ನು ಅಷ್ಟಾಗಿ ಎದುರಿಸಬೇಕಾಗಿ ಬರುವುದಿಲ್ಲ. ಇಷ್ಟು ವರ್ಷಗಳಾದರೂ ಶಾಲೆಗಳಲ್ಲಿ ಶಿಕ್ಷಕ ಪ್ರೇರಿತ ಶಿಸ್ತು ಹೆಮ್ಮರವಾಗಿ ಬೇರುಬಿಟ್ಟಿದೆಯೇ ಹೊರತು ವಿದ್ಯಾರ್ಥಿ ಪ್ರೇರಿತ ಸ್ವಯಂಶಿಸ್ತು ಇನ್ನೂ ಕುಡಿ ಒಡೆದಿಲ್ಲ. ಏಕೆ ಹೀಗೆ ? ಪ್ರಾಥಮಿಕ ಶಾಲಾ ಹಂತದ ವಿದ್ಯಾರ್ಥಿಗಳು ಮುಗ್ಧರು, ಅಪ್ರಬುದ್ಧರು, ತಿಳಿವಳಿಕೆಯಿಲ್ಲದವರು, ಜವಾಬ್ದಾರಿ ಪ್ರಜ್ಞೆ ಬೆಳೆಸಿಕೊಳ್ಳಲಾರದವರು ಎಂದು ಅವರನ್ನು ಶಿಕ್ಷಕರು ಕೀಳಂದಾಜುಮಾಡಿರುವುದು ಕಾರಣವಿರಬಹುದು. ಅಂತೆಯೇ ಪ್ರೌಢಶಾಲಾ ಹಾಗೂ ಪ್ರೌಢಶಾಲೋತ್ತರ ಹಂತದ ವಿದ್ಯಾರ್ಥಿಗಳು ಹದಿಹರೆಯದವರು. ಸುಲಭದಲ್ಲಿ ಅಂಕೆಗೆ ಸಿಲುಕುವವರಲ್ಲ; ಉಡಾಳರು; ಅವರಿಗೆ ಸ್ವಾತಂತ್ರ್ಯ ನೀಡಿದರೆ 'ಲಂಕಾದಹನ'ವಾದೀತಾದ್ದರಿಂದ ಅವರನ್ನು ಸದಾ ಹದ್ದುಬಸ್ತಿನಲ್ಲಿಡಬೇಕು; ನಿರ್ಬಂಧಿಸಬೇಕು ಎಂಬ ಧೋರಣೆ ಪ್ರಬಲವಾಗಿದೆ. ಯಾವ ಹಂತದ ವಿದ್ಯಾರ್ಥಿಗಳೇ ಇರಲಿ, ಅವರ ಪಾತ್ರ ಹಾಗೂ



ಜವಾಬ್ದಾರಿಗಳ ಬಗ್ಗೆ ಶಿಕ್ಷಕರು ಚರ್ಚಿಸಿ ಶಾಲಾ ಆಡಳಿತದಲ್ಲಿ, ಸಂಯೋಜಿಸುವ ಕಾರ್ಯಕ್ರಮಗಳಲ್ಲಿ ಅವರನ್ನು ಪಾಲುದಾರರನ್ನಾಗಿಸಿಕೊಂಡು, ಅವರ ಭಾವನೆಗಳು ಹಾಗೂ ನ್ಯಾಯಯುತ ಬೇಡಿಕೆಗಳಿಗೆ ಸೂಕ್ತ ಮನ್ನಣೆ ನೀಡಿ, ಜವಾಬ್ದಾರಿಗಳನ್ನು ವಹಿಸಿಕೊಟ್ಟು ಒಂದಿಷ್ಟು ದೂರ ನಿಂತು ಪರಿಶೀಲಿಸಿ, ಪ್ರಮಾದಗಳಾದಾಗ ತಿದ್ದಿ ಮಾರ್ಗದರ್ಶನ ಮಾಡಿದ್ದೇ ಆದಲ್ಲಿ ವಿದ್ಯಾರ್ಥಿಗಳು ಖಂಡಿತಕ್ಕೂ ಸ್ವಯಂಪ್ರೇರಿತ ಶಿಸ್ತನ್ನು ರೂಢಿಸಿಕೊಳ್ಳುತ್ತಾರೆ. ಆದರೆ ಈ ನಿಟ್ಟಿನಲ್ಲಿ ಯೋಚಿಸುವ ಶಿಕ್ಷಕರು ಹಾಗೂ ಶಾಲೆಗಳು ತೀರ ವಿರಳವೆಂದರೆ ಅತಿಶಯೋಕ್ತಿಯಾಗಲಾರದು. ನಾವು ಶಿಕ್ಷಣದಲ್ಲಿ ಹೊಸ ತಂತ್ರಜ್ಞಾನ ಹಾಗೂ ವಿನೂತನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಲ್ಲಿ ತೋರುವ ಉತ್ಸುಕತೆಯನ್ನು ಕಲಿಕೆಗೆ ಇಂಬು ನೀಡುವ ಆರೋಗ್ಯಕರ ವಾತಾವರಣ ನಿರ್ಮಾಣ ಮಾಡುವಲ್ಲಿ ತೋರಿಸುತ್ತಿಲ್ಲವೆಂಬುದು ಖೇದಕರ.

**ಶಿಕ್ಷೆ**

ತರಗತಿಯಲ್ಲಿನ ಶಿಸ್ತು ಕಲಿಕೆಗೆ ಪ್ರೇರಣೆ ನೀಡಬೇಕು.'ಶಿಸ್ತು ಪಾಲನೆಗಾಗಿ ಶಿಸ್ತು' ಎಂಬ ಧೋರಣೆ ಹಾಗೂ ಭಯಭೀತಿಯ ಮೂಲಕ ಶಿಸ್ತು ಹೇರಿಕೆಯಿಂದ ಅಹಿತಕರ ಪರಿಣಾಮಗಳಾಗುತ್ತವೆ. ದುರ್ದೈವವೆಂದರೆ ಶಿಕ್ಷಕ ಪ್ರೇರಿತ ಶಿಸ್ತು ಶಿಕ್ಷೆಯಾಗಿ ಶಾಲೆಗಳಲ್ಲಿ ಮಾರ್ಪಡುತ್ತಿದೆ. 'ಶಿಸ್ತು ಎಂದರೆ ಶಿಕ್ಷೆ' ಎಂಬ ಧೋರಣೆ

ವ್ಯಕ್ತವಾಗುತ್ತಿದೆ. ವಿದ್ಯಾರ್ಥಿಗಳಿಗೆ ಶಿಸ್ತು ಕಲಿಸುವ ನೆಪದಲ್ಲಿ ಶಿಕ್ಷಕರು ಸಾಮಾನ್ಯ ಸ್ವರೂಪದಿಂದ ತೊಡಗಿ ಘೋರ ರೂಪದ ಶಿಕ್ಷೆಗಳನ್ನು ನೀಡುತ್ತಾರೆ. ದೈಹಿಕ ಹಾಗೂ ಮಾನಸಿಕ ಶಿಕ್ಷೆಗಳನ್ನು ನೀಡುತ್ತಾರೆ. ಶಿಸ್ತು ಮತ್ತು ಶಿಕ್ಷೆ ಒಂದೇ ಅಲ್ಲ. ಅವುಗಳ ನಡುವೆ ಅಂತರವಿದೆ. 'ಪುರಸ್ಕಾರ ಹಾಗೂ ಶಿಕ್ಷೆ' ಎಂಬ ಜೋಡಿ ಪರಿಕಲ್ಪನೆಗಳಲ್ಲಿ ಶಿಕ್ಷೆ ಎಂಬುದು ಪುರಸ್ಕಾರಕ್ಕೆ ವಿರುದ್ಧವಲ್ಲ. ಪುರಸ್ಕಾರವು ಅಪೇಕ್ಷಣೀಯ ವರ್ತನೆಯನ್ನು ಅಭಿವರ್ಧಿಸಿದರೆ ಶಿಕ್ಷೆಯಿಂದ ಅನಪೇಕ್ಷಣೀಯ ವರ್ತನೆ ತಾತ್ಕಾಲಿಕವಾಗಿ ದಮನಿಸಲ್ಪಡುವುದೇ ಹೊರತು ಪೂರ್ತಿ ನಿವಾರಣೆ ಯಾಗುವುದಿಲ್ಲ. ಶಿಕ್ಷೆ ಸನ್ನಿವೇಶ ಸಹಜವಾಗಿ ಅಂತರ್ಗತವಾಗಿ ಮೂಡಿಬಂದರೆ ಆಗ ವ್ಯಕ್ತಿ ಎಚ್ಚತ್ತು ಕೊಳ್ಳುತ್ತಾನೆ; ತಿದ್ದಿಕೊಳ್ಳುತ್ತಾನೆ. ಉದಾಹರಣೆ : ಬೆಂಕಿಯ ಜ್ವಾಲೆಯಲ್ಲಿ ಕೈಸುಟ್ಟುಕೊಂಡ ಮಗು ಇನ್ನೊಮ್ಮೆ ಹಾಗೆ ಮಾಡುವುದಿಲ್ಲ. ಶಾಕ್ ಹೊಡೆಸಿಕೊಂಡ ವ್ಯಕ್ತಿ ಮುಂದಿನ ಸಲ ಸೂಕ್ತ ಎಚ್ಚರಿಕೆ ವಹಿಸಿ ಅಹಿತಕರ ಅನುಭವದಿಂದ ಪಾರಾಗುತ್ತಾನೆ.

ಶಿಕ್ಷೆ ನೀಡುವ ಮೂಲಕ ವರ್ತನೆಯನ್ನು ತಿದ್ದಬಹುದೆಂಬುದಕ್ಕೆ ಆಧಾರಗಳು ಅಷ್ಟಿಲ್ಲ. ಕ್ಷುಲ್ಲಕ ಕಾರಣಗಳಿಗಾಗಿ ಶಿಕ್ಷಕರು ಬಳಸುವ ಬಹುರೂಪಿ ಶಿಕ್ಷೆಗಳು ಅನೈತಿಕವೂ ಅಮಾನವೀಯವೂ ಅನಗತ್ಯವೂ ನಿಷ್ಪ್ರಯೋಜಕವೂ ಆಗಿರುತ್ತವಲ್ಲದೆ ವಿದ್ಯಾರ್ಥಿಗಳ ಮೇಲೆ ದೈಹಿಕವಾಗಿ, ಮಾನಸಿಕವಾಗಿ ಘೋರ ಪರಿಣಾಮ ಬೀರುತ್ತವೆ. ಮೃದುವಾದ ಶಿಕ್ಷೆಗಳನ್ನು ವಿದ್ಯಾರ್ಥಿಗಳು ಬೇಗನೆ ಮರೆಯುತ್ತಾರೆ. ಆದರೆ ಅಪಮಾನಕಾರಕ ಶಿಕ್ಷೆಗಳಿಂದ ಅವರ ಆತ್ಮಸಂಮಾನ, ಆತ್ಮವಿಶ್ವಾಸ ಕುಗ್ಗುತ್ತವೆ. ಕೀಳರಿಮೆಯ ಭಾವನೆಗಳು ಬಲಿಯುತ್ತವೆ. ಶಿಕ್ಷಿಸಿದ ವ್ಯಕ್ತಿಯ ವಿರುದ್ಧ ಕೋಪತಾಪ, ರೋಷಗಳಂತಹ ದ್ವೇಷ ಭಾವನೆಗಳನ್ನು ಕೆರಳಿಸುತ್ತವೆ.

ಹೊರಗಿನ ಸಮಾಜದಲ್ಲಿ ಕಂಡುಬರುವ ಸಾಮಾಜಿಕ ಶ್ರೇಣೀಕರಣ, ಅಧಿಕಾರ ಶ್ರೇಣೀಕರಣ ಹಾಗೂ ದಂಡ ಸಂಹಿತೆ ಶಾಲಾ ವ್ಯವಸ್ಥೆಯಲ್ಲೂ ಅಂತರ್ಗತವಾಗಿದೆ. ಇದರ ಪರಿಣಾಮವಾಗಿ ಅಧ್ಯಾಪಕ ಮೇಲು – ವಿದ್ಯಾರ್ಥಿ ಕೀಳು, ಶಿಕ್ಷಕ ಅಧಿಕಾರಸ್ಥ, ವಿದ್ಯಾರ್ಥಿ ದುರ್ಬಲ ಮತ್ತು ವಿದ್ಯಾರ್ಥಿಯನ್ನು ಆತನ ದುರ್ವರ್ತನೆ ಅಥವಾ ಅವಿಧೇಯತೆಗಾಗಿ ದಂಡಿಸುವ ಅಧಿಕಾರ ಶಿಕ್ಷಕನಿಗೆ ಇದೆ ಎಂಬ ಸಿದ್ಧಾಂತಗಳಿಗೆ ನ್ಯಾಯಯುತ ಸ್ಥಾನ ಲಭಿಸಿರುವುದರಿಂದ ನಾನಾ ಬಗೆಯ ಶಾಲೆಗಳಲ್ಲಿ ನಾನಾ ಬಗೆಯ ತೀವ್ರ ಸ್ವರೂಪದ ರೂಕ್ಷವಾದ ಶಿಕ್ಷೆಯ ಕ್ರಮಗಳು ಪ್ರಚಲಿತವಾಗಿವೆ. ದೇಹದಂಡನೆ ಹಾಗೂ ಅಪಮಾನಕರ ಶಿಕ್ಷೆಗಳು ನಿಷಿದ್ಧವೆಂಬ ನಿಯಮಗಳೂ ಕಡತಗಳಲ್ಲಿ ಮಾತ್ರವೇ ಇವೆ. ಶಾಲೆ ಎಂಬುದು ಪೊಲೀಸ್ ಠಾಣೆಯಲ್ಲ, ಸೆರೆಮನೆಯಲ್ಲ, ನ್ಯಾಯಾಲಯವಲ್ಲ, ಶಿಕ್ಷಕರು ಲಾಠಿ ಬೀಸುವ ಪೊಲೀಸರಲ್ಲ; ಕಳ್ಳರು ಕನ್ನ ಕೊರೆದು ಪರಾರಿಯಾಗದಂತೆ ನೋಡಿಕೊಳ್ಳುವ ಜೈಲರುಗಳಲ್ಲ; ಯಾವ ಅಪರಾಧಕ್ಕೆ ಯಾವ ಶಿಕ್ಷೆ ಎಂದು ದಂಡಸಂಹಿತೆ ಪರಿಶೀಲಿಸಿ ಶಿಕ್ಷೆ ವಿಧಿಸುವ ನಿಷ್ಕರುಣ ನ್ಯಾಯಾಧೀಶರಲ್ಲ. ವಿದ್ಯಾರ್ಥಿಗಳು ತಪ್ಪಿತಸ್ಥರಲ್ಲ, ಕಳ್ಳರಲ್ಲ, ಅಪರಾಧಿಗಳಲ್ಲ. ಬೋಧನೆ-ಕಲಿಕೆಯ ಮಾನವೀಯ ವ್ಯವಹಾರದಲ್ಲಿ ನಿಯಮೋಲ್ಲಂಘನೆಯೇ ಗಂಭೀರ ಚರ್ಚೆಯ ವಿಷಯವಾಗಬೇಕಾಗಿಲ್ಲ. ಹಾಗೆಂದು ತೀರ ಅಸಭ್ಯ, ಅನಾಗರಿಕ, ದುಷ್ಟ ಮತ್ತು ಹಾನಿಕಾರಕ-ವಿಧ್ವಂಸಕ ವರ್ತನೆಗಳನ್ನು ಗಂಭೀರವಾಗಿ ಪರಿಗಣಿಸಿ ಸೂಕ್ತ ಶಿಕ್ಷೆ ನೀಡಬೇಕು. ಆದರೆ ಯಾವುದು ಅಸಭ್ಯ, ಹಾನಿಕಾರಕ ನಡತೆ ಮತ್ತು ಯಾವುದು ಸೂಕ್ತ ಶಿಕ್ಷೆ ಎಂಬುದು ಜಿಜ್ಞಾಸೆಯ ಸಂಗತಿಯೇ ಸರಿ. ಶಿಕ್ಷೆ ಯಾವುದೇ ಇರಲಿ, ಮಾನವ ಘನತೆಗೆ ಕುಂದು ಉಂಟಾಗದಂತೆ ನೋಡಿಕೊಳ್ಳುವುದು ಶ್ರೇಯಸ್ಕರ. ಒಪ್ಪಿತವಾದ ಕ್ರಮಗಳನ್ನು ಮೀರಿದ ವಿದ್ಯಾರ್ಥಿಗಳಲ್ಲಿ ವಿವೇಕ ಹಾಗೂ ಶಿಸ್ತಿನ ಪ್ರಜ್ಞೆ ಮೂಡಿಸಲು ಹಲವಾರು ಪರ್ಯಾಯ ಮಾರ್ಗಗಳನ್ನು ಶಿಕ್ಷಕರು ಇಂದು ಹೆಚ್ಚು ಹೆಚ್ಚಾಗಿ ಕಂಡುಕೊಳ್ಳಬೇಕಾಗಿದೆ. ಆಚರಣೆಗಳ ಬಗೆಗಿನ ಅಂತರವಲೋಕನ, ವ್ಯಾಪಕ ಜಿಜ್ಞಾಸೆ, ತನ್ನಂತೆ ಇರುವ ಇತರ ವ್ಯಕ್ತಿತ್ವಗಳ ಬಗೆಗೆ ಗೌರವ ಮತ್ತು ಅನುಭೂತಿ ಹಾಗೂ ಮಾನವೀಯ ನಡವಳಿಕೆಗಳ ಬಗೆಗಿನ ಆದರ, ನಮನೀಯ ದೃಷ್ಟಿಕೋನ ಶಿಕ್ಷಕರಲ್ಲಿ ಮೂಡಿದಾಗ ಶಿಕ್ಷಿಸುವ ಅನುದಾರ ಪ್ರಕರಣಗಳ ಸಂಖ್ಯೆ ಕ್ಷೀಣಿಸುತ್ತದೆ.


ಈ ಊರಿನಲ್ಲಿ ಕುಡಿಯುವ ನೀರು ಸಿಗ್ತಾ ಇಲ್ವಾ? ನಾನು ಬರುವಾಗ ದಾರಿಯಲ್ಲಿ ಸಾಕಷ್ಟು ಅಂಗಡಿಗಳಲ್ಲಿ ಬಾಟಲ್ ನೀರು ಮಾರುವುದನ್ನು ನೋಡಿದೆನಲ್ಲ?!

**ಸ್ಪರ್ಧೆಗಳು**

ಕೆಲವರನ್ನು ನಗಿಸಿ, ಹಲವರನ್ನು ಅಳಿಸುವ ಸ್ಪರ್ಧೆಗಳಿಗೆ ಶಾಲೆಗಳು ಆಡುಂಬೋಲಗಳಾಗಿವೆ. ಸ್ಪರ್ಧಾರಹಿತ ಶಿಕ್ಷಣ ಇಂದು ಕಲ್ಪನೆಗೂ ಎಟುಕದ ಸಂಗತಿ. ಶಿಕ್ಷಕರಿಗೆ, ರಕ್ಷಕರಿಗೆ, ಸರಕಾರಗಳಿಗೆ, ಸಾರ್ವಜನಿಕರಿಗೆ ಎಲ್ಲರಿಗೂ ಇಂದು ಸ್ಪರ್ಧೆಗಳು ಅನಿವಾರ್ಯ ಎಂಬಂತಾಗಿದೆ. ಮೇಲ್ಮೆ ಹಾಗೂ ಪ್ರತಿಷ್ಠೆಯ ಮುಸುಕಿನ ಮರೆಯಲ್ಲಿ ಅಳುವ ಮಕ್ಕಳನ್ನು ಸಂತೈಸುವ ವ್ಯವಧಾನ ಇಲ್ಲವಾಗಿದೆ.

ವಿದ್ಯಾರ್ಥಿಗಳ ನಾಳಿನ ಭವಿಷ್ಯದ ದೃಷ್ಟಿಯಿಂದ ಸ್ಪರ್ಧೆಗಳು ಅನಿವಾರ್ಯ. ಬದುಕು ಸ್ಪರ್ಧಾತ್ಮಕವಾಗಿದೆ. ಸ್ಪರ್ಧೆಗಳಲ್ಲಿ ಗೆಲ್ಲುವವನೇ ಯಶಸ್ವಿ ವ್ಯಕ್ತಿ. ಸ್ಪರ್ಧೆಗಳು ವಿದ್ಯಾರ್ಥಿಗಳ ವ್ಯಕ್ತಿತ್ವವನ್ನು ರೂಪಿಸುತ್ತವೆ. ಸ್ಪರ್ಧೆಗಳಿಂದ ವ್ಯಕ್ತಿಯಲ್ಲಿ ಹುದುಗಿರುವ ಶ್ರೇಷ್ಠತೆ ಪ್ರಕಟಗೊಳ್ಳುತ್ತದೆ ಎಂಬ ಸಬೂಬುಗಳನ್ನು ನೀಡಿ ಶಿಕ್ಷಣದಲ್ಲಿ ಸ್ಪರ್ಧೆಗಳಿಗೆ ಸಮರ್ಥನೆ ನೀಡಲಾಗುತ್ತಿದೆ; ನ್ಯಾಯಯುತ ಸ್ಥಾನ ಒದಗಿಸಲಾಗುತ್ತಿದೆ.

ಸ್ಪರ್ಧೆಗಳಲ್ಲಿ ಗೆಲ್ಲುವ ಒಬ್ಬಿಬ್ಬರಿಗಾಗಿ ಹಲವರು ಅಳಬೇಕೇ ? ಸ್ಪರ್ಧೆಗಳು ಹಾಗೂ ಫಲಿತಾಂಶಗಳು ಸಾಪೇಕ್ಷವಾಗಿರುವಾಗ ಅವುಗಳಿಗೆ ಶಿಕ್ಷಣದಲ್ಲಿ ಏಕೆ ಇನ್ನಿಲ್ಲದ ಸ್ಥಾನ ನೀಡಬೇಕು ? ನಾಳಿನ ಬದುಕನ್ನು ಕಂಡವರು ಯಾರು ? ಕಾಣದ ನಾಳಿನ ನಿಗೂಢ ಬದುಕಿಗಾಗಿ ವಿದ್ಯಾರ್ಥಿಗಳು ಇಂದಿನ ವಾಸ್ತವವನ್ನು, ಸುಖ ಸಂತೋಷಗಳನ್ನು ಬಲಿಗೊಡಬೇಕೆ ? ಬದುಕು ಸ್ಪರ್ಧಾತ್ಮಕ ಎಂಬ ಕಾರಣಕ್ಕಾಗಿ ಎಲ್ಲ ಮಕ್ಕಳನ್ನು 'ಕಂಬಳದ ಕೋಣ'ಗಳನ್ನಾಗಿ, 'ರೇಸ್ ಕುದುರೆ'ಗಳನ್ನಾಗಿ ಪರಿವರ್ತಿಸಬೇಕೆ ? ಇಷ್ಟಕ್ಕೂ ಸೂಕ್ತ ತರಬೇತಿ, ಮಾರ್ಗದರ್ಶನ ಎಲ್ಲ ದೊರೆತರೂ ಬಾಳಿನ ಸ್ಪರ್ಧೆಯಲ್ಲಿ ಎಲ್ಲರೂ ಗೆಲ್ಲಬಲ್ಲರೆ ? ಗೆಲ್ಲಲೇ ಬೇಕೆ ? ಗೆದ್ದರೆ ಮಾತ್ರ ಯೋಗ್ಯ ಜೀವನವೆ ? ಯಶಸ್ಸು ಮಾತ್ರ ಮೌಲಿಕವೆ ? ಸ್ಪರ್ಧಾಕಣಕ್ಕಿಳಿಯದೆ ಅನಾಮಿಕರಾಗಿದ್ದುಕೊಂಡು ಬದುಕಿನ ಸಂತಸವನ್ನು ಅನುಭವಿಸಲಾಗದೆ ? ಅದಕ್ಕೆ ಬೆಲೆಯಿಲ್ಲವೆ ? ವಿವಿಧ ಬಗೆಯ ಸ್ಪರ್ಧೆಗಳಿಂದ ವ್ಯಕ್ತಿತ್ವ ಎಷ್ಟರ ಮಟ್ಟಿಗೆ ರೂಪುಗೊಳ್ಳುತ್ತದೆ ? ಬದುಕು ಹಾಗೂ ಶಿಕ್ಷಣವೆಂದರೆ ಬರೀ ಮೇಲ್ಮೆಯ, ಶ್ರೇಷ್ಠತೆಯ ಹುಡುಕಾಟವೆ ? ಆಟೋಟಗಳಂಥ ಕೆಲವೊಂದು ಸ್ಪರ್ಧೆಗಳಲ್ಲಿ ಫಲಿತಾಂಶ ಹಾಗೂ ಮಾನದಂಡಗಳು ನಿಖರವಾಗಿರುತ್ತವೆಯಾದರೂ ಬುದ್ಧಿಭಾವ, ಮನೋಭಾವ, ಮೌಲ್ಯಗಳು, ಪೂರ್ವಗ್ರಹಗಳು, ಕೌಶಲಗಳು ಸಮ್ಮಿಶ್ರಗೊಂಡ ಶಿಕ್ಷಣರಂಗದಲ್ಲಿ ಯಾವುದನ್ನೇ ಆಗಲಿ ನಿಖರವಾಗಿ ಅಳೆಯುವ ಮಾನದಂಡಗಳನ್ನು



# ಇದೆ



ಕಾಡಿದೆ,
ಕನಸಿಗೆ ಮಾಡಿದೆ,
ಹಕ್ಕಿಗೊಂದು ಬೆಚ್ಚನೆ ಗೂಡಿದೆ;

ನದಿಯಿದೆ,
ಸಭ್ಯತೆಗೆ ತಳಹದಿ ಇದೆ,
ಸಾಧನೆಗೊಂದು ಹಾದಿ ಇದೆ;

ಮಳೆ ಇದೆ,
ಪಚ್ಚೆಯಂಥ ಬೆಳೆ ಇದೆ,
ಹೊಟ್ಟೆಯುರಿ ಕಳೆದಿದೆ;

ಮಗುವಿದೆ,
ಒಂದು ಜಗವಿದೆ,
ಅನುದಿನಕೊಂದು ಸೊಗವಿದೆ;

ಹೃದಯವಿದೆ
ಮಾನವತೆಗೆ ಉದಯವಿದೆ
ಬಾಳಿಗೊಂದು ಭರವಸೆ ಇದೆ.

**ಮಾಲತಿ ಪಟ್ಟಣಶೆಟ್ಟಿ**
ನಂ. ೩, ಗಣೇಶ ಅಪಾರ್ಟ್‌ಮೆಂಟ್ಸ್, ರಜತಗಿರಿ,
ಧಾರವಾಡ - ೫೮೦ ೦೦೪

ರೂಪಿಸುವುದು ಕಷ್ಟಸಾಧ್ಯ. ಯಾವುದು ಸಾಧನೆ ? ಯಾರ ದೃಷ್ಟಿಯಲ್ಲಿ ಸಾಧನೆ ?

ಶಿಕ್ಷಣ ರಂಗವೆಂಬುದು ಓಟದ ಕಣವಲ್ಲ; ಉತ್ಪನ್ನಗಳನ್ನು ಮಾರುಕಟ್ಟೆಗೆ ಒದಗಿಸುವ ಕೈಗಾರಿಕೆಯಲ್ಲ. ಹೀಗಾಗಿ ಇಲ್ಲಿ ತಾರತಮ್ಯ, ದ್ವೇಷ, ಅಸೂಯೆ ಹಾಗೂ ಕೀಳರಿಮೆಗಳಿಗೆ ಕಾರಣವಾಗುವ ಸ್ಪರ್ಧೆ ಅಪೇಕ್ಷಣೀಯವಲ್ಲ. ಪರಸ್ಪರ ಪ್ರೀತಿ-ವಿಶ್ವಾಸ, ಒಲುಮೆ-ನಲುಮೆಗಳಿಂದ, ಒಬ್ಬರಿಗೊಬ್ಬರು ಸಹಕರಿಸಿ ಸಹಯೋಗದಿಂದ ಕಲಿಯುವುದು, ಕಲಿಕೆಯ ಕ್ರಿಯೆ ಅರಳುವುದು ಮುಖ್ಯ. ನಿಜವಾದ ಕಲಿಕೆ ಪರಸ್ಪರ ಅರಿವು, ಅನುಭೂತಿ ಹಾಗೂ ಸಹಯೋಗವನ್ನು ಅವಲಂಬಿಸಿದೆಯೇ ಹೊರತು ಸ್ಪರ್ಧೆಯನ್ನಲ್ಲ.

ಖ್ಯಾತ ಭಾಷಾ ವಿಜ್ಞಾನಿ ಚೋಮ್‌ಸ್ಕಿ ಶಿಕ್ಷಣದಲ್ಲಿ ಸ್ಪರ್ಧೆಗಳ ಬಗ್ಗೆ ಬರೆದಿರುವ ಮಾತುಗಳನ್ನು ಗಮನಿಸಿರಿ :

''ಸ್ಪರ್ಧೆ ಎಂಬುದು ಮಾನವ ಸಹಜ ಆಂತರಂಗಿಕ ಪ್ರವೃತ್ತಿ ಎಂದು ವಾದಿಸುವುದು ಅರ್ಥಹೀನ. ಪರೀಕ್ಷೆಗಳಲ್ಲಿ ಅಧಿಕ ದರ್ಜೆಗಳನ್ನು ಗಳಿಸಿ ಪರರನ್ನು ಹಿಂದಿಕ್ಕಿ ಪುರಸ್ಕಾರ ಗಳಿಸುವ ವ್ಯವಸ್ಥೆಯಿರುವ ಶಿಕ್ಷಣ ಕ್ಷೇತ್ರ ಸಮಾಜ-ವಿರೋಧಿ ವರ್ತನೆಯನ್ನು ರೂಪಿಸುತ್ತದೆ. ಇದು ಶಿಕ್ಷಣ ರಂಗಕ್ಕೆ ಭೂಷಣವಲ್ಲ. ಇಂಥ ವ್ಯವಸ್ಥೆಯಲ್ಲಿ ವಿದ್ಯಾರ್ಥಿಗಳು ಬೇರೆಯವರ ಸಾಧನೆಯನ್ನು ಕಂಡು ಸಂತಸಪಡುವುದಿಲ್ಲ; ಬದಲಾಗಿ ಅನ್ಯರನ್ನು ಅದುಮಿ ಕೆಳಕ್ಕೆ ತಳ್ಳಲು ಬಯಸುತ್ತಾರೆ. ಸ್ಪರ್ಧೆ ಎಂಬುದು ಮನುಷ್ಯನನ್ನು ರಾಕ್ಷಸನನ್ನಾಗಿಸುತ್ತದೆ.

''ನಿಜವಾದ ಶೈಕ್ಷಣಿಕ ಸಂದರ್ಭ ಸ್ಪರ್ಧಾತ್ಮಕವಾಗಿರಕೂಡದು. ಅಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯೂ ಸಾಧ್ಯವಾದಷ್ಟೂ ಉತ್ತಮವಾದುದನ್ನು ಸಾಧಿಸಲು ಉತ್ತೇಜನವನ್ನು ನೀಡಬೇಕು. ಒಂದು ವೇಳೆ ಹಾಗೆ ಮಾಡಲು ಸಾಧ್ಯವಾಗದಿದ್ದರೆ ವಿದ್ಯಾರ್ಥಿ ತನ್ನ ತಪ್ಪುಗಳನ್ನು ತಿದ್ದಿಕೊಂಡು ಮುಂದುವರಿಯಲು ಸಹಾಯಹಸ್ತ ನೀಡಬೇಕು. ಗ್ರೇಡ್‌ಗಳಿಗಾಗಿ ಸ್ಪರ್ಧೆ ಎಂಬ ಕಲ್ಪನೆಗೆ ಒತ್ತು ನೀಡಿದಾಗ ಶಿಕ್ಷಣದ ಮಟ್ಟ ಕುಸಿಯುತ್ತದೆ. ಒಟ್ಟಿಗೆ ಸಹಕರಿಸಿ ದುಡಿಯುವ, ಕಲಿಯುವ ಆವರಣಧಲ್ಲಿ ಪಕ್ಕದಲ್ಲಿ ಕುಳಿತವನನ್ನು ಮೀರಿಸುವ, ಹಿಂದಿಕ್ಕುವ ಪ್ರಯತ್ನ ಇರುವುದಿಲ್ಲ. ಸಮಾನ ಗುರಿ ಸಾಧನೆಗಾಗಿ ಅರಿತು ನಡೆಯುವ ಪ್ರಯತ್ನವಿರುತ್ತದೆ. ಶಿಕ್ಷಣ ಹಾಗೂ ಸಂಶೋಧನೆಯ ರಂಗದಲ್ಲಿ ಈ ದೃಷ್ಟಿ ಅತ್ಯಂತ ಧನಾತ್ಮಕವಾದುದು. ಇನ್ನೊಬ್ಬರ ಪ್ರಯತ್ನ, ಪ್ರಯೋಗಗಳು ನಾಶವಾಗಲಿ ಎಂದು ಹಾರೈಸುವುದು ವಿನಾಶಕಾರಿ ಪ್ರವೃತ್ತಿ''.

ಸೋಲಿನ ವಿಷವನ್ನು ನುಂಗಿ ನಗುವಿನ ಅಮೃತವನ್ನು ಮುಕ್ಕಳಿಸಲೆಂದು ಮಕ್ಕಳನ್ನು ಸ್ಪರ್ಧೆಗಳಿಗಾಗಿ ಸಜ್ಜುಗೊಳಿಸಬೇಕು. ಸೋಲನ್ನು ಸಹಿಸಿಕೊಳ್ಳುವ ಶಕ್ತಿ ಒದಗಲೆಂದು ಸ್ಪರ್ಧೆಗಳನ್ನು ಹಮ್ಮಿಕೊಳ್ಳಬೇಕು ಎಂದು ವಾದಿಸುವವರಿದ್ದಾರೆ. ಕಂಡವರ ಮಕ್ಕಳನ್ನು ಬಾವಿಗೆ ತಳ್ಳಿ ಬಾವಿಯ ಆಳ ಪರೀಕ್ಷಿಸುವ ಭೂಪರಿವರು. ತಮ್ಮ ಮಕ್ಕಳು ಸ್ಪರ್ಧೆಗಳಲ್ಲಿ ಗೆಲ್ಲಬೇಕೆಂದು ಇವರು ಬಯಸುತ್ತಾರೋ ? ಅಥವಾ ಸೋಲಿನ ಕಹಿ ಅನುಭವ ಗಳಿಸಲೆಂದೇ ಸ್ಪರ್ಧೆಗಳಿಗೆ ದೂಡುತ್ತಾರೋ ? ಇಂಥವರು ತಂತಮ್ಮ ಎದೆಮುಟ್ಟಿಕೊಂಡು ಉತ್ತರಗಳನ್ನು ಕಂಡುಕೊಳ್ಳಲಿ.

ಸ್ಪರ್ಧೆಗಳಲ್ಲಿ ಮಕ್ಕಳು ಭಾಗವಹಿಸುವುದರಿಂದ ಅವರ ಆತ್ಮಸಂಮಾನ ಕುಸಿಯುತ್ತದೆ, ಆತ್ಮವಿಶ್ವಾಸ ತಗ್ಗುತ್ತದೆ. ನೈಚ್ಯಾನುಸಂಧಾನ ಬಲಿಯುತ್ತದೆ. ಅಸೂಯೆ, ದ್ವೇಷ ಮುಂತಾದ ನಕಾರಾತ್ಮಕ ಭಾವನೆಗಳು ಬೆಳೆಯುತ್ತವೆ. ಇದು ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಗೆ ಮಾರಕ ಎಂದು ಶಿಕ್ಷಣ ತಜ್ಞರು ಸಾರುತ್ತ ಬಂದದ್ದರಿಂದಲೇ ಇಂದು ಹಲವರಿಗೆ ಹಾಗೆ ಅನ್ನಿಸುತ್ತಿದೆ. ಈ ಬಗೆಯ ವಿಚಾರಧಾರೆ ಕಂಡುಬಂದಿರುವುದಕ್ಕೆ ಶಿಕ್ಷಣ ತಜ್ಞರೇ ಹೊಣೆ ಎಂದು ವಿತಂಡವಾದ ಹೂಡುವವರೂ ಇದ್ದಾರೆ.

ಮನೋವಿಜ್ಞಾನಿಗಳು ಹಾಗೂ ಶಿಕ್ಷಣ ತಜ್ಞರು ಪ್ರಚುರಪಡಿಸುತ್ತಾ ಬಂದದ್ದರಿಂದ 'ಸ್ಪರ್ಧೆಗಳ ದುಷ್ಪರಿಣಾಮ'ದ ಬಗ್ಗೆ ಸಮಾಜದಲ್ಲಿ 'ಅನಪೇಕ್ಷಣೀಯ ಜಾಗೃತಿ' ಮೂಡಿದ್ದಲ್ಲ. ಅಸಮಬಲರ ನಡುವಿನ ಸ್ಪರ್ಧೆಗಳಿಂದಾಗಿ ಉದ್ಭವಿಸುತ್ತಿರುವ ಬಿಕ್ಕಟ್ಟುಗಳನ್ನು ಕಂಡು ಆ ಬಗ್ಗೆ ಮನೋವಿಜ್ಞಾನಿಗಳು ಹಾಗೂ ಶಿಕ್ಷಣವೇತ್ತರು ಸಾಮಾಜಿಕ ಅರಿವು ಮೂಡಿಸುವ ಪ್ರಯತ್ನಗಳನ್ನು ನಡೆಸಿದರು. ಮಾನವತಾವಾದಿ ಮನೋವಿಜ್ಞಾನಿಗಳು ಇರುವ ತನಕ ಶಿಸ್ತು, ಶಿಕ್ಷೆ ಹಾಗೂ ಸ್ಪರ್ಧೆಗಳ ಬಗೆಗೆ ಸಾಮಾಜಿಕ ಅರಿವು ಮೂಡಿಸುವ ಹಾಗೂ ಮಾನವೀಯ ಕಳಕಳಿ ಬೆಳೆಸುವ ಅಭಿಯಾನ ಮುಂದುವರಿಯಲಿದೆ. ಆತ್ಮರತಿಯಲ್ಲಿ ಬೀಗುವ ವಿತಂಡವಾದಿಗಳು ಈ ಅಭಿಯಾನವನ್ನು ತಡೆಯಲಾರರು !

**ಡಾ|| ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ|| ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು
ಉಡುಪಿ - ೫೭೬ ೧೦೨

# ಅಮೃತಸರ ಮತ್ತು ವಾಘಾ ಬಾರ್ಡರ್

ಡಾ॥ ಇಂದಿರಾ ಹೆಗ್ಗಡೆ

ಆ ದಿನ ನಾವು ಜೈಪುರ ರೈಲ್ವೇ ಸ್ಟೇಷನ್ ತಲುಪಿದಾಗ ರೈಲು ಹೊರಟೇ ಹೋಗಿತ್ತು. ತಮ್ಮ ಜೀವಮಾನದುದ್ದಕ್ಕೂ ಎಲ್ಲ ಕೆಲಸಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಾ ಬಂದಿರುವ ಹೆಗ್ಗಡೆಯವರ ಈ ತಪ್ಪಿನಿಂದ ನಾನು ಬೆಚ್ಚಿಬಿದ್ದೆ. ಇಷ್ಟು ದೊಡ್ಡ ತಪ್ಪು ಅವರಿಂದ ಹೇಗಾಯಿತು ಎಂಬ ಆತಂಕ. ಹೆಗ್ಗಡೆಯವರಂತೂ ಮೌನವಾಗಿ ಇದ್ದವರು ''ಏನು ಮಾಡುವುದು ? ಪ್ರವಾಸ ರದ್ದುಗೊಳಿಸಿ ಮರಳೋಣವೇ ಡೆಲ್ಲಿಗೆ ?'' ಎಂದರು. ಪ್ರಯಾಣ ರದ್ದು ಮಾಡಿದರೆ ಮುಂದೆ ಅದರ ನೋವು ಮಾಸದು. ''ಬಂದದ್ದೆಲ್ಲ ಬರಲಿ'' ಎಂದು ಮುಂದಡಿಯಿಡಲು ಯೋಚಿಸಿ ನಾನು ಬೇಡ ಎಂದೆ. ''ನಿಮಗೆ ತೊಂದರೆಯಾಗದಿದ್ದರೆ ಬಸ್ಸಿನಲ್ಲಿ ಪ್ರಯಾಣಿಸೋಣ'' ಎಂದೆ. ''ಬಸ್ಸಿನಲ್ಲಿ ಕಷ್ಟವಾಗಬಹುದು, ವಿಮಾನ ಸಿಗಬಹುದೆ ? ನಾಳೆಗೆ ?'' ಎಂದು ನಮ್ಮೊಂದಿಗೆ ಬಂದಿದ್ದ ಕಿರಿಯ ಮಿತ್ರ ಶ್ರೀಧರ ಶೆಟ್ಟಿಯವರನ್ನು ಕೇಳಿದರು. ಆತ ಗೊಂದಲದ ಸ್ಥಿತಿಯಲ್ಲಿ ಇದ್ದು ರೈಲ್ವೆಸ್ಟೇಷನ್‌ನಿಂದ ಸಂಬಂಧಪಟ್ಟವರನ್ನು ಸಂಪರ್ಕಿಸಲು ಪ್ರಯತ್ನಿಸಿದನಾದರೂ ''ಸ್ವಲ್ಪ ಸಮಯ ಬಿಟ್ಟು ದೂರವಾಣಿ ಮಾಡಿ'' ಎಂಬ ಉತ್ತರ ಬಂತು. ನನಗೆ ವಿಮಾನ ಪ್ರಯಾಣ ದುಬಾರಿಯಾಗಬಹುದು ಎಂಬ ಆತಂಕದ ಜೊತೆಗೆ ಸ್ವಲ್ಪ ಹೊತ್ತು ಕಾದರೆ ಬಸ್ಸುಗಳೆಲ್ಲ ಹೊರಟುಬಿಟ್ಟರೆ ಅಥವಾ ಆಸನ ಸಿಗದೆ ಹೋದರೆ ಎಂಬ ಕಳವಳ. ಹೆಗ್ಗಡೆಯವರೂ ಅದೇ ಯೋಚನೆಯಲ್ಲಿದ್ದರು. ಹೀಗಾಗಿ ನಾವು ಕೂಡಲೇ ಜೈಪುರದ ಬಸ್ ನಿಲ್ದಾಣ ತಲುಪಿದೆವು. ಖಾಸಗಿ ಬಸ್ಸುಗಳು ಆಗಲೇ ಹೊರಟುಹೋಗಿದ್ದವು. ಸರಕಾರಿ ಬಸ್ಸು ಲೂಧಿಯಾನದವರೆಗೆ ಮಾತ್ರ ಇತ್ತು. ಹೆಗ್ಗಡೆಯವರು ಪಂಜಾಬಿನಲ್ಲಿ ಹಲವು ವರ್ಷಗಳ ಕಾಲ ಇದ್ದವರು. ಈಗಲೂ ಪಂಜಾಬ್‌ನ ಬಗ್ಗೆ ಹಳೆಯ ಸಿಹಿ ನೆನಪುಗಳು ಅವರಲ್ಲಿ ಇವೆ. ಪಂಜಾಬ್ ತನ್ನದೇ ಊರು ಎನ್ನುವಂತೆ ''ಅಲ್ಲಿಯವರೆಗೆ ಹೋಗಲಿ ಆಮೇಲೆ ಪರವಾಗಿಲ್ಲ'' ಎಂದರು. ಆದರೆ ದೂರ ಪ್ರಯಾಣದ ಇಲ್ಲಿಯ ಬಸ್ಸುಗಳು ನಮ್ಮ ಬೆಂಗಳೂರು ನಗರ ಸಾರಿಗೆಯಷ್ಟೂ ಅನುಕೂಲಕರವಾಗಿಲ್ಲ. ಎಲ್ಲವೂ ೫ ಆಸನಗಳ ಹಳೆಯ ಬಸ್ಸುಗಳು. ರಾತ್ರಿ ಹತ್ತುಗಂಟೆಗೆ ಹೊರಡುವ ಬಸ್ಸು ಬೆಳಿಗ್ಗೆ ೧೧ ಗಂಟೆಯವರೆಗೆ ಲುಧಿಯಾನ ತಲುಪಬಹುದು ಎಂದ ನಿರ್ವಾಹಕ. ಒಲ್ಲೊ ಬಸ್ಸು ಪ್ರಯಾಣವನ್ನೂ ಇಷ್ಟಪಡದೆ ರೈಲಿನಲ್ಲಿ ಅಥವಾ ಕಾರಿನಲ್ಲಿ ಬೆಂಗಳೂರು ಮತ್ತು ಮಂಗಳೂರುಗಳ ಮಧ್ಯೆ ಓಡಾಡುವ ನಮಗೆ ಇದೊಂದು ಮರೆಯಲಾಗದ ಅನುಭವ! ಕೈತೋರಿಸಿದಲ್ಲೆಲ್ಲ ನಿಲ್ಲುತ್ತಿತ್ತು ಬಸ್ಸು. ಜನ ಹತ್ತುವುದು ಇಳಿಯುವುದು ನಡೆಯುತ್ತಿತ್ತು. ನಾವು ಇಲ್ಲಿಗೆ ಪರಕೀಯರು. ಆದರೆ ಸ್ಥಳೀಯರು ಯಾವ ಚಡಪಡಿಕೆ, ಗೊಣಗಾಟ ಇಲ್ಲದೆ ಕುಳಿತಿದ್ದರು. ಮುಂಜಾನೆ ಬೆಳಕು ಹರಿಯುವ ಹೊತ್ತಿಗೆ ಬಸ್ಸು ಪಾಣಿಪತ್ ದಾಟಿತು. ಇದೂ ಇತಿಹಾಸದ ಪುಟಗಳಲ್ಲಿ ಸೇರಿಹೋದ ಊರು. ಇಲ್ಲಿ ಬಸ್ಸು ನಿಲ್ಲಲಿಲ್ಲ. ಮುಂದೆ ೭ ಗಂಟೆಯ ಹೊತ್ತಿಗೆ ಕುರುಕ್ಷೇತ್ರ ತಲುಪಿದೆವು. ಕುರುಕ್ಷೇತ್ರದಲ್ಲಿ ''೧೦ ನಿಮಿಷ ನಿಲ್ಲುತ್ತದೆ. ಕಾಫಿ ಕುಡಿಯಿರಿ'' ಎಂದ ನಿರ್ವಾಹಕ. ಕುರುಕ್ಷೇತ್ರ ಯುದ್ಧ ನಡೆದಿತ್ತೋ ಇಲ್ಲವೋ ? ಬಾಲ್ಯದಿಂದಲೂ ಕುರುಕ್ಷೇತ್ರದ ಬಗ್ಗೆ ಕೇಳಿದ್ದ ನನಗೆ ಇಲ್ಲಿಯ ಮಣ್ಣನ್ನು ಮೆಟ್ಟುವುದೇ ರೋಮಾಂಚನವೆನಿಸಿತು. ಆದರೆ ನಮ್ಮ ದ್ವಾರಕೆಯ ಭೇಟಿಯಲ್ಲಿ ಗೋವಲನಾದ ಕೃಷ್ಣನ ಜಾತಿಯವರು ಹಾಗೂ ಗೋಪಿಕಾ ಸ್ತ್ರೀಯರ ಬಗ್ಗೆ ನಾನು ಪಡೆದ ಮಾಹಿತಿಯಂತೆ ಅವರು ಹಿಂದುಳಿದವರು. ಹಿಂದುಳಿದವರನ್ನು ದಲಿತರನ್ನು ಬುದ್ಧಿಹೀನರು ಕೊಳಕರು ಎಂದು ಭಾವಿಸುವ ಉಚ್ಚವರ್ಗದವರು, ಗೋವಲ ಜಾತಿಯ ಕೃಷ್ಣ ಈ ಮಣ್ಣಿನಲ್ಲಿ ನಿಂತು ಭಗವದ್ಗೀತೆಯನ್ನು ಬೋಧಿಸಿದ್ದನ್ನು ಒಪ್ಪುವುದು, ನಂಬುವುದು ಮಾತ್ರವಲ್ಲ ಅವನನ್ನೇ ದೇವರೆಂದು ಅವನಿಗೆ ಜನಿವಾರ ತೊಡಿಸಿ ಪೂಜಿಸುವುದು ಆಶ್ಚರ್ಯ ! ಗೋವಲರೆಲ್ಲರೂ ಕೃಷ್ಣ ತಮ್ಮವನೆಂದು ಹೆಮ್ಮೆ ಪಡುತ್ತಾರೆ. ಇದೇ ವಿಪರ್ಯಾಸ !

ಕುರುಕ್ಷೇತ್ರದಲ್ಲಿ ನಾವು 'ಮೈನೀರ್' (ತುಳು) ಇಳಿಸಿ ಕಾಫಿ ಕುಡಿದೆವು. ನಮ್ಮ ಬಸ್ಸು ಹೊರಟಿತು. ಲೂಧಿಯಾನದಲ್ಲಿ ಬಸ್ಸಿನಿಂದ ಇಳಿಯಲು ಸೂಚಿಸಿದ ನಿರ್ವಾಹಕ ಒಬ್ಬ ಸಜ್ಜನ ಸರದಾರ್‌ಜೀಯ ಬಳಿ ನಮ್ಮನ್ನು ಅಮೃತಸರ ಹೋಗುವ ಬಸ್ಸು ನಿಲ್ದಾಣ ತಲುಪಿಸಲು ವಿನಂತಿಸಿ ನಮಗೆ ಅವರ ಜೊತೆ ಹೋಗಲು ಸೂಚಿಸಿದ. ನಾವು ಅಲ್ಲಿಂದ ಅಮೃತಸರಕ್ಕೆ ಬಸ್ಸು ಹತ್ತಿ ಪ್ರಯಾಣ ಮುಂದುವರಿಸಿದೆವು. ಈಗ ಸ್ವಲ್ಪ ನೆಮ್ಮದಿ. ಇನ್ನು 'ಅಮೃತಸರವನ್ನು ನಮ್ಮ ರೈಲು ತಲುಪುವುದಕ್ಕಿಂತ ಮುಂಚೆ ತಲುಪಬಲ್ಲೆವು' ಎಂದು.

ಅಮೃತಸರದ ಬಸ್ಸು ನಿಲ್ದಾಣ ಬಹಳ ದೊಡ್ಡದಿದೆ. ಆದರೆ ಈ ದೊಡ್ಡ ನಿಲ್ದಾಣದಲ್ಲಿ ಐಷಾರಾಮಿ ಬಸ್ಸುಗಳೆ ಕಾಣದೆ ಹೋದುದು ಆಶ್ಚರ್ಯ ! ನಾವು ಲಗ್ಗೇಜು ಹಿಡಿದು ನಡೆದಾಗ ನಮ್ಮ ಬೆನ್ನು ಬಿದ್ದ ಸೈಕಲ್ ರಿಕ್ಷಾದವನು ತಾನು ನಮ್ಮ ಹೋಟೆಲ್‌ಗೆ ಕರೆದೊಯ್ಯುವುದಾಗಿ ಹೇಳಿದ. ಆದರೆ ಸೈಕಲ್ ರಿಕ್ಷಾದಲ್ಲಿ ಸಾಮಾನು ಹಾಕಿ ಈ ಬಿಸಿಲಲ್ಲಿ ಪ್ರಯಾಣ ಇಷ್ಟವಿಲ್ಲದೆ ನಿಂತಿದ್ದ ನಮ್ಮ ಬಳಿ ಬಂದ ಒಬ್ಬ ಸರ್‌ದಾರ್‌ಜೀ ತಾನು ಐವತ್ತು ರೂಪಾಯಿಗೆ ಹೋಟೆಲ್ ತಲುಪಿಸುವುದಾಗಿ ಹೇಳಿದ. ಆತನ ಸಹೋದ್ಯೋಗಿ, ''ಅವರು ಸೈಕಲ್ ರಿಕ್ಷಾದಲ್ಲಿಯೇ ಹೋಗಲಿ'' ಎಂದರೆ ಈತ ಕಿವಿಗೆ ಹಾಕಿಕೊಳ್ಳದೆ ನಯವಾಗಿ ನಮ್ಮನ್ನು ರಿಕ್ಷಾ ಹತ್ತಲು ಸೂಚಿಸಿದ. ಸ್ವಲ್ಪ ದೂರ ಹೋಗುತ್ತಾ ನಮ್ಮ ರಿಕ್ಷಾದೊಳಗೆ ಎಂಟು ಮಂದಿ ಮಹಿಳೆಯರನ್ನು ಹತ್ತಿಸಿದ. ಇವರೆಲ್ಲ ಆತನ ಬಂಧುಗಳೆಂದು ಸುಮ್ಮನಿದ್ದೆವು. ಗೋಲ್ಡನ್ ಟೆಂಪಲ್ ಮುಂದೆ ಗಾಡಿ ನಿಲ್ಲಿಸಲು ಅವರು ಸೂಚಿಸಿದರು. ಈತ ಅಲ್ಲಿ ಅವರನ್ನೆಲ್ಲ ಇಳಿಸಿ ಹಣ ಪಡೆದ. ಅದೂ ೧೦ ನಿಮಿಷಗಳ ಚೌಕಾಸಿ ಆಯಿತು. ನಮಗೆ ಸಿಟ್ಟು ಬರುತ್ತಿತ್ತು. ಜೈಪುರದ ಕೆಟ್ಟ ಅನುಭವದಿಂದ ಮನಸ್ಸು ಘಾಸಿಗೊಂಡಿದ್ದರಿಂದ ಇನ್ನೂ ಚೇತರಿಸಿಕೊಂಡಿಲ್ಲ. ಹೀಗಾಗಿ ನಾವು ಮೂಕ ಪ್ರೇಕ್ಷಕರಾಗಿ ಕುಳಿತೆವು. ಅವರು ಅತ್ತ ಹೋದಾಗ ನಮ್ಮನ್ನೂ ''ನೀವೂ ಇಳಿಯಿರಿ. ಇದೇ ಗೋಲ್ಡನ್ ಟೆಂಪಲ್'' ಎಂದ. ''ನಮಗೆ ಗೋಲ್ಡನ್ ಟೆಂಪಲ್ ಬೇಡ, ಹೋಟಲಿಗೆ ಹೋಗಿ ಮೊದಲು ವಿರಮಿಸಬೇಕು'' ಎಂದರು ಹೆಗ್ಗಡೆಯವರು. ''ಹೋಟೆಲ್ ಅಲ್ಲಿದೆ, ಹೋಗಿ'' ಎಂದ. ಆದರೆ ಅಲ್ಲೆಲ್ಲೂ ಹೋಟೆಲ್ ಕಾಣಲಿಲ್ಲ. ಬಳಿ ನಿಂತವರ ಹತ್ತಿರ ವಿಚಾರಿಸಿದೆವು. ''ಅಲ್ಲೇ ಇದೆ. ನಡಕೊಂಡು ಹೋದರೆ ಹತ್ತಿರ, ಇಲ್ಲವಾದರೆ ಗೋಲ್ಡನ್ ಟೆಂಪಲ್ ಸುತ್ತಿಹಾಕಿ ಬರಬೇಕು'' ಎಂಬ ಉತ್ತರ ಬಂತು. ''ಲಗ್ಗೇಜು ಹಿಡಿದು ನಾವು ನಡೆದು ಹೋಗಲು ಸಾಧ್ಯ



ಸ್ವರ್ಣ ಮಂದಿರ

ಇಲ್ಲ. ನೀನು ದಾರಿಯಲ್ಲಿ ಹತ್ತಿಸಿಕೊಂಡ ಪ್ರಯಾಣಿಕರಿಗಾಗಿ ಇಲ್ಲಿಗೆ ಬಂದೆ. ಮಂದಿರಕ್ಕೆ ಪ್ರದಕ್ಷಿಣೆ ಹಾಕಿ ಹೋದರೇನೂ ತೊಂದರೆಯಿಲ್ಲ. ನಮ್ಮನ್ನು ಹೋಟೆಲ್ ಬಳಿ ಬಿಡುವ ಕೆಲಸ ನಿನ್ನದು'' ಎಂದರು ಹೆಗ್ಗಡೆಯವರು. ಕೊನೆಗೂ ಮಂದಿರಕ್ಕೆ ಪ್ರದಕ್ಷಿಣೆ ಹಾಕಿ ಹೋಟೆಲ್ ಗಿಂತ ಹತ್ತಡಿ ದೂರ ನಿಲ್ಲಿಸಿ ಟ್ರಾಫಿಕ್ ಇದೆ ಇಳಿಯಿರಿ ಎಂದ. ಇಳಿಯುತ್ತಾ ಸುತ್ತು ಹಾಕಿ ಬಂದುದಕ್ಕೆ ಹೆಚ್ಚಿಗೆ ಹಣ ಬೇಕು ಎಂದ. ''ನಾವು ನಿಮ್ಮ ಗಾಡಿಯನ್ನು ಬಾಡಿಗೆಗೆ ಪಡೆಯುವಾಗ ದಾರಿಯಲ್ಲಿ ಪ್ರಯಾಣಿಕರನ್ನು ತುಂಬುವ ಮಾತಾಗಿರಲಿಲ್ಲ. ಅದೂ ಎಂಟು ಜನರನ್ನು ತುಂಬಿಸಿ ನಮ್ಮ ಮೈಮೇಲೆಲ್ಲ ಕುಳ್ಳಿರಿಸಿದಿಯಾ !'' ಎಂದಾಗ ''ನಿಮ್ಮ ಆಸನದಲ್ಲಿ ಅವರು ಕುಳಿತುಕೊಳ್ಳಲಿಲ್ಲ'' ಎಂದ. ಈಗ ಹೆಗ್ಗಡೆಯವರಿಗೆ ರೇಗಿತು. ''ನಾನು ಪಂಜಾಬಿನಲ್ಲಿ ಇದ್ದವ. ಪಂಜಾಬಿಗಳು ಸಜ್ಜನರು ಎಂದುಕೊಂಡಿದ್ದೆ. ನೀವು ಈ ರೀತಿ ಮೋಸ ಮಾಡುವುದೆ ? ನಾನು ಒಪ್ಪಿಕೊಂಡಷ್ಟೂ ನಿಮಗೆ ಕೊಡಬೇಕಾಗಿಲ್ಲ. ನೀವು ಆಗಲೇ ನಮ್ಮ ಜೊತೆಗೆ ಬಂದವರಿಂದ ಪಡೆದ ಹಣ ಎಷ್ಟೆಂದು ನನಗೆ ತಿಳಿದಿದೆ'' ಎಂದರು. ಆತ ಮೆತ್ತಗಾದ. ಕೊಟ್ಟದುಡ್ಡನ್ನು ಪಡೆದು ಗೊಣಗುಟ್ಟುತ್ತಾ ನಡೆದ.

ನಾವು ಸ್ನಾನಾದಿ ಮುಗಿಸಿದಾಗ ಸಮಯ ೨ ಗಂಟೆ. ಊಟವನ್ನು ಹೋಟೆಲಿಗೆ ತರಿಸಿಕೊಂಡೆವು. ವಾಘಾ ಬಾರ್ಡರ್‌ಗೆ ಹೋಗುವ ವ್ಯವಸ್ಥೆ ಆಗಬೇಕಲ್ಲ ಎಂದು ಹೋಟೆಲ್ ಮ್ಯಾನೇಜರ್‌ಗೆ ಕೇಳಿದಾಗ ಆತ ''ಸಹ ಪ್ರಯಣಿಕರೊಂದಿಗೆ ಟ್ಯಾಕ್ಸಿಯಲ್ಲಿ ತಲಾ ೧೦೦ ರೂ. ನಿಮಗೆ ಮಾತ್ರ ಟ್ಯಾಕ್ಸಿ ಬೇಕಾದರೆ ೮೦೦ ರೂ.'' ಎಂದ. ನಾವು ಎ.ಸಿ. ಗಾಡಿ ಬೇಡ ಎಂದಾಗ ನಮ್ಮಲ್ಲಿ ಇರುವುದೇ ಎ.ಸಿ. ಗಾಡಿ ಎಂದ. ಇನ್ನು ಅಪರಿಚಿತರ ನಾಡಿನಲ್ಲಿ ಸಹಪ್ರಯಾಣಿಕರ ಗಾಡಿ ಹುಡುಕಲೂ ಸುಮಾರು ದೂರ ಹೋಗಬೇಕು. ಹುಡುಕಿ ಹೋಗುವುದು ಸುಲಭವಲ್ಲ. ಅಲ್ಲದೆ ವಿಚಾರಿಸುವಷ್ಟು ತಾಳ್ಮೆ ಮತ್ತು ಸಮಯ ಇಲ್ಲ. ಆದ್ದರಿಂದ ಅವನು ಹೇಳಿದ ಬೆಲೆಗೆ ಸಮ್ಮತಿಸಿದೆವು. ೩ ಗಂಟೆಗೆ ಸಿದ್ಧರಾಗಿ ಎಂದ. ಮೂರು ಗಂಟೆಗೆ ನಮ್ಮ ಕೋಣೆಯಿಂದ ಸ್ವಾಗತ ಚಾವಡಿಗೆ ಬಂದಾಗ ಇಷ್ಟು ಬೇಗ ಬೇಡ ಎಂದ ಆಗ ಇದ್ದವ. ಮತ್ತೆ ೪.೫ಕ್ಕೆ ಬನ್ನಿ ಎಂದ. ೪.೫ಕ್ಕೆ ಸಿದ್ಧರಾಗಿ ಹೋದರೂ ಟ್ಯಾಕ್ಸಿ ಬಂದಿರಲಿಲ್ಲ.



ವಾಘಾ ಗಡಿಯಲ್ಲಿ

ನಾವು ವಾಘಾ ಸಕಾಲದಲ್ಲಿ ತಲುಪದೆ ಹೋದರೆ ಒಳಗೆ ಸ್ಥಳಾವಕಾಶ ಸಿಗದಿದ್ದರೆ ಎಂಬ ಆತಂಕ. ಬೇಗನೇ ಅಲ್ಲಿಗೆ ಹೋದರೆ ಆಸನ ಸಿಗುತ್ತದೆ ಎಂದಿದ್ದರು ಅಲ್ಲಿಗೆ ಹೋಗಿಬಂದಿದ್ದ ನನ್ನ ಗೆಳತಿ. ಕೊನೆಗೂ ಟ್ಯಾಕ್ಸಿ ಬಂತು. ಸ್ವಲ್ಪ ದೂರ ಹೋದ ನಮಗೆ ಪಂಜಾಬಿನ ಸೆಖೆ ಅಧಿಕವಾಯಿತು. ಡ್ರೈವರ್ ಎ.ಸಿ. ಹಾಕುವ ಸೂಚನೆ ಇಲ್ಲ. ಎ.ಸಿ. ಹಾಕಲು ಸೂಚಿಸಿದರೆ ಆತ ಹೌದು ಅಥವಾ ಇಲ್ಲ ಅನ್ನಲಿಲ್ಲ. ಮೂರನೆಯ ಬಾರಿ ಕೇಳಿದಾಗ ಟ್ರಾಫಿಕ್‌ನಲ್ಲಿ ಎ. ಸಿ. ಹಾಕಿ ಗಾಡಿ ಚಲಾಯಿಸಲು ಆಗುವುದಿಲ್ಲ ಎಂದ. ಟ್ರಾಫಿಕ್ ಮುಗಿದ ಮೇಲೆ ಹೇಳಿದಾಗ ಆಗಲೂ ಪ್ರತಿಕ್ರಿಯೆ ಇಲ್ಲ. ''ನಾವಿಬ್ಬರೂ ಕಾರು ಚಲಾಯಿಸುವವರೇ; ನಾವು ಎ.ಸಿ. ಗಾಡಿ ಹೇಳಿದ್ದೆವು'' ಎಂದಾಗ ''ನನಗೆ ಎ.ಸಿ. ತರಲು ಹೇಳಲಿಲ್ಲ. ಆದರೆ ಈ ವಿಷಯವನ್ನು ಹೋಟೆಲಿನಲ್ಲಿ ಹೇಳಬೇಡಿ'' ಎಂದನಾತ. ಸರಿ ಎಂದು ಕೊನೆಗೂ ನಾವು ವಾಘಾ ತಲುಪಿದಾಗ ಒಳಗಡೆ ಕುಳಿತುಕೊಳ್ಳಲು ಮಾತ್ರವಲ್ಲ, ಪ್ರವೇಶವೂ ಇಲ್ಲ. ಪ್ರವೇಶದ್ವಾರದಲ್ಲಿ ಜನವೋ ಜನ. ಮುಚ್ಚಿದ ಗೇಟ್‌ಗೆ ಗೋಡೆಯಂತೆ ನಿಂತವರು, ಇಣುಕಲೂ ಸಾಧ್ಯವಾಗದ ಸ್ಥಿತಿ. ಹೊರದ್ವಾರದಲ್ಲಿ ಮಹಿಳೆಯರಿಗೆ ಮೊದಲ ಆದ್ಯತೆ ನೀಡಿ ಒಳಗೆ ಕಳುಹಿಸಿದುದರಿಂದ ನಾನು ಬೇಗನೇ ಒಳಬಂದಿದ್ದೆ. ಆದರೆ ಜನಸಂದಣಿಯ ಸಂದಿನಿಂದಲೂ ವಾಘಾದ ಮೇಲೆ ಹಾರುವ ಬಾವುಟ ಕಾಣುತ್ತಿರಲಿಲ್ಲ. ''ಬೆಂಗಳೂರಿನಿಂದ ಇಲ್ಲಿಗೆ ಬಂದು ನಿರಾಶೆಗೊಂಡು ಹೋಗಬೇಕಾಯಿತಲ್ಲ! ಮೂರು ಗಂಟೆಗೆ ಬಂದಿದ್ದರೆ ಒಳಗೆ ಹೋಗಲು ಸಾಧ್ಯ ಇತ್ತು'' ಎಂದು ನಾನು ನೊಂದುಕೊಂಡು ಹೆಗ್ಗಡೆಯವರನ್ನು ಕಾಣಲು ಹಿಂದೆ ಹೆಜ್ಜೆ ಹಾಕಿದೆ. ನನ್ನ ಬಳಿ ಮೊಬೈಲ್ ಕೂಡ ಇರಲಿಲ್ಲ. ಮೊಬೈಲ್‌ನ್ನು ನಾನು ಕಾರಿನಲ್ಲಿಯೇ ಇಟ್ಟಿದ್ದೆ. ಅಷ್ಟರಲ್ಲಿ ಹೆಗ್ಗಡೆಯವರು ಪಕ್ಕದ ಗೇಟ್‌ನ ಮುಂದೆ ನಿಂತು ಒಳಗೆ ಪ್ರವೇಶ ಪಡೆಯಲು ಪ್ರಯತ್ನಿಸುತ್ತಿದ್ದರು. ಅದು ವಿ.ಐ.ಪಿ. ಗೇಟ್. ಬಾರ್ಡರ್ ಸೆಕ್ಯೂರಿಟಿ ಫೋರ್ಸ್ (ಬಿ.ಎಸ್.ಎಫ್.) ಕಚೇರಿಯಿಂದ ಅನುಮತಿ ಪತ್ರ ತಂದವರಿಗೆ ಮತ್ತು ಬಾರ್ಡರ್ ಸೆಕ್ಯೂರಿಟಿ ಫೋರ್ಸ್‌ನವರಿಗೆ ಈ ದ್ವಾರದಿಂದ ಒಳಗೆ ಹೋಗಲು ಅವಕಾಶ ಇದೆ. ನಮಗೆಲ್ಲ ಇದು ತಿಳಿದಿರಲಿಲ್ಲ. ತಿಳಿದಿದ್ದರೂ ಮೊದಲ ದಿನ ಅಥವಾ ಬೆಳಿಗ್ಗೆ ಇಲ್ಲಿಗೆ ಬಂದು ಅನುಮತಿ ಪಡೆಯುವುದು ದುಬಾರಿ (ಪ್ರಯಾಣ ವೆಚ್ಚ). ಹೆಗ್ಗಡೆಯವರ ಮುಂದೆ ಒಬ್ಬ ಸಮವಸ್ತ್ರದಲ್ಲಿ ಇದ್ದ ಸೈನಿಕ ಒಳಗೆ ಬಿಡಲು ಕೇಳಿಕೊಂಡಾಗ ''ಭಾನುವಾರ ದಯವಿಟ್ಟು ಯಾರೂ ಬರಬೇಡಿ. ಬೇರೆ ದಿನ ಆಗಿದ್ದರೆ ನಿಮ್ಮನ್ನು ವಿ.ಐ.ಪಿ. ಬಿಡಿ, ಬಾರ್ಡರ್ ಸೆಕ್ಯೂರಿಟಿಯವರ ಜೊತೆ ಕುರ್ಚಿ ಹಾಕಿ ಕೂರಿಸುತ್ತಿದ್ದೆ'' ಎಂದು ಅಸಹಾಯಕತೆಯನ್ನು ಪ್ರದರ್ಶಿಸಿದ. ನಾನು ಪೆಚ್ಚಾದೆ. ಆದರೂ ಹೆಗ್ಗಡೆಯವರು ಮೆತ್ತಗೆ ಒಬ್ಬ ಅಧಿಕಾರಿಯ ಬಳಿ ಹೋಗಿ ತನ್ನ ನಿವೃತ್ತ ಸೈನಿಕನ ಗುರುತಿನ ಚೀಟಿ ತೋರಿಸಿದರು. ''ಇಲ್ಲ ಸಾರ್, ಸಾಧ್ಯ ಇಲ್ಲ. ಆದರೂ ಆತನಿಗೆ ಕೇಳಿ ನೋಡಿ'' ಎಂದರೊಬ್ಬ ಸುಬೇದಾರ್. ಆಗ ಹೆಗ್ಗಡೆಯವರು ತಾನು ೧೯೬೫ರ ಯುದ್ಧದಲ್ಲಿ ಭಾಗವಹಿಸಿದ್ದೆ ಎಂದು ತನಗೂ ಮಿಲಿಟರಿಯ ಜೊತೆ ಇದ್ದ ಸಂಬಂಧವನ್ನು ತಿಳಿಸಿದರು. ಆ ಜೆ.ಸಿ.ಒ. ಹುದ್ದೆಯ ಅಧಿಕಾರಿಯು ಹವಾಲ್ದಾರ್‌ನ ಬಳಿ ಹೋಗಿ ''ಇವರು ನಿವೃತ್ತ ಸೈನಿಕರು. ೧೯೬೫ರ ಯುದ್ಧದಲ್ಲಿ ಭಾಗವಹಿಸಿದ್ದರಂತೆ'' ಎನ್ನುವಾಗ ಆತ ತಲೆ ಚಿಟ್ಟು ಹಿಡಿದವರಂತೆ ''ಇಲ್ಲ ಯಾರಿಗೂ ಸಾಧ್ಯ ಇಲ್ಲ'' ಎಂದ. ಹೆಗ್ಗಡೆಯವರತ್ತ ನೋಡಿ ''ಸಾರಿ. ನೀವೆಲ್ಲ ಭಾನುವಾರವೇ ಯಾಕೆ ಬರುತ್ತೀರಾ ? ಭಾನುವಾರ ಬರುವ ಇಷ್ಟೊಂದು ಜನಮಂದೆಯನ್ನು ನಾವು ಹೇಗೆ ನಿಭಾಯಿಸುವುದು'' ಎಂದ. ವಾಸ್ತವವಾಗಿ ಹೆಗ್ಗಡೆಯವರು ಯುದ್ಧ ನಿಂತ ಮೇಲೆ ಕೇಮ್ ಕರಣ್ ಯುದ್ಧಕ್ಷೇತ್ರಕ್ಕೆ ಹೋದವರು.

ನಾವು ನಿರಾಶರಾಗಿ ತೆಪ್ಪಗೆ ಒಂದು ಬದಿಯಲ್ಲಿ ನಿಂತೆವು. ನಾನು ಮರಳಿ ಹೋಗೋಣ ಎಂದೆ. ಹೆಗ್ಗಡೆಯವರು ಪ್ರತಿಕ್ರಿಯಿಸಲಿಲ್ಲ. ಅಧಿಕಾರಿಗಳು ಹವಾಲ್ದಾರನ ಬಳಿ ಬಿನ್ನವಿಸುವುದು, ಆತ ಸಾರಾಸಗಟಾಗಿ ತಿರಸ್ಕರಿಸುವುದು, ಇವೆಲ್ಲ ನೋಡಿ ನನಗೆ ಆಶ್ಚರ್ಯ ! ''ಆತ ಕಮಾಂಡರ್ ಅವರ ಕಾರ್ಯದರ್ಶಿ ಇರಬೇಕು. ಕಮಾಂಡರ್ ಇವನಿಗೆ ಅಧಿಕಾರ ನೀಡಿರುತ್ತಾರೆ. ಅವನೇ ಇಲ್ಲಿಯ ಇನ್‌ಚಾರ್ಜ್. ಹೀಗಾಗಿ ಎಲ್ಲರೂ ಅವನತ್ತ ಬೆರಳು ತೋರಿಸುತ್ತಾರೆ'' ಎಂದರು ಹೆಗ್ಗಡೆಯವರು. ಅಷ್ಟಾಗುವಾಗ ಪ್ರವೇಶ ನಿರಾಕರಿಸಿದ ವ್ಯಕ್ತಿ ನಮ್ಮತ್ತ ಓರೆನೋಟ ಬೀರಿದ. ಆತ ಕನ್ಯಾಕುಮಾರಿಯವ. 'ಹರಿಹರನ್' ಎಂದು ಆತನ ಹೆಸರು. ವಿ.ಐ.ಪಿ. ಗೇಟಿನಲ್ಲಿ ಜನ ಕಡಿಮೆಯಾದಾಗ ಹರಿಹರನ್ ನಮ್ಮನ್ನು ಕರೆದು ''ಬನ್ನಿ ನಾನು ಒಳಗೆ ಬಿಡುತ್ತೇನೆ. ಅಲ್ಲಿಗೆ ಹೋದ ಮೇಲೆ ಅವರು ಮರಳಿ ಕಳಿಸಿದರೆ ನಾನು ಜವಾಬ್ದಾರನಲ್ಲ'' ಎಂದ. ನಾವು ತಲೆಯಾಡಿಸಿದೆವು. ಅಷ್ಟೇ ಸಾಕಾಯಿತು ನಮಗೆ. ಅಬ್ಬ ಎಂದು ಉದ್ಗಾರ ತೆಗೆದು ನಾವು ದಾಪುಗಾಲಿಕ್ಕುತ್ತಾ ಓಡಿದೆವು. ರಾಷ್ಟ್ರಧ್ವಜ ಇಳಿಸುವ ಕ್ಷಣ ಕಳೆದರೆ ನಮ್ಮ ಎಲ್ಲ ಪ್ರಯತ್ನವೂ ವ್ಯರ್ಥ ! ಮಹಿಳೆಯರ ಸೆಕ್ಯೂರಿಟಿ ಚೆಕ್ ಬೇಗ ಮುಗಿದು ಬಿಡುಗಡೆಯಾಯಿತು. ಹೆಗ್ಗಡೆಯವರಿಗೆ ಒಂದೆರಡು ಪ್ರಶ್ನೆ ಕೇಳಿದಾಗ ನಾನು ಅವರಿಗಾಗಿ ಕಾಯಬೇಕಾಯಿತು. ಹೇಗೂ ಒಳಗೆ ಹೋಗಿ ವಿ.ಐ.ಪಿ. ಆಸನದಲ್ಲಿ (ಇದೂ ಕಾಂಕ್ರೀಟ್ ಮೆಟ್ಟಲುಗಳು. ವಿ.ಐ. ಪಿ. ಆಸನಗಳಲ್ಲಿ ಸಾರ್ವಜನಿಕರಿಗೆ ಪ್ರವೇಶ ಇಲ್ಲ.) ಕುಳಿತಾಗ ಏನೋ ನೆಮ್ಮದಿ. ಪಾಕಿಸ್ತಾನದತ್ತ ನೋಡಿದಾಗ ಏನೋ ಪುಳಕ. ಮುದುಡಿದ್ದ ಮನಸ್ಸು ಅರಳಿತು. ಪಾಕಿಸ್ತಾನಿ ಜನಸಮುದಾಯವನ್ನು ಮುಖಾಮುಖಿ ನೋಡುತ್ತಾ ಮನಸ್ಸು ಗುನುಗುನಿಸಿತು :

*ಅಖಂಡ ಭಾರತದಿ ಪಾಲು ಪಡೆದ ಬಂಧುಗಳೇ,*
*ನಿಮಗೂ ನಮಗೂ ಮಧ್ಯೆ*
*ಎದ್ದಿತಲ್ಲ ಮುಳ್ಳು ಬೇಲಿ ?*
*ಮುಟ್ಟಿದರೆ ಭಸ್ಮವಾಗುವ ವಿದ್ಯುತ್ ಬೇಲಿ !*
*ಒಂದೇ ತಾಯಿಯ ರಕ್ತವ ಹಂಚಿ*
*ಜನಿಸಿದವರು ನಾವಲ್ಲವೆ ?*
*ಎಳೆದರವರು ಬ್ರಿಟಿಷರು ಲಕ್ಷ್ಮಣರೇಖೆ.*
*ಶಕುನಿಯಂತಾಡುವರು ಅಮೆರಿಕದವರು*

*ಬೇಲಿಯಾಚೆ ನೀವು ಬೇಲಿಯೀಚೆ ನಾವು*
*ಕೀಳಬೇಕು ನಮ್ಮ ನಡುವಿನ ಬೇಲಿಯನ್ನು*
*ನಾವು ನೀವು ಒಂದಾಗಬೇಕು ಮುನ್ನಿನಂತೆ*
*ಸ್ವಾತಂತ್ರ್ಯಕ್ಕಾಗಿ ಹೋರಾಡಿದ ನಮ್ಮೆಲ್ಲರ ಹಿರಿಯರಂತೆ.*

ಆ ಕಡೆಯಿಂದ ಕೆಲವರು ಕೈ ಬೀಸುತ್ತಿದ್ದರು. ಇತ್ತಲಿಂದ ನಮ್ಮಲ್ಲೂ ಕೆಲವರು ಕೈಬೀಸಿದರು. ಅಲ್ಲಿ ಮಹಿಳೆಯರು ಪ್ರತ್ಯೇಕ ಕುಳಿತಿದ್ದರು. ಇಲ್ಲಿ ಸ್ತ್ರೀ ಪುರುಷ ಭೇದ ಇಲ್ಲದೆ ಕುಳಿತಿದ್ದರು. ಬೂರ್ಖಾ ಹಾಕಿದ ಮಹಿಳೆಯರ ಸಂಖ್ಯೆ ಕಡಿಮೆ ಇತ್ತು. ಹೆಚ್ಚಿನವರು ಅಲ್ಲಿಯ ಪ್ರಾದೇಶಿಕ ಉಡುಗೆ ಸಲ್ವಾರ್ ಕಮೀಜ್‌ನಲ್ಲಿ ಬಂದಿದ್ದರು. ತಲೆಯ ಮೇಲೆ ಪರದಾ ಇತ್ತು. ಬೂರ್ಖಾ ಹಾಕಿದವರೂ ತಮ್ಮ ಮುಖವನ್ನು ಪರದಾದ ಹಿಂದೆ ಮರೆ ಮಾಡಿರಲಿಲ್ಲ. ಎಲ್ಲರೂ ನಗು ನಗುತ್ತಾ ಹೆಮ್ಮೆಯಿಂದ ಬೀಗಿ ಕುಳಿತಿದ್ದರೂ ನಮ್ಮ ಮತ್ತು ಅವರ ನಡುವೆ ಇದ್ದಿರಬಹುದಾದ ಸುಮಾರು ೧೦೦ ಅಡಿ ಅಂತರದಿಂದ ಅವರ ಮುಖಭಾವವನ್ನು ಗುರುತಿಸುವುದು ಕಷ್ಟ. ಒಂದಾಗಿ ಬಾಳಬೇಕಾಗಿದ್ದ ಬಂಧುಗಳು ನಾವು ವೈರಿಗಳಂತೆ (?) ಕುಳಿತಿದ್ದೇವಲ್ಲಾ ಎಂದೆನಿಸಿದರೂ ವೈರತ್ವದ ಭಾವನೆ ನಮ್ಮವರಲ್ಲೂ ಇರಲಿಲ್ಲ, ಅವರ ಜನಗಳಲ್ಲೂ ಇರಲಿಲ್ಲ.

ನಮ್ಮಿಬ್ಬರ ರಾಷ್ಟ್ರ ಧ್ವಜಗಳನ್ನು ಇಳಿಸುವ ಮೊದಲು ನೆರೆದ ಆಸಕ್ತ ಸಾರ್ವಜನಿಕರ ಕವಾಯಿತು ಎರಡೂ ಕಡೆಯಿಂದಲೂ ನಡೆಯಿತು. ಭಾರತ ಪಾಕಿಸ್ತಾನದ ಹೆದ್ದಾರಿಯಲ್ಲಿ ಮಹಿಳೆಯರಿಗೆ, ವಿದ್ಯಾರ್ಥಿಗಳಿಗೆ ಭಾರತದ ರಾಷ್ಟ್ರ ಧ್ವಜ ಎತ್ತಿ ಹಿಡಿದು ಪಥಚಲನ ಮಾಡುವ ಅವಕಾಶ ದೊರೆಯಿತು. ಅತ್ತಕಡೆಯಿಂದಲೂ ಸಾರ್ವಜನಿಕರ ಪಥಸಂಚಲನ ಇತ್ತು. ಅವರಲ್ಲಿ ಮಹಿಳೆಯರ ಸಂಖ್ಯೆ ಗೌಣವಾಗಿತ್ತು. ಅನಂತರ ಎರಡೂ ಕಡೆಯಿಂದ ಭಾರತ ಮತ್ತು ಪಾಕಿಸ್ತಾನದ ಗಡಿ ಕಾವಲು ಪಡೆಯವರು ಕವಾಯಿತು ನಡೆಸಿದರು. ಇತ್ತ ಕಡೆಯಿಂದ 'ಬೋಲೋ ಭಾರತ್ ಮಾತಾಕಿ ಜೈ' ಎಂದರೆ ಅತ್ತ ಕಡೆಯಿಂದ 'ಬೋಲೋ ಪಾಕಿಸ್ತಾನ ಕೀ ಜೈ.' ಇತ್ತ 'ಹಿಂದೂಸ್ತಾನ್ ಜಿಂದಾಬಾದ್' ಎಂದರೆ ಅತ್ತ 'ಪಾಕಿಸ್ತಾನ ಜಿಂದಾಬಾದ್.' ಎರಡೂ ಕಡೆಯ ಸೈನಿಕರು ವೀರಾವೇಶದಿಂದ ಗುಡುಗುತ್ತಿದ್ದರು. ಭಾರತದ ಒಳಗೆ ಸಿವಿಲ್ ಉಡುಪಿನಲ್ಲಿದ್ದ ಸೈನಿಕ ''ನಿಮ್ಮ ಧ್ವನಿ ಪಾಕಿಸ್ತಾನಿಯರಿಗೆ ಕೇಳಬೇಕು'' ಎಂದು ಆ ಗದ್ದಲದ ನಡುವೆ ಸನ್ನೆಯಿಂದಲೇ ಸಭೆಯನ್ನು ಹುರಿದುಂಬಿಸುತ್ತಿದ್ದ.

ಕೊನೆಗೆ ಎರಡೂ ಕಡೆಯಿಂದ ಮುಚ್ಚಿದ್ದ ದ್ವಾರಗಳ ಬೀಗ ತೆರೆಯಲ್ಪಟ್ಟಿತು. ಭಾರತ ಪಾಕಿಸ್ತಾನ ಒಂದಾದ ಆನಂದ ? ಒಡೆದ ಮನಸ್ಸುಗಳಿಗೆ, ಒಡೆದ ಹೃದಯಗಳಿಗೆ ಈ ತೆರೆದ ದಾರಿ ಏನೋ ಶುಭ ಸೂಚನೆ ನೀಡುತ್ತದೆಯೋ ಎಂಬ ಆಶಾಭಾವ ಮನದಲ್ಲಿ! ಎರಡೂ ಕಡೆಯ ಸೈನಿಕರು ತಮ್ಮ ತಮ್ಮ ರಾಷ್ಟ್ರ ಧ್ವಜಗಳ ದಾರವನ್ನು ಬಿಚ್ಚುವಾಗ ಭಾವಾವೇಶ ! ಎರಡೂ ಕಡೆಯವರು ಹುಚ್ಚೆದ್ದು ಕುಣಿಯುತ್ತಿದ್ದರು... ರಾಷ್ಟ್ರ ಧ್ವಜ ಎದುರು ಬದುರಾಗಿ ಇಳಿಯುತ್ತಾ ನೋಡುಗರಿಗೆ ಒಂದು ಹಂತದಲ್ಲಿ ಎರಡೂ ಧ್ವಜಗಳ ಮಿಲನವಾದಂತೆ ಕಂಡಿತು. ಆಗ ಮತ್ತೆ ಎರಡೂ ಕಡೆಯಿಂದಲೂ ಜೈಕಾರದ ಮೊಳಗು ! ಧ್ವಜಗಳು ಒಬ್ಬ ಸೈನಿಕನ ಕೈಗೆ ಬಂದಾಗ ಅದನ್ನು ಮತ್ತೊಬ್ಬ ಸೈನಿಕನ ನಿಡಿದಾದ ತೋಳಿನ ಮೇಲೆ ಎಳೆಯ ಹಸುಳೆಯನ್ನು ಇಡುವಂತೆ ಇಟ್ಟು ಪಥಚಲನ ಮಾಡುತ್ತಾ ವಿರುದ್ಧ ದಿಕ್ಕಿನತ್ತ ಒಬ್ಬರಿಗೊಬ್ಬರು ಬೆನ್ನುಹಾಕಿ ಚಲಿಸಿ ರಾಷ್ಟ್ರಧ್ವಜವನ್ನು ಒಳಗೆ ಕೊಂಡೊಯ್ದರು. ಅದುವರೆಗೆ ಮಾಯಾಲೋಕದಲ್ಲಿ ಇದ್ದಂತೆ ಇದ್ದವರು ಈಗ ವಾಸ್ತವ ಜಗತ್ತಿಗೆ ಮರಳಿದರು. ಎಲ್ಲರ ಮೊಗದಲ್ಲೂ ಧನ್ಯತಾ ಭಾವ !

ಧ್ವಜಗಳೆರಡೂ ಕೋಣೆ ಸೇರುತ್ತಿದ್ದಂತೆ ಕೆಂಪಡರಿದ ಸೂರ್ಯ ಪಾಕಿಸ್ತಾನದ ಕಡೆ ಕಂತುತ್ತಿದ್ದ. ಆ ಕಡೆಯ ಬಾನಿನಂಗಳದಿ ಚಿನ್ನದೋಕುಳಿ. ಈಗಾಗಲೇ ಧನ್ಯತೆಯಿಂದ ಕೂಡಿದ ಮನಸ್ಸುಗಳಿಗೆ ಇನ್ನೂ ಮುದ ನೀಡಿತು ಈ ಸುಂದರ ದೃಶ್ಯ.

ಪಾಕಿಸ್ತಾನದ ನೆಲ ಮೆಟ್ಟಿ ಅಥವಾ ಮುಟ್ಟಿ ಬರಬೇಕೆಂಬ ಬಯಕೆ ನನ್ನಲ್ಲಿ ಬಹಳ ದಿನಗಳಿಂದ ಇದೆ. ಆದರೆ ಗೇಟಿನ ಸುಮಾರು ೫೦ ಅಡಿ ದೂರ ಯಾರನ್ನೂ ಬಿಡುತ್ತಿರಲಿಲ್ಲ. ಬಹುಶಃ ರಾಷ್ಟ್ರಧ್ವಜವನ್ನು ಹಿಡಿದು ನಾನೂ ಓಡಿದ್ದರೆ ಸುಮಾರು ೨೦ ಅಡಿಗಳ ಅಂತರದ ದೂರದಿಂದ ಪಾಕಿಸ್ತಾನದ ಮಣ್ಣನ್ನಾದರೂ ನೋಡಬಹುದಿತ್ತು. ಮರಳಿ ಬರುವಾಗ ಬಾರ್ಡರ್ ಸೆಕ್ಯೂರಿಟಿಯ ಮಹಿಳೆಯ ಬಳಿ, ಪಾಕಿಸ್ತಾನದ ನೆಲವನ್ನು ಹತ್ತಿರದಿಂದ ಕಾಣಲು ಅವಕಾಶ ಇದೆಯೇ ಎಂದು ಕೇಳಿದೆ. ಇಲ್ಲ ಎಂದಳಾಕೆ. ಕಬ್ಬಿಣದ ತಂತಿ ಬೇಲಿಗೆ ಅತ್ಯಧಿಕ ಶಾಖದ ವಿದ್ಯುತ್ ಹಾಯಿಸಿದ್ದಾರೆ ಎಂದು ಹೇಳಿದಳು. ಪಾಕಿಸ್ತಾನದತ್ತ ಮುಖಮಾಡಿ ನಿಂತರೆ ಇಲ್ಲಿಯಂತೆ ಅಲ್ಲಿಯ ನಳನಳಿಸುವ ಹಸಿರು ಗೋಧಿಯ ಹೊಲಗಳು ಕಾಣುತ್ತಿದ್ದುವು. ಎರಡೂ ಪಂಜಾಬಿನ ನೆಲ. ಭಾಗವಾದರೇನು ? ಮಣ್ಣು ಭೂಮಿ ಅದೇ ತಾನೆ ?

ನಾವು ಮರಳಿ ಟ್ಯಾಕ್ಸಿ ನಿಲ್ದಾಣದತ್ತ ಬಂದೆವು. ನಮ್ಮ ಡ್ರೈವರ್ ಬಳಿ ಪಾಕಿಸ್ತಾನದ ಕಡೆಗೆ ಹೋಗುವ ಅವಕಾಶ ಇಲ್ಲವೇ ಎಂದೆ ? ''ನಮ್ಮ ತಾತನವರ ಕಾಲದಲ್ಲಿ ಓಡಿಯಾಡುತ್ತಿದ್ದರಂತೆ. ನಮ್ಮ ತಂದೆಯವರೂ ತಮ್ಮ ಬಾಲ್ಯ ಕಾಲದಲ್ಲಿ ಹಸು ಕುರಿಗಳೊಂದಿಗೆ ಪಾಕಿಸ್ತಾನದ ನೆಲದಲ್ಲೂ ಸುತ್ತಿ ಬರುತ್ತಿದ್ದರಂತೆ. ಸಾಮಾನ್ಯವಾಗಿ ಅಲ್ಲಿಯ ಮತ್ತು ಇಲ್ಲಿಯ ರೈತರು ಸರಕಾರಿ ನೆಲದಲ್ಲಿ ಪಶುಗಳನ್ನು ಮೇಯಿಸುತ್ತಿದ್ದರು. ಬಹುಶಃ ಬಾಂಗ್ಲಾ ಯುದ್ಧದ ಅನಂತರ ಮುಳ್ಳು ತಂತಿಗಳ ಬೇಲಿ ಹಾಕಿ ಯಾರೂ ಓಡಾಡದಂತೆ ತಡೆ ನಿರ್ಮಿಸಿದ್ದಾರೆ. ಬೇಲಿ ಹಾಕಿದ್ದೂ ಭಾರತವೇ. ಉಗ್ರರ ನುಸುಳುವಿಕೆ ತಪ್ಪಿಸಲು ಹಾಗೆ ಮಾಡುವುದು ಅನಿವಾರ್ಯವಾಯಿತು'' ಎಂದ.

ಮರುದಿನಕ್ಕೆ 'ಜಲಿಯನ್‌ವಾಲಾ ಬಾಗ್' ಮತ್ತು ಉಳಿದ ಕೆಲವು ಸ್ಥಳಗಳನ್ನು ನೋಡಲು ಟ್ಯಾಕ್ಸಿ ಬೇಕಾಗಬಹುದು ಎಂದು ಟ್ಯಾಕ್ಸಿಯವನಲ್ಲಿ ವಿಚಾರಿಸಿದೆವು. ''ನಾಳೆ ದೂರವಾಣಿ ಮಾಡಿ ನಾನು ಬರುತ್ತೇನೆ ಆದರೆ ಹೋಟೆಲ್‌ನವರಿಗೆ ಹೇಳಬೇಡಿ'' ಎಂದ. ನಮ್ಮನ್ನು ''ಟ್ರಾಫಿಕ್ ಮುಂದೆ ಹೆಚ್ಚಿದೆ. ನೀವು ನಡೆದೇ ಈ ದಾರಿಯಿಂದ ಹೋದರೆ ಅಮೃತಸರ ಗೋಲ್ಡನ್ ಟೆಂಪಲ್ ಸಿಗುತ್ತದೆ'' ಎಂದ. ನಾವು ವಿಚಾರಿಸುತ್ತಾ ಗೋಲ್ಡನ್ ಟೆಂಪಲ್ ಬಳಿ ಹೋದೆವು. ಹೆಗ್ಗಡೆಯವರು ಸುಸ್ತಾಗಿದ್ದೇನೆ ನೀನು ಮಂದಿರದ ಒಳಗೆ ಹೋಗಿ ಫೋಟೋ ಕ್ಲಿಕ್ಕಿಸಿ ಬಾ. ನಾನಿಲ್ಲಿಯೇ

# ಕನಸಿಗರು




**ರಂಗನಾಥ ಕಂಟನಕುಂಟೆ**
ನಂ. ೪೪, ೫ನೇ ಮುಖ್ಯರಸ್ತೆ
ಹೆಚ್.ವಿ.ಆರ್. ಬಡಾವಣೆ
ಮಾಗಡಿ ಮುಖ್ಯರಸ್ತೆ
ಬೆಂಗಳೂರು - ೫೬೦ ೦೭೯


**ಮ**ಗು ತನ್ನ ಓರಗೆಯವರಿಗೆ
ಕೈಯೊಳಗಿನ ತಿಂಡಿ ತೋರಿಸಿದಂತೆ
ಕನಸುಗಳ ದಾರಿ ತೋರಿಸಿ
ಶೂನ್ಯಗೋಳದಲಿ ಬಚ್ಚಿಟ್ಟು
ತೋರಿಸಿದ್ದು ಸ್ವರ್ಗ;
ಗೆದ್ದುಕೊಳ್ಳಲು
ಆಟದ ನಿಯಮಗಳು ಗುಟ್ಟೆಂದಿದೆ.

ನೆಚ್ಚಿದ ಕನಸಿಗರು
ಗಾಳಿ ಹಾದಿಯ ಸೋಪಾನ ಏರಿ ಏರಿ
ಏದುಸಿರಿಟ್ಟಿದ್ದಾರೆ ಹೈರಾಣಾಗಿ
ಶೂನ್ಯದಲಿ ಚಿಪ್ಪೊಡೆದು ಅವತರಿಸಲಾರದೆ
ಶೂನ್ಯದ ಬಸಿರಲ್ಲೇ ಸತ್ತಿವೆ
ಕನಸುಗಳು

ಕನಸುಗಳ ಚಿಪ್ಪೊಡೆಸುವ ಆವೇಶದಲಿ
ಬಿಸಿಲ್ಗುದುರೆಯ ಬೆನ್ಹತ್ತಿದಾಗ ಬಡಿದ ಬಾಲ;
ಊದಿದ ಕಣ್ಣು ಹೊತ್ತು ಕಂಡೂ ಕಾಣದ
ಎಟಕಿಯೂ ಎಟಕದ ಕೈಗಳ ನೆರವೂ.
ತ್ರಿಶಂಕು ಲೋಕದಿಂದ ತೊಪ್ಪನೆ ನೆಲಕ್ಕೆ ಬಿದ್ದು
ಮುರಿದ ಬೆನ್ನು ಮೂಳೆ.
ಯಮ ಯಾತನೆಯಲ್ಲಿಯೇ
ಸ್ವರ್ಗೀಯ ಕನಸಿಗರು
ದಹಿಸದ ನರಕದಲಿ ಬಿದ್ದಿದ್ದಾರೆ
ಅಂಗಾತ ನಾತ
ಶೂನ್ಯಗೋಳ ಇನ್ನೂ
ಸಾವಿರ ಸಾವಿರ ಮೈಲು ದೂರ.

ಹೆಬ್ಬಾಗಿಲ ಕಾವಲುಗಾರರೂ ನಗೆಗಡಲಲ್ಲಿ ತೇಲಿದ್ದಾರೆ.
ಒಳನುಗ್ಗುವವರ ಹೊರತಳ್ಳುವ ಹೊರೆಯಿಲ್ಲದೆ ದೊರೆ,
ನಿರುಮ್ಮಳನಾಗಿ ನಂದನದ ಕೋಮಲೆಯರ
ಬಿಸಿಯಪ್ಪುಗೆಯಲಿ ಸುಖ ನಿದ್ರಿಸಲು
ಎಲ್ಲ ಕೋಣೆಗಳ ಬಾಗಿಲುಗಳಿಗೆ ಅಗಣಿಯಿಕ್ಕಿಸಿದ
ಗಾಳಿ ಬೆಳಕು ಎಲ್ಲ ಕನಸುಗಳ ಹೊರತಳ್ಳಿ.

ಕುಳಿತುಕೊಳ್ಳುತ್ತೇನೆ ಎಂದು ಗೋಲ್ಡನ್ ಟೆಂಪಲ್ ಹೊರಸುತ್ತಿನಲ್ಲಿಯೇ ಗೋಡೆಗೊರಗಿ ನೆಲದ ಮೇಲೆ ಕುಳಿತರು. ನಾನು ಒಳಗೆ ಹೋಗಿ ವಿದ್ಯುದ್ದೀಪಗಳ ಬೆಳಕಿನಲ್ಲಿ ನೀರಿನ ಒಳಗಿಂದ ಪ್ರತಿಫಲಿಸುತ್ತಿದ್ದ ಚಿನ್ನದ ಗೋಪುರಗಳ ಫೋಟೋ ಕ್ಲಿಕ್ಕಿಸಿಕೊಂಡೆ. ಕೊಳದ ಆ ಭಾಗದ ನೀರು ಚಿನ್ನದ ನೀರಿನಂತೆ ಮಿರುಗುತ್ತಿತ್ತು. ಅಲ್ಲಿಂದ ಮರಳಿ ಹೋಟೆಲ್‌ಗೆ ಬಂದೆವು.

ಮರುದಿನ ೭ ಗಂಟೆಗೆ ಗೋಲ್ಡನ್ ಟೆಂಪಲ್ ದರ್ಶನಕ್ಕೆ ಹೋದೆವು. ''ನೋಡಬೇಕಾದ್ದೆ, ಆದರೆ ರಶ್ ಅಧಿಕ'' ಎಂದು ಮುನ್ನಾದಿನ ಹೋಟೆಲ್ ತೆರವುಗೊಳಿಸಿ ಹೋದ ಪ್ರವಾಸಿಯೊಬ್ಬರು ಹೇಳಿದ್ದರು. ಹೀಗಾಗಿ ಈ ದಿನ ಬೇಗ ಹೋದೆವು. ಒಳಗೆ ಹೋಗಲು ನೂಕುನುಗ್ಗಲು. ಸರದಿಯ ಸಾಲು ಒಂದು ಹಂತದಿಂದ ಮಾತ್ರ. ಅವರು ಕಟ್ಟಿದ ಬ್ಯಾರಿಕೇಡ್ ಒಳಗೆ ಹೋಗಲು ನೂಕು ನುಗ್ಗಲು. ಬ್ಯಾರಿಕೇಡ್ ಒಳಗೆ ಗುಂಪಾಗಿ ಜನ ಸೇರಲು ಅವಕಾಶ ಇರುವುದರಿಂದ ಗರ್ಭಗುಡಿಯ ಒಳಗೆ ಹೋಗುವವರೆಗೆ ನೂಕು ನುಗ್ಗಲು. ಒಂದೇ ಸಾಲಿನ ಸರದಿ ಮಾಡಿದ್ದರೆ ಹೀಗಾಗುತ್ತಿರಲಿಲ್ಲ, ಇಲ್ಲಿ ಸ್ಥಳಾವಕಾಶ ಬೇಕಷ್ಟು ಇದೆ. ಆದರೆ ವ್ಯವಸ್ಥೆ ಸರಿ ಇರಲಿಲ್ಲ. ಆ ನೂಕು ನುಗ್ಗಲುಗಳಲ್ಲಿ ಕೆಲವರಿಗೆ ತಮ್ಮ ಮಡದಿಯರ ಚಿಂತೆ, ಅವರನ್ನು ಯಾರಾದರೂ ಮುಟ್ಟಿ ಆನಂದಿಸುವರೋ ಎಂದು. ಆದರೆ ಅಂತಹ ಕೊಳಕು ಮನಸ್ಸಿನವರು ಮೇಲ್ನೋಟಕ್ಕೆ ಅಲ್ಲಿ ಕಾಣುತ್ತಿರಲಿಲ್ಲ. ಮತ್ತೆ ಕೆಲವರಿಗೆ ತಮ್ಮ ಪ್ಯಾಂಟಿನ ಜೋಬಲ್ಲಿ ಇದ್ದ ಪರ್ಸ್‌ನ ಚಿಂತೆ. ಇಷ್ಟಿದ್ದರೂ ನನಗೆ ಆದ ಕಿರಿಕಿರಿಯೇ ಬೇರೆ. ನಮಗೆ ತುಳುನಾಡಿನವರಿಗೆ ತಲೆಯ ಮೇಲೆ ಸೆರಗು ಹೊದ್ದುಕೊಳ್ಳುವುದು ನಿಷೇಧ. ಅದು ವೈಧವ್ಯದ ಲಕ್ಷಣ. ತಲೆಯ ಮೇಲೆ ಸೆರಗು ಹಾಕುವುದನ್ನು 'ಮುಂಡೆ ಕೊಟ್ಟು' (ವಿಧವೆಯ ಮುಸುಕು) ಎನ್ನುತ್ತಾರೆ. ಇಂದಿರಾ ಗಾಂಧಿ ಪ್ರಧಾನ ಮಂತ್ರಿಯಾದಾಗ ನಮ್ಮ ಹಳ್ಳಿಯಲ್ಲಿ ''ವಿಧವೆಯನ್ನು ದೇಶದ ಪ್ರಧಾನ ಮಂತ್ರಿ ಮಾಡಿದ್ದಾರೆ. ಮುಂಡೆ ಕೊಟ್ಟು ಹಾಕಿ ಹಾಕಿ ದೇಶದ ಪಟ್ಟದಲ್ಲಿ ಕುಳಿತುಕೊಳ್ಳುವುದು ಅವಲಕ್ಷಣ'' ಎನ್ನುತ್ತಿದ್ದುದು ಇನ್ನೂ ನನ್ನ ಕಿವಿಯಲ್ಲಿ ಗುಂಯ್‌ಗುಡುತ್ತಿದೆ. ಭಾರತದ ಸಂಸ್ಕೃತಿ, ಸಂಪ್ರದಾಯದಲ್ಲಿ ಇರುವ ವೈವಿಧ್ಯತೆಯ ಬಗ್ಗೆ ನಮ್ಮ ಹಳ್ಳಿಯವರಿಗೆ ಮಾತ್ರವಲ್ಲ, ಈಗಿನ ನಗರದ ವಿದ್ಯಾವಂತ ಜನರಿಗೂ ಬಹಳ ಕಡಿಮೆ ತಿಳಿದಿದೆ. ವೈದಿಕ ಸಂಪ್ರದಾಯವೇ ಭಾರತೀಯ ಸಂಪ್ರದಾಯ ಎಂಬಂತೆ ಸಮೂಹ ಮಾಧ್ಯಮಗಳೂ ಬಿಂಬಿಸುತ್ತವೆ. ವೇದವೆಂದರೇನೆಂದು ತಿಳಿಯದ ಭಾರತದ ಅಸಂಖ್ಯಾತ ಜನರ ಅರಿವೇ ಇಲ್ಲ. ಹೀಗಾಗಿ ನಮ್ಮ ಹಳ್ಳಿಯವರು ಹೇಳಿದುದರಲ್ಲಿ ಆಶ್ಚರ್ಯವಾಗುವಂಥದೇನಿಲ್ಲ. ಅಮೃತಸರದ ಗೋಲ್ಡನ್ ಟೆಂಪಲ್ ಪ್ರವೇಶದ್ವಾರದಿಂದ ಇಲ್ಲಿಯವರೆಗೆ ಅನೇಕ ಜನರಿಂದ ''ಆಪ್ ಸಿರ್‌ಮೇ ಪರ್‌ದಾ ಡಾಲಿಯೇ'' ''ಆಪ್ ಸಿರ್‌ಮೇ ಪರ್‌ದಾ ಡಾಲಿಯೇ'' ಎಂದು ಮತ್ತೆ ಮತ್ತೆ ಕೇಳಿಸಿಕೊಳ್ಳಬೇಕಾಯಿತು. ಇಲ್ಲಿ ಇಡಿಯ ಉತ್ತರಭಾರತದಲ್ಲಿ ಎದೆಯನ್ನು ಸೆರಗಿನಿಂದ ಅಥವಾ ದುಪ್ಪಟ್ಟದಿಂದ ಮುಚ್ಚಿಲ್ಲವಾದರೆ ಅದು ಕ್ಷಮ್ಯ. ಆದರೆ ತಲೆಯ ಮೇಲಿನ ಸೆರಗು ಜಾರಿದರೆ ಅದು ಅಕ್ಷಮ್ಯ. ಆದ್ದರಿಂದ ಅವರ ಸಂಸ್ಕೃತಿಯನ್ನು ಗೌರವಿಸುವುದು ನನ್ನ ಧರ್ಮ ಎಂದು ನಾನು ತಲೆಯ ಮೇಲಿನ ಸೆರಗನ್ನು ಸೀರೆಯ ಪಿನ್ನಿನಿಂದ ಸಿಕ್ಕಿಸಿಕೊಂಡೆ. ಆ ನೂಕು ನುಗ್ಗಲಲ್ಲಿ ಒಂದು ಕೈಯಲ್ಲಿ ಕ್ಯಾಮರಾ ಹಿಡಿದು ತಲೆಯ ಮೇಲಿನ ಸೆರಗನ್ನು ರಕ್ಷಿಸುವುದೇ ಪ್ರಯಾಸ ಆಯಿತು. ನಮ್ಮ ಮಹಿಳೆಯರ ಎದೆಯ ಮೇಲಿನ ಸೆರಗು ಎಲ್ಲ ಸಂದರ್ಭದಲ್ಲಿ ಎದೆಗಂಟಿಕೊಂಡೇ ಇರುತ್ತದೆ. ಅದು ರೂಢಿಯಾಗಿದೆ. ಆದರೆ ತಲೆಯ ಮೇಲಿನ ಸೆರಗು ತುಂಟ ಹುಡುಗನಂತೆ ಕೆಳಗೆ ಜಿಗಿಯುತ್ತಿರುತ್ತದೆ. ಒಂದು ಹಂತದಲ್ಲಿ ಹೆಗ್ಗಡೆಯವರು ''ಸೆರಗನ್ನು ತಲೆಯ ಮೇಲೆ ಗಟ್ಟಿಯಾಗಿ ಹಿಡಿದುಕೋ'' ಎಂದರು ಗಡುಸಾಗಿ.

ನಾನು ಕೆಲವು ಗುರುದ್ವಾರ ನೋಡಿದ್ದೆ. ಎಲ್ಲ ದೇವಾಲಯಗಳ ಒಳಗೆ ಪವಿತ್ರ ಗ್ರಂಥ



ಜಲಿಯನ್‌ವಾಲ ಬಾಘ್ ಸ್ಮಾರಕದ ಬಳಿ ಲೇಖಕಿ

ಪಠಣ. ಆದರೆ ಅಲ್ಲಿ ಸಾವಿನ ಮನೆಯಂತೆ ಮೌನ, ನೀರವತೆ ಇತ್ತು. ಇಲ್ಲಿ ಭಜನೆ ಇತ್ತು. ಭಕ್ತರ ಮತ್ತು ಪ್ರವಾಸಿಗರ ಸಂಖ್ಯೆಯೂ ಅಧಿಕ, ಜೊತೆಗೆ ವಿದೇಶಿಯರೂ ಸಾಕಷ್ಟು ಸಂಖ್ಯೆಯಲ್ಲಿದ್ದರು. ಪವಿತ್ರ ಗ್ರಂಥದ ಗರ್ಭಗುಡಿಗೆ ಎರಡು ಬಾಗಿಲ ಮೂಲಕ ಪ್ರವೇಶ ನೀಡಿದರು. ನಾವು ಮಹಡಿಯ ಎರಡನೆಯ ಮಹಡಿಗೂ ಹತ್ತಿ ಎಲ್ಲಾ ಮಗ್ಗುಲುಗಳಿಂದಲೂ ದೇವಾಲಯವನ್ನು ಮತ್ತು ಅದರ ಪರಿಸರವನ್ನು ನೋಡಿದೆವು. ಬಹಳ ದಿನಗಳ ಕನಸು ನನಸಾದ ಸಂದರ್ಭ ಇದು. ಹೆಗ್ಗಡೆಯವರು ನನ್ನನ್ನು ಬಳಿ ಕರೆದು ಮೆತ್ತಗೆ ಹೇಳಿದರು. ''ನೋಡು ಆಕೆಯ ಸೊಂಟಕ್ಕೆ ಚಾಕು ಕಟ್ಟಿದ್ದಾರೆ.'' ''ಅಂತಹುದು ಬೇರೆ ಕೆಲವು ಮಹಿಳೆಯರಲ್ಲೂ ನಾನು ನೋಡಿದೆ'' ಎಂದೆ. ಹೆಗ್ಗಡೆಯವರು ಕುತೂಹಲ ತಾಳಲಾರದೆ ಒಬ್ಬಾಕೆ ತರುಣಿಯಲ್ಲಿ ''ಅದೇಕೆ ಕೆಲವು ಮಹಿಳೆಯರು ಸೊಂಟಕ್ಕೆ ಚಾಕು ಕಟ್ಟುವುದು'' ಎಂದರು. ''ಅದು ಚಾಕು ಅಲ್ಲ ಕಿರ್ಫಾನಿ'' ಎಂದ ಆಕೆ ಬಳಿಯಲ್ಲಿ ಹೆಗ್ಗಡೆಯವರನ್ನು ಕೂರಿಸಿ ವಿವರಣೆ ನೀಡಿದಳು. ಅದು ನಮ್ಮ ಧರ್ಮದ ಸಂಕೇತ ಎಂದಳು. ಹಾಗಾದರೆ ನೀನೇಕೆ ಕಟ್ಟಿಕೊಂಡಿಲ್ಲ ಎಂದು ಹೆಗ್ಗಡೆಯವರು ಮರು ಪ್ರಶ್ನೆ ಹಾಕಿದಾಗ ಅಲ್ಲಿಗೆ ಬಂದ ಹಿರಿಯ ಮಹಿಳೆಯರನ್ನು ತೋರಿಸಿ ''ನೋಡಿ ಇವರು ಕಟ್ಟಿದ್ದಾರೆ. ನಾನು ಮಾತ್ರವಲ್ಲ ಇವರ ಮಗ ನನ್ನ ಗಂಡನೂ ಕಟ್ಟಿಕೊಂಡಿಲ್ಲ. ನಮ್ಮ ಧಾರ್ಮಿಕ ವಿಧಿಯಂತೆ ಅಮೃತಸೇವನೆ ಮಾಡಿದವರು ಮಾತ್ರ ಕಿರ್ಫಾನಿ ಕಟ್ಟಿಕೊಳ್ಳುತ್ತಾರೆ'' ಎಂದಳಾಕೆ.

ನಾವು ದೇವಾಲಯದಿಂದ ಹೊರಸುತ್ತಿಗೆ ಬಂದು ಅಲ್ಲಿಯ 'ಲಂಗರು'( ಊಟ ನೀಡುವ ಸ್ಥಳ)ನಲ್ಲಿ ನೀಡಿದ ಕೇಸರಿಬಾತ್ ಮತ್ತು ಬ್ರೆಡ್ ತಿಂದು ಜಲಿಯನ್‌ವಾಲಾ ಬಾಗ್ ನೋಡಲು ಹೊರಟೆವು. ಅದು ಸಮೀಪದಲ್ಲಿಯೇ ಇದೆ, ಆಟೋರಿಕ್ಷಾದ ಅಗತ್ಯ ಇಲ್ಲ, ನೀವು ನಡೆದೇ ಹೋಗಿ ಎಂದರು, ಅಲ್ಲಿಯವರು. ಮೊದಲನೆಯ ದಿನ ನಮ್ಮನ್ನು ಟ್ಯಾಕ್ಸಿಯಿಂದ ಇಳಿಸಿದ್ದು ಜಲಿಯನ್‌ವಾಲಾ ಬಾಗ್‌ನ ಮುಂದೆಯೇ ಎಂದು ಈಗ ಗೊತ್ತಾಯಿತು ! ನಾವು ಬಾಗ್‌ನ ಒಳಗಡೆ ಹೋದೆವು. ಸೆಕ್ಯೂರಿಟಿ ಚೆಕ್ಕಿಂಗ್ ಇತ್ತು. ''ನಾವಿಂದು ಏನು ನೋಡಿದರೂ ಅಂದಿನ ಕ್ರೌರ್ಯವನ್ನು ಅನುಭವಿಸಿದವರಿಗೆ ಶ್ರದ್ಧಾಂಜಲಿ ಸಲ್ಲಿಸಿದಂತೆಯೂ ಆಗದು'' ಎಂದು ನೊಂದುಕೊಂಡೆವು.

ಒಂದೆಡೆ ಅಮರಜ್ಯೋತಿಯೂ ಉರಿಯುತ್ತಿತ್ತು. ಮತ್ತೊಂದೆಡೆ ಸ್ವಾತಂತ್ರ್ಯಪ್ರೇಮಿಗಳ ಹೆಣಗಳ ರಾಶಿಯನ್ನು ಗರ್ಭೀಕರಿಸಿಕೊಂಡ ಬಾವಿಯು ಶವಗಳ ಕಥೆ ಹೇಳುತ್ತಿತ್ತು. ಅದಕ್ಕೆ ಕಬ್ಬಿಣದ ಜಾಲರಿ ಹಾಕಿದ್ದರು. ಬಾವಿಯಲ್ಲಿ ನೀರಿತ್ತು. ಪಕ್ಕದ ಗೋಡೆಯ ಮೇಲೆ ಬಂದೂಕಿನಿಂದ ಸಿಡಿದ ಗುಂಡುಗಳ ತೂತುಗಳು ಈಗಲೂ ಇವೆ. ಒಂದೆಡೆ ಸ್ವಾತಂತ್ರ್ಯ ಜ್ಯೋತಿ ಉರಿಯುತ್ತಲೇ ಇದೆ. ಅಂದಿನ ನೆನಪಿನಲ್ಲಿ ಸ್ಮರಣ ಸ್ತಂಭವೂ ಎದ್ದಿದೆ.

ಛಾಯಾಚಿತ್ರಗಳ ಮ್ಯೂಸಿಯಂ ಕೂಡ ಇದೆ. ಸ್ವಾತಂತ್ರ್ಯ ಹೋರಾಟಕ್ಕೆ ಮತ್ತು ಅಂದಿನ ಹತ್ಯಾಕಾಂಡಕ್ಕೆ ಸಂಬಂಧಿಸಿದ ಛಾಯಾಚಿತ್ರಗಳು ಇವೆ.

ಆಟೋರಿಕ್ಷಾದಲ್ಲಿ ಕುಳಿತು ಕಾಳಿಮಾ ಗುಡಿಯನ್ನು ನೋಡಲು ಹೋದೆವು. ಅದೂ ಅಮೃತಸರದ ಗೋಲ್ಡನ್ ಟೆಂಪಲ್‌ನಂತೆ ಇರುವ ಅದಕ್ಕಿಂತ ಚಿಕ್ಕ ಮಂದಿರ. ಇಲ್ಲಿ ಮೂರು ಗರ್ಭಗುಡಿಗಳಿವೆ. ಚಿನ್ನದ ಗೋಪುರಗಳಿದ್ದು ಕೆರೆಯ ಮಧ್ಯೆ ಕಟ್ಟಲ್ಪಟ್ಟಿದೆ.

ಡಾ॥ ಇಂದಿರಾ ಹೆಗ್ಗಡೆ
ನಂ ೬. ಕೃಷ್ಣಾ ರೆಸಿಡೆನ್ಸಿ, [illegible] ಅಡ್ಡರಸ್ತೆ, ಅಮರಜ್ಯೋತಿನಗರ, ವಿಜಯನಗರ, ಬೆಂಗಳೂರು - ೪೦

# ಬೆಲೆ ಏರಿಕೆ ಮತ್ತು ಸರಕಾರೀ ನಿರ್ಲಕ್ಷ್ಯ!

ಇವತ್ತು ಇಡೀ ದೇಶ ಆಹಾರದ ಅಭಾವ ಮತ್ತು ಬೆಲೆಯೇರಿಕೆಯಿಂದ ತತ್ತರಿಸುತ್ತಿದ್ದರೂ ಯು.ಪಿ.ಎ. ಸರಕಾರ ಮಾತ್ರ ಕಡಲ ನಡುವಿರುವ ಕಲ್ಲುಬಂಡೆಯಂತೆ ಕೂತುಬಿಟ್ಟಿದೆ. ಅದಕ್ಕೆ ನಾಡಿನ ದಲಿತರ, ರೈತರ, ಕೂಲಿಕಾರ್ಮಿಕರ ಮತ್ತು ಕೆಳ ಮಧ್ಯಮ ವರ್ಗದವರ ಹಸಿವಿನ ಸಮಸ್ಯೆಗಿಂತ ಚಂದ್ರಯಾನ, ಪೋಖ್ರಾನ್ ಅಣ್ವಸ್ತ್ರ ಪರೀಕ್ಷೆಯ ಮರಣೋತ್ತರ ಪರೀಕ್ಷೆ, ಅರುಣಾಚಲಕ್ಕೆ ದಲೈಲಾಮ ಭೇಟಿ ನೀಡಬೇಕೇ ಬೇಡವೇ ಎಂಬಂತಹ ವಿಷಯಗಳೇ ಮುಖ್ಯವಾಗಿವೆ. ಕಳೆದ ಸಂಸತ್ತಿನ ಚುನಾವಣೆಯಲ್ಲಿ ತಾನು ಮಾತಾಡಿಸಿ, ಮತ ಹಾಕಿಸಿಕೊಂಡ 'ಆಮ್‌ಆದ್ಮಿ' (ಶ್ರೀಸಾಮಾನ್ಯ)ಯನ್ನು ಅದು ಮರೆತಿದೆ.

ಆಹಾರ ಸಂಬಂಧಿತ ಹಣದುಬ್ಬರ ಕೈ ಮೀರುತ್ತಿದ್ದರೂ, ಬೆಲೆ ನಿಯಂತ್ರಣದ ಬಗ್ಗೆಯಾಗಲಿ, ಕಳ್ಳದಾಸ್ತಾನು ಮಾಡುವ ವರ್ತಕರ ಬಗ್ಗೆಯಾಗಲಿ, ಆಹಾರ ಪದಾರ್ಥಗಳ ಆಮದು ರಫ್ತು ನೀತಿಯ ಬಗ್ಗೆಯಾಗಲಿ ಯು.ಪಿ.ಎ. ತಲೆಕೆಡಿಸಿಕೊಂಡಂತೆ ಕಾಣುತ್ತಿಲ್ಲ. ಸರಕಾರ ಜಾಗತೀಕರಣದ ಪರವಾಗಿನ ಆರ್ಥಿಕ ನೀತಿಯನ್ನು ಅನುಸರಿಸುತ್ತಿರುವುದೇ ಈ ಎಲ್ಲ ಸಮಸ್ಯೆಗಳಿಗೆ ಮೂಲ ಕಾರಣವಾಗಿದೆ. ಕಡು ಬಡವನೂ ಉಪಯೋಗಿಸುವಂತಹ ಸಾಮಾನ್ಯ ದರ್ಜೆಯ ಅಕ್ಕಿಯ ಬೆಲೆ ಮೂವತ್ತೈದು ರೂಗಳನ್ನು ದಾಟಿದೆ. ತೊಗರಿ ಬೇಳೆ ಕೆ.ಜಿ.ಗೆ ನೂರನ್ನು ದಾಟಿದೆ. ಸಾಮಾನ್ಯ ಮನುಷ್ಯನ ದೈನಂದಿನ ಪಾನೀಯಕ್ಕೆ ಬೇಕಾದಂತಹ ಸಕ್ಕರೆಯ ಬೆಲೆ ನಲವತ್ತು ರೂಪಾಯಿಯ ಅಂಚಿನಲ್ಲಿದೆ. ಅಷ್ಟೆಲ್ಲಾ ಯಾಕೆ -ಬಡವನೊಬ್ಬ ತಿನ್ನಬಹುದಾದ ಹಣ್ಣಾದ, ಬಾಳೆಹಣ್ಣಿನ ಬೆಲೆ ಕೆ.ಜಿ.ಗೆ ಇಪ್ಪತ್ತೈದು (ಒಂದಕ್ಕೆ ಎರಡರಿಂದ ಮೂರು ರೂಪಾಯಿ) ರೂಪಾಯಿಗೆ ಏರಿದೆ.

ದೇಶದ ಒಟ್ಟು ಜನಸಂಖ್ಯೆಯ ಶೇಕಡ ಅರವತ್ತಕ್ಕೂ ಅಧಿಕವಿರುವ ದಲಿತರು, ಕೂಲಿಕಾರ್ಮಿಕರು, ಕೆಳಮಧ್ಯಮ ವರ್ಗದವರು ಕ್ಷಣ-ಕ್ಷಣಕ್ಕೂ ಏರುತ್ತಿರುವ ಆಹಾರ ಪದಾರ್ಥಗಳ ಬೆಲೆ ಏರಿಕೆಯ ಬಿಸಿಗೆ ಸುಟ್ಟುಹೋಗುತ್ತಿದ್ದಾರೆ.

ಕಳೆದ ವರ್ಷದ ಈ ತಿಂಗಳ ವೇಳೆಗೆ ಹೋಲಿಸಿದಲ್ಲಿ ಬೆಲೆಯೇರಿಕೆಯ ಪ್ರಮಾಣ ಶೇಕಡ ಇನ್ನೂರಕ್ಕೂ ಅಧಿಕವಾಗಿದೆ. ಒಂದು ಕಡೆ ಈ ತೆರನಾಗಿ ಬೆಲೆ ಏರುತ್ತಲೇ ಇದ್ದರೂ ಅದರ ಲಾಭವೇನೂ ರೈತನಿಗೆ ತಲುಪುತ್ತಿಲ್ಲ. ಬದಲಿಗೆ ಮಧ್ಯವರ್ತಿಗಳ ಪಾಲಾಗುತ್ತಿದೆ. ಬೆಳೆದ ಬೆಳೆಯನ್ನು ಕನಿಷ್ಠ ಬೆಲೆಗೆ ಮಾರಿ, ಆಹಾರ ಪದಾರ್ಥಗಳನ್ನು ಗರಿಷ್ಠ ಬೆಲೆಗೆ ಕೊಳ್ಳುವ ಅನಿವಾರ್ಯತೆಗೆ ರೈತ ಬಲಿಯಾಗುತ್ತಿದ್ದಾನೆ. ಕೃಷಿಗಾಗಿ ತಾನು ಮಾಡಿಕೊಂಡಿರುವ ಸಾಲ, ಹಾಗೆಯೇ ದೈನಂದಿನ ಜೀವನ ನಿರ್ವಹಣೆಗೆ ಮಾಡಿಕೊಂಡ ಸಾಲಗಳ ಬಲೆಗೆ ಸಿಲುಕಿರುವ ರೈತ ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ.

ನಾನು ಮೇಲೆ ಹೇಳಿದ ವರ್ಗಗಳಲ್ಲದೆ ಕಡಿಮೆ ವೇತನದ ಮೂರು-ನಾಲ್ಕನೇ ದರ್ಜೆಯ ಪ್ರಾಮಾಣಿಕ ನೌಕರರು ಸಹ ಬೆಲೆಯೇರಿಕೆಯ ಅಪಾಯದಲ್ಲಿ ನರಳುತ್ತಿದ್ದಾರೆ. ಪರಿಸ್ಥಿತಿ ಇಷ್ಟು ಹದಗೆಟ್ಟಿದ್ದರೂ ನಮ್ಮ ಕೃಷಿ ಸಚಿವರು ಮಾತ್ರ (ಸನ್ಮಾನ್ಯರು ನಮ್ಮ ದೇಶದ ಕ್ರಿಕೆಟ್ ಮಂಡಳಿಯ ಅಧ್ಯಕ್ಷರೂ ಹೌದು) ದೇಶದಲ್ಲಿ ಸಾಕಷ್ಟು ಆಹಾರದ ದಾಸ್ತಾನಿದೆಯೆಂದೇ ವಾದಿಸುತ್ತಿದ್ದಾರೆ.

ಆಹಾರ ಸಂಬಂಧಿತ ಹಣದುಬ್ಬರ ಕೈ ಮೀರುತ್ತಿದ್ದರೂ, ಬೆಲೆ ನಿಯಂತ್ರಣದ ಬಗ್ಗೆಯಾಗಲಿ, ಕಳ್ಳದಾಸ್ತಾನು ಮಾಡುವ ವರ್ತಕರ ಬಗ್ಗೆಯಾಗಲಿ, ಆಹಾರ ಪದಾರ್ಥಗಳ ಆಮದು ರಫ್ತು ನೀತಿಯ ಬಗ್ಗೆಯಾಗಲಿ ಯು.ಪಿ.ಎ. ತಲೆಕೆಡಿಸಿಕೊಂಡಂತೆ ಕಾಣುತ್ತಿಲ್ಲ. ಸರಕಾರ ಜಾಗತೀಕರಣದ ಪರವಾಗಿನ ಆರ್ಥಿಕ ನೀತಿಯನ್ನು ಅನುಸರಿಸುತ್ತಿರುವುದೇ ಈ ಎಲ್ಲ ಸಮಸ್ಯೆಗಳಿಗೆ ಮೂಲ ಕಾರಣವಾಗಿದೆ.

ಬಡವರ ಅಡುಗೆ ಮನೆಗೆ ಬಾರದ ಆ ದಾಸ್ತಾನು ಎಲ್ಲಿದೆಯೆಂದು ಸಾಕ್ಷಾತ್ ಅವರೇ ಹೇಳಬೇಕು. ಆದರೆ ವಸ್ತುಸ್ಥಿತಿಯಲ್ಲಿ ಆಹಾರಪದಾರ್ಥಗಳ ಬೇಡಿಕೆ ಮತ್ತು ಪೂರೈಕೆಯಲ್ಲಿ ಯಾವುದೇ ಸಮನ್ವಯತೆ ಕಾಣುತ್ತಿಲ್ಲ.

ಕಳೆದ ವರ್ಷವೇ ಇಂತಹದೊಂದು ಸ್ಥಿತಿ ಎದುರಾಗುವ ಬಗ್ಗೆ ಕೃಷಿ ಮತ್ತು ಆರ್ಥಿಕ ತಜ್ಞರು ಎಚ್ಚರಿಕೆ ನೀಡಿದ್ದನ್ನು ಸರಕಾರ ಗಂಭೀರವಾಗಿ ತೆಗೆದುಕೊಳ್ಳದಿದ್ದುದರ ಪರಿಣಾಮವಿದು.

ವಿಪರ್ಯಾಸವೆಂದರೆ ಸಣ್ಣಪುಟ್ಟದಕ್ಕೂ ಅಬ್ಬರಿಸುವ ವಿರೋಧ ಪಕ್ಷಗಳು ಆಹಾರದ ಅಭಾವ ಮತ್ತು ಬೆಲೆಯೇರಿಕೆ ಬಗ್ಗೆ ಮೌನವಹಿಸಿವೆ. ಸದಾ ರೈತರ ಬಗ್ಗೆ ಮಾತನಾಡುವ ಬಿ.ಜೆ.ಪಿ.ಯಂತಹ ಪಕ್ಷ ಬೆಲೆ ಏರಿಕೆಯೆನ್ನುವುದು ಒಂದು ಸಮಸ್ಯೆಯೇ ಅಲ್ಲವೆಂಬಂತೆ ಮೌನವಾಗಿದೆ. ಜೊತೆಗೆ, ತನ್ನ ಚುನಾವಣಾ ನಿಧಿಯನ್ನು ಭರಿಸುವ ಕಾಳಸಂತೆ ವರ್ತಕರ ಬಗ್ಗೆ ಚಕಾರವೆತ್ತದೆ ತಾನು ವರ್ತಕಪರ ಪಕ್ಷವೆಂಬುದನ್ನು ಸಾಬೀತುಪಡಿಸಿದೆ. ಅಲ್ಲದೆ, ಕಳೆದ ಚುನಾವಣೆಯಲ್ಲಿ ತನ್ನ ಸೋಲಿಗೆ ಕಾರಣವಾದ ಅಂಶಗಳ ಬಗ್ಗೆ, ನಾಯಕರುಗಳ ಬಗ್ಗೆ ಚರ್ಚೆ ನಡೆಸುತ್ತ ತಾನು ವಿರೋಧ ಪಕ್ಷವೆನ್ನುವುದನ್ನು ಸಹ ಮರೆತಂತಿದೆ.

ಇನ್ನು ಪ್ರಾದೇಶಿಕ ಪಕ್ಷಗಳು ಸಧ್ಯ ತಮ್ಮ ಅಸ್ತಿತ್ವವನ್ನುಳಿಸಿಕೊಂಡು ಮುಂದಿನ ಚುನಾವಣೆಗೆ ಯಾವ ಪಕ್ಷದೊಡನೆ ಹೋದರೆ ಲಾಭವೆಂಬ ಲೆಕ್ಕಾಚಾರಗಳಲ್ಲಿ ಮುಳುಗಿವೆ. ಪ್ರತಿಯೊಂದಕ್ಕೂ ಧರಣಿ, ಬಂದ್ ಮುಂತಾದ ಬೀದಿ ಬದಿ ಹೋರಾಟಗಳನ್ನು ಹಮ್ಮಿಕೊಳ್ಳುವ ಎಡಪಕ್ಷಗಳತ್ತ ನೋಡಿದರೆ, ಕಳೆದ ಚುನಾವಣೆಗಳ ಫಲಿತಾಂಶ ನೀಡಿದ ಆಘಾತದಿಂದ ಅವು ಚೇತರಿಸಿಕೊಂಡಂತೆ ಕಾಣುತ್ತಿಲ್ಲ.

ನಮ್ಮ ಮಾಧ್ಯಮಗಳು ಸಹ ಕಳೆದ ಕೆಲವು ತಿಂಗಳುಗಳಿಂದ ತಮ್ಮ ಮುಖಪುಟದ ಸುದ್ದಿ, ವರದಿಗಳಲ್ಲಿ 'ಹಂದಿಜ್ವರ'ವನ್ನೋ, ಕ್ರಿಕೆಟನ್ನೋ, ಪಾಕಿಸ್ತಾನಕ್ಕೆ ನೀಡುವ ಭೇಟಿಯನ್ನೋ ಗುರಿಯಾಗಿಟ್ಟುಕೊಂಡಿವೆ. ವಾಸ್ತವದಲ್ಲಿ ಈ ದೇಶದಲ್ಲಿ ಹಸಿವಿನಿಂದ, ಅಂದರೆ ಅಪೌಷ್ಟಿಕತೆಯಿಂದ ಸಾಯುತ್ತಿರುವ ಮಕ್ಕಳ ಸಂಖ್ಯೆಗೆ ಹೋಲಿಸಿದರೆ ಹಂದಿಜ್ವರದಿಂದ ಸತ್ತವರ ಸಂಖ್ಯೆ ತೀರಾ ಗೌಣ. ಆದರೆ ಮಾಧ್ಯಮಗಳು ಹಂದಿಜ್ವರಕ್ಕೆ ನೀಡುತ್ತಿದ್ದ ಪ್ರಚಾರಕ್ಕೆ ಕಾರಣ ಬಹುಶಃ ಅದರ ವಿದೇಶಿ ಮೂಲವಿರಬಹುದು.

ಹೀಗೆ ಸರಕಾರ, ವಿವಿಧ ರಾಜಕೀಯ ಪಕ್ಷಗಳು, ಮಾಧ್ಯಮಗಳು, ಎಲ್ಲದರಿಂದಲೂ ನಿರ್ಲಕ್ಷ್ಯಕ್ಕೆ ಗುರಿಯಾಗಿರುವ ಸಾಮಾನ್ಯ ಭಾರತೀಯ ಹಸಿವಿನಿಂದ ಸಾಯುವ ಕಾಲ ದೂರವಿದೆಯೆಂದು ತೋರುತ್ತಿಲ್ಲ. ಆದ್ದರಿಂದ ಹಸಿವು ಮನುಷ್ಯನಲ್ಲಿ ಉಂಟುಮಾಡಬಹುದಾದ ಹತಾಶೆ, ಅಸಹಾಯಕತೆ, ಹಾಗೂ ಅದರಿಂದ ಆತನೂ ಹಿಂಸೆಯತ್ತ ವಾಲಬಹುದಾದ ಅಪಾಯಗಳನ್ನು ಆದಷ್ಟು ಬೇಗ ಅರ್ಥಮಾಡಿಕೊಂಡು ಆತನ ಹಸಿವು ನೀಗಿಸುವ ಪ್ರಯತ್ನ ಮಾಡುವುದು ನಾಗರಿಕ ಸರಕಾರವೊಂದರ ಮೊದಲ ಆದ್ಯತೆಯಾಗಬೇಕು.

ಈ ದಿಸೆಯಲ್ಲಿ ಸರಕಾರ ಮತ್ತು ಸಂಬಂಧಿಸಿದ ನಾವೆಲ್ಲರೂ ಸೂಕ್ತ ಪರಿಹಾರವನ್ನು ಕಂಡುಹಿಡಿಯಬೇಕಾಗಿದೆ. ಇಲ್ಲದಿದ್ದಲ್ಲಿ ಮುಂದಿನ ಎಲ್ಲ ಪರಿಣಾಮಗಳಿಗೆ ನಾವೆಲ್ಲರೂ ಸಾಮೂಹಿಕವಾಗಿ ಹೊಣೆ ಹೊರಬೇಕಾಗುತ್ತದೆ.

**ಮಧು ರಂಗೇನಹಳ್ಳಿ**
ರಂಗೇನಹಳ್ಳಿ - ೫೭೭ ೧೪೪, ತರೀಕೆರೆ ತಾಲ್ಲೂಕು
ಚಿಕ್ಕಮಗಳೂರು ಜಿಲ್ಲೆ




# ವಾಸ್ತವಕ್ಕೆ ಹತ್ತಿರವಾದ ಬದುಕಿನ ವಿವರಗಳು




ಪ್ರಕಾಶನ : 'ಚೈತ್ರ - ಲಹರಿ'
ಸಾರಸ್ವತಪುರ, ಧಾರವಾಡ
ಪುಟ : ೧೧೬ (104+XII)
ಬೆಲೆ : ರೂ. ೬೦
ಮೊ. ಮುದ್ರಣ : ೨೦೦೭

**ಈ** ಕತೆಗಳಲ್ಲಿ ಪ್ರತಿಬಿಂಬಿತವಾಗಿರುವುದು ವಿಶಾಲವಾದ ಮಾನವೀಯ ಅಂತಃಕರಣದ ಬದುಕು ಮತ್ತು ಒಂದು ರೀತಿಯ ವಿಷಾದ ರಾಗದ ಮಿಡಿತ. ಕುಲಕರ್ಣಿಯವರು ಇವುಗಳನ್ನು ಸತ್ಯ ಕತೆಗಳೆಂದು ಕರೆದಿದ್ದಾರೆ. ಆದರೆ ಸತ್ಯ ಕತೆಗಳನ್ನೂ ಹಾಗೂ ಕಥಾಲೋಕದ ಇತರ ಕತೆಗಳನ್ನೂ ಗೆರೆ ಎಳೆದಂತೆ ಇಬ್ಭಾಗ ಮಾಡಿ ತೋರಿಸುವುದು ಅಷ್ಟು ಸರಿಯಲ್ಲ ಎಂಬುದು ನನ್ನ ವೈಯಕ್ತಿಕ ಅನಿಸಿಕೆ. ಯಾಕೆಂದರೆ ಎಲ್ಲ ಕತೆಗಾರರ ಕತೆಗಳಲ್ಲೂ ಕೂಡ ಕೆಲ ವಾಸ್ತವಾಂಶಗಳೂ ಇರಬಹುದು. ನಾವೆಲ್ಲ ಕತೆ ಬರೆಯುವ ಕ್ರಮಕ್ಕೂ, ಇವರು ಇಲ್ಲಿ ಕತೆ ಹೇಳಿರುವ ಕ್ರಮಕ್ಕೂ ನಾನು ಕಂಡುಕೊಂಡ ಒಂದು ಪ್ರಮುಖ ವ್ಯತ್ಯಾಸವೆಂದರೆ, ಇಲ್ಲಿ ಇವರು ಪ್ರತ್ಯಕ್ಷವಾಗಿ ಯಾವುದೇ ರೀತಿಯ ಕಥನ ತಂತ್ರಗಳೇ ಅಲ್ಲದೆ ಒಂದು ಬರಹದ ಆತ್ಮವನ್ನೇ ಓದುಗರಿಗೆ ನೀಡಲು ಪ್ರಯತ್ನಿಸುತ್ತಾರೆ. ನಾವೆಲ್ಲ ಬಹುಶಃ ಆ ಆತ್ಮದ ಸುತ್ತ ಒಂದು ಶರೀರವನ್ನು ಹೆಣೆದು ಕತೆಯನ್ನು ನಿರೂಪಿಸುತ್ತಿರಲೂಬಹುದು ಎನಿಸುತ್ತದೆ.

ಪುಟಗಳ ಮಿತಿಗೆ ದಕ್ಕುವ ಹಾಗೆ ಕಾಣಿಸುವ ಬಿಂಬವಾಗಿ ಇವು ಒಡಮೂಡಿರುವುದರಿಂದ ದೃಶ್ಯ ರೂಪಕಗಳಾಗಿಯೂ (ಅಂಕಣ ಬರಹಗಳಾಗಿಯೂ) ಕೂಡ ನಾವು ಭಾವಿಸಬಹುದಾಗಿದೆ. ಡಿ. ಎಚ್. ಲಾರೆನ್ಸ್ ಹೇಳಿದ ಹಾಗೆ 'ಕತೆ ಕಾದಂಬರಿಗಳ ನಿಜವಾದ ವಸ್ತು ಮಾನವೀಯ ಸಂಬಂಧಗಳು. ಅಂದರೆ ತೀವ್ರವಾದ ಮಾನವೀಯ ಆಸಕ್ತಿ.' ವಿಶೇಷವೆಂದರೆ, ಇಲ್ಲಿಯ ಎಲ್ಲ ಕತೆಗಳೂ ಉತ್ತಮ ಪುರುಷ ನಿರೂಪಣೆಯಲ್ಲಿವೆ. ಇಂದಿನ ಮನುಷ್ಯನಿಗೆ ಏನಾಗುತ್ತಿದೆ ಎಂಬ ಯೋಚನೆಗೆ, 'ನನಗೆ' ಆಗುತ್ತಿರುವುದೂ ಕೂಡ ಒಂದು ಉದಾಹರಣೆಯಾಗ ಬಲ್ಲದು. ಈ 'ನನ್ನನ್ನು' ಕೇವಲ ಖಾಸಗೀ ವ್ಯಕ್ತಿಯನ್ನಾಗಿ ಗ್ರಹಿಸದೆ ಮಾನವ ಸಮುದಾಯದ ಸದಸ್ಯನಾಗಿ ಗ್ರಹಿಸಿದಾಗ, ಸಮಾಜದ ಆರೋಗ್ಯ ಅಥವಾ ಅನಾರೋಗ್ಯವನ್ನು ನಾವು ಇದ್ದ ಸ್ಥಿತಿಯಲ್ಲೇ ಅನುಭವಿಸಬಲ್ಲೆವು.

ಇಲ್ಲಿಯ ಇಂಥವೇ ಮಾದರಿಯ ಮೂವತ್ತು ಕತೆಗಳು ಬೇರೆಬೇರೆ ಪಾತಳಿಯಲ್ಲಿ ಅಂತಃಕರಣವನ್ನು ಕಲಕುವಂಥವು. ಮುಖ್ಯವಾಗಿ ಜೀವನದ ವಿರೋಧಾಭಾಸಗಳು, ಘರ್ಷಣೆಗಳು, ಆಧುನಿಕತೆಯ ಸವಾಲುಗಳು, ಕ್ರೌರ್ಯ ವಿರೂಪ, ಬಿಕ್ಕಳಿಕೆ, ಚೀತ್ಕಾರ ನರಳುವಿಕೆ ಇಂತಹ ಪ್ರಧಾನ ಅಂಶಗಳನ್ನು ಈ ಕೃತಿಯ ಓದಿನ ಯಾತ್ರೆಯಲ್ಲಿ ನಾವು ಎದುರುಗೊಳ್ಳುತ್ತೇವೆ. ಅನುದಿನವೂ ಸವೆದು ಸುಕ್ಕಾಗುವ ಮಾನವತೆಯ ವಿಕ್ರಯ, ಭಾವನೆಗಳ ಬಿಕರಿ ಈ ಕತೆಗಳ ಮೂಲ ಧಾತುಗಳು. ಇಲ್ಲಿ ಬಂಡಾಯ ಕಾಲಘಟ್ಟದ ಕತೆಗಳ ವಸ್ತುವಿನಿಂದ ಹಿಡಿದು ಆಧುನಿಕ ಬದುಕಿನ ಅತಂತ್ರ ಸ್ಥಿತಿಗತಿಗಳನ್ನೆಲ್ಲ ಯಾವುದೇ ಅಬ್ಬರವಿಲ್ಲದೆ, ತಂತ್ರಗಾರಿಕೆಯಿಲ್ಲದೆ ಅತ್ಯಂತ ಸರಳವಾಗಿ ಲೇಖಕ ರಾಮಚಂದ್ರ ಕುಲಕರ್ಣಿಯವರು ಓದುಗರ ಮುಂದಿಡುತ್ತ ಹೋಗುತ್ತಾರೆ.

ಇಲ್ಲಿಯೂ ಸಹ ಎರಡು ಬಗೆಯ ಕತೆಗಳನ್ನು ನಾವು ಗುರುತಿಸಬಹುದು. ಲೇಖಕನ ಬಾಲ್ಯದ ನೆನಪಿನ ತುಣುಕು ಕೂಡ ಇಲ್ಲಿಯ ಕೆಲ ಕತೆಗಳ ಜೀವಸತ್ವದಂತೆ ಕೆಲಸ ಮಾಡಿವೆ. ಯಾವುದೇ ಲೇಖಕನಿಗೆ ತನ್ನ ಬಾಲ್ಯ ಮತ್ತು ಆಯಾ ಪರಿಸರದ ಗಾಢವಾದ ಪ್ರಭಾವ ಅವರವರ ಸಂವೇದನೆಯ ಒಳಗೆ ಪ್ರತಿಬಿಂಬಿತವಾಗಿರುವಂತೆ ಕುಲಕರ್ಣಿಯವರಿಗೆ ಅವರ ಇಂದಿನ ವರ್ತಮಾನದ ಬದುಕು ಕೂಡ ಅಷ್ಟೇ ತೀವ್ರವಾಗಿ ತಟ್ಟಿದೆ. ಆದರೆ ಬಾಲ್ಯಕಾಲದ ಅನುಭಾವಿಕ ಘಟನೆಗಳು ಪಡೆದುಕೊಳ್ಳುವ ಜೀವಂತಿಕೆಯನ್ನು ವರ್ತಮಾನದ ಅನುಭವಗಳನ್ನೊಳಗೊಂಡ ಕತೆಗಳು ಗಳಿಸಿಕೊಳ್ಳಲಾರವು ಎಂದು ಒಮ್ಮೊಮ್ಮೆ ಅನ್ನಿಸುವುದಿದೆ. ಅವು ತನ್ನಿಂದ ತಾನೇ ಸೃಷ್ಟಿಯಾದಂತಿದ್ದರೆ, ಇವು ಒತ್ತಾಯಪೂರ್ವಕ ನಿರ್ಮಾಣದಂತೆ ಕಾಣುವುದುಂಟು. ಇಲ್ಲಿರುವ ಕಥನ ವ್ಯಾಪ್ತಿ ದೊಡ್ಡದು. ಆದರೆ ಕುಲಕರ್ಣಿಯವರು ಅವುಗಳನ್ನು ತನ್ನಿಂದ ಅಂದರೆ ಲೇಖಕನಿಂದ ಇಲ್ಲಿನ ಯಾವ ಪಾತ್ರವನ್ನೂ ಬಿಡುಗಡೆಗೊಳಿಸಿ ನೋಡಲು ಹೋಗಿಲ್ಲ. ಇಲ್ಲಿಯ ಯಾವ ಕತೆಯೂ ರೂಪಕಗಳಾಗಿ ಓದುಗರ ಯೋಚನಾ ಕ್ರಮವನ್ನು ಬದಲಿಸಲು ಸಮರ್ಥವಾಗಲಾರವು, ಇಲ್ಲಿ ಒಬ್ಬೊಬ್ಬರದೂ ಒಂದೊಂದು ಸಮಸ್ಯೆಯ ಸುಳಿ. ಕತೆಗಳ ಮಣ್ಣಿನ ಗುಣ, ಪಾತ್ರ ಮತ್ತು ಇಲ್ಲಿಯ ಜೀವಂತ ಭಾಷೆಯಿಂದಾಗಿ ಇವು ಓದುಗರಿಗೆ ತಕ್ಷಣದ ತಲ್ಲಣವನ್ನುಂಟುಮಾಡುವಂತಿವೆ. ಕತೆಯೊಂದು ತನ್ನ ಪಾಡಿಗೆ ತಾನು ಆಕರ್ಷಣೀಯ ಎನ್ನಿಸುವುದಾದರೆ ಭಾಷೆಯೆಂಬುದು ಒಂದು ತೊಡಕಾಗುವುದಿಲ್ಲ ಸರಿ, ಆದರೆ ಕಲೆಯೊಂದು ತನಗೆ ಬೇಕಾದ ಪರಿಸರ ವಸ್ತು ಭಾಷೆಯನ್ನೆಲ್ಲ ಸ್ವೀಕರಿಸಿ ತನ್ನನ್ನು ತಾನೇ ಸಮರ್ಪಿಸಿಕೊಂಡು, ನೋಡುಗರಿಗೆ ಕೇಳುಗರಿಗೆ ಓದುಗರಿಗೆ ಸಂತೋಷ ನೀಡುವಂತಹದು. ಅಂಥದೊಂದು ನೋಟ, ದೃಶ್ಯ, ದರ್ಶನಗಳು ಇಲ್ಲಿ ವಿರಳವಾಗಿವೆ.

ಮನುಷ್ಯ ದೌರ್ಬಲ್ಯದ ಹಲವು ಮುಖಗಳು, ಆಂತರಿಕ ತೊಳಲಾಟ, ಹಿಂಸೆ ಇವು ಕೆಲ ಕತೆಗಳ ಮುಖ್ಯ ಕೇಂದ್ರ. ಜೀವವನ್ನೇ ಅಲ್ಲಾಡಿಸುವಷ್ಟು ಗಾಢವಾಗಿ ಕತೆಗಾರನನ್ನು ತಟ್ಟಿ, ಕಾಡಿಸಿ, ತಲ್ಲಣಿಸಿ ಬರೆಸಿಕೊಂಡ ಬರಹಗಳಿವು ಅನ್ನಿಸಿತು. ಕುಲಕರ್ಣಿಯವರ ಜೀವನಾನುಭವ ಅತ್ಯಂತ ಪ್ರಾಮಾಣಿಕವಾದ್ದು. ವಾಸ್ತವಕ್ಕೆ ಹತ್ತಿರವಾದ ಬದುಕಿನ ವಿವರಗಳು ಮತ್ತು ಭಾಷೆ ಇಲ್ಲಿಯ ಬಹಳಷ್ಟು ಕತೆಗಳ ಶಕ್ತಿ. ಹಾಗಾಗಿ ಬರವಣಿಗೆಗೆ ಒಂದು ರೀತಿಯ ಸಹಜತೆ ತಾನೇ ತಾನಾಗಿ ಒದಗಿಬಂದಿದೆ. ಸೂಕ್ಷ್ಮವಾದ ಅವಲೋಕನ ಶಕ್ತಿ, ಅಲ್ಲಲ್ಲಿ ಕಾವ್ಯದ ಸತ್ವವುಳ್ಳ ಭಾಷೆ, ಒಂದೆರಡೇ ಸಾಲುಗಳಲ್ಲಿ ಸನ್ನಿವೇಶವೊಂದರ ವೈಶಿಷ್ಟ್ಯವನ್ನು ಕಣ್ಣೆದುರು ನಿಲ್ಲಿಸಬಲ್ಲ ಚಿತ್ರಕ ಶಕ್ತಿಯ ಜೊತೆ ನಿರೋಗಿಯಾದಂತಹ ತೀರ್ಪುಗಾರಿಕೆಯೂ ಇದೆ. ಇವೆಲ್ಲವನ್ನೂ ನೀವು ಓದಿಯೇ ಅನುಭವಿಸಬೇಕು. ಇಲ್ಲಿಯ ಕತೆಗಳ ಕುರಿತು ಕೆಲವು ಜೀವವಾಕ್ಯಗಳನ್ನು ಹೇಳಿದರೆ, ಸೂಕ್ಷ್ಮ ಕೃತಿಪರಿಚಯ ಆದೀತು ಅಂದುಕೊಂಡಿರುವೆ.

ತಮ್ಮ ಬಳಿಯಿದ್ದ ಒಂದೇ ಒಂದು ಸೀರೆಯುಟ್ಟು ಅತ್ತೆ ಸೊಸೆ ಇಬ್ಬರೂ ಬೇರೆ ಬೇರೆ ಸಮಯದಲ್ಲಿ ಮನೆಯಿಂದ ಹೊರಬಂದು ತಮ್ಮ ಕರ್ತವ್ಯ ಪೂರೈಸಿ ಒಳಸೇರಿಕೊಳ್ಳುವ ತಡಿಕೆಯಾಚಿನ ಸತ್ಯ. ಕಣ್ಣಿಲ್ಲದ ಕಣ್ಣನ್ನೇ ಬೇಡುವ ಮನಕಲಕುವ ಸಂದರ್ಭ, ಭಗೀರಥನಂತೆ ಏಕಾಂಗಿ ವೀರನಾಗಿ ಬಾವಿ ತೋಡಿದ ಅಪ್ಪಣ್ಣನ ಛಲ, ಊರನ್ನೇ ಬೆಳಗಿದ ಮಲ್ಲಪ್ಪನ ಮನೆಯ ಕತ್ತಲು, ಮುದ್ದು ಮೊಲದ ಮರಿಗಳ ಅಗಲುವಿಕೆಯಲ್ಲಿರುವ ಸ್ವಾರ್ಥ ಮತ್ತು ನಿರ್ದಯದ ಮನುಷ್ಯ ಪ್ರವೃತ್ತಿಗಳು, ಸದಾ ಪುಸ್ತಕ ಓದುವ ಮೋಚಿಯೊಬ್ಬನ ಜೀವನ ಶೈಲಿ, ಆಣೆ ಕಟ್ಟಿನ ನೀರು ಒಂದೇ ಸಮ ಏರುವಾಗಿನ ವಿಷಮ ಸಂದಿಗ್ಧ, ಮಹಾಶ್ವೇತೆಗಳಂತಿರುವ ಪಾರಿವಾಳಗಳ ಅವಸಾನದ ದುಗುಡ, 'ಕಲ್ಲಿನ ಸುಳಿಗಿಂತ ಮನುಷ್ಯನ ಸುಳಿ ನಿಗೂಢ' ಎಂಬೊಂದು ಸಂಕಟದ ಪ್ರತಿಸ್ಪಂದನ, ರೈಲು ದುರಂತವೊಂದರಲ್ಲಿ ಅನಾಥವಾದ ಮಗುವನ್ನು ಸಾಕಿಕೊಂಡ ಮನಾಫ್ ದಂಪತಿಗಳ ಹೃದಯ ವೈಶಾಲ್ಯ. ಇವೆಲ್ಲ ಘಟನೆಯೊಂದನ್ನು ತೀವ್ರವಾಗಿ ಅನುಭವಿಸಿ, ಅದು ತನ್ನೊಳಗನ್ನು ಹೇಗೆ ಸ್ಪರ್ಶಿಸಿ ಪರಿಶುದ್ಧಗೊಳಿಸುತ್ತ ಸಾಗುತ್ತದೆ ಎಂಬುದು ಕುಲಕರ್ಣಿಯವರ ಬರವಣಿಗೆಯ ಲಯಕ್ಕೆ ಇರುವ ದಾರಿಯಾಗಿದೆ.

ಲೋಕದೆಡೆ ವಿಶಾಲಭರಿತ ಕೊಂಕು ನಗೆ ಬೀರುವ ಅನಾಮಿಕ ಬಾಣಂತಿ, ಸೊಸೆಯ ದೈಹಿಕ ಸಂಬಂಧಕ್ಕಿಂತ ಮೀರಿದ ಮಾನವೀಯ ಕ್ಷಣವನ್ನು ಗೌರವಿಸುವ ಅತ್ತೆ, ತೇರಿನ ಯಮಗಾತ್ರದ ಗಾಲಿಯೆಡೆ ಸಿಕ್ಕು ಕಣ್ಮರೆಯಾದ ಬಾಲಕನ, ಜೀವಂತ ತೇರಿನಂತಿರುವ ಅಜ್ಜಿ, ತಾಯ ಮಮತೆಗೂ ಕೂಲಿಯೇ ಎಂಬ ಪ್ರಶ್ನೆ ಉದ್ಭವಿಸುವ ಬದುಕಿನ ವಿಕೃತ ಮುಖ, ಸೂರಿಲ್ಲದ ಚುರುಮರಿ ಅಜ್ಜಿಯ ತಳಮಳ, ಬಗಲಲ್ಲಿ ಜೋಳಿಗೆಯಿರುವ ಚಿಂದಿ ಮಾರುವ ಹೆಣ್ಣಿನ ವಿಶ್ವ, ಕೋಳಿಗಳ ರೂಪಕಗಳಾಗಿ ಬರುವ ಜೀವಗಳ ಕುರಿತಾದ ಕಳಕಳಿ, ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಅಜ್ಜಿಯ ಅಂತ್ಯ ಸಂಸ್ಕಾರವನ್ನು ಕೈಯಾರೆ ನೆರವೇರಿಸಿದ ಲೇಖಕನ ಸ್ಮರಣ ಚಿತ್ರಗಳ ಹಿಂದಿನ ಅಭೀಪ್ಸೆ, ಒಂದು ಹೆಣ್ಣು ನಾಯಿಯ ಲೈಂಗಿಕ ಹಿಂಸೆಯ ಪರಮಾವಧಿ, ಕಷ್ಟಪಟ್ಟು ದುಡಿದೂ ಕೂಡ ಬಡವನಾಗಿದ್ದುಕೊಂಡೇ ವೃದ್ಧನಾದ ರೈತ, ಹೆಂಡತಿ, ಮಗಳು ಮುಳುಗಿದ್ದು ಈ ನದಿಯಲ್ಲಲ್ಲ – ನನ್ನೀ ಹಸಿವಿನಲ್ಲೇ ಎನ್ನುವ

**ಸುನಂದಾ ಪ್ರಕಾಶ ಕಡಮೆ**

ಮುಗ್ಧ ಅಂಬಿಗ, ಅತ್ತರಿನ ಸೀಸೆಗಳನ್ನೇ ಆಸ್ತಿಯಂತೆ ಅಪ್ಪಿಕೊಂಡು ಮಲಗುವ ಅನಾಥ, ಲೇಖಕರು ಚಂದಮಾಮಾ ಕದ್ದು ಓದುವ ಘಟನೆಗೇ ತಳಕಿ ಹಾಕಿಕೊಂಡ ಒಂದು ಸಾವಿನ ಅಚ್ಚರಿ, ನಾಟಕದಂತೆ ಬದುಕಿನಲ್ಲೂ ಒಂದೇ ದೃಶ್ಯ ಹಿಡಿದು ಕೂಡದೆ, ಬೇರೊಂದು ಪರದೆ ಎಳೆದು ಹೊಸತನಕ್ಕೆ ಒಡ್ಡಿಕೊಳ್ಳಬೇಕೆನ್ನುವ ಅಪ್ಪಟ ವಾಸ್ತವವಾದೀ ಮನಸ್ಸು, ನಗುವುದೊಂದು ನಿರಂತರ ಕೆಲಸವೇ ಆಗಿಬಿಟ್ಟಾಗ, ಸಾಮಾನ್ಯರ ಸ್ತರದಲ್ಲಿ ನಗುವನ್ನೇ ಕಳಕೊಂಡ ನತದೃಷ್ಟ. ಹೀಗೆ ಇಡಿಯಾದ ಮನುಷ್ಯ ಲೋಕವೇ ರಾಮಚಂದ್ರ ಕುಲಕರ್ಣಿಯವರ ಬರವಣಿಗೆಯ ಅರ್ಥ ಹಾಗೂ ಅವರ ಹೆಂಗರುಳಿನ ಸ್ಫೂರ್ತಿಗಳಿಗೆ ಕಾರಣವಾಗಿವೆ.

ಜಗತ್ತಿನ ವಿನಾಶ, ಮನಸ್ಸು ಮನಸ್ಸುಗಳ ನಡುವಿನ ಕಂದರ ಇವೆಲ್ಲ ಇಲ್ಲಿ ಭಾವಪೂರ್ಣವಾಗಿ ಮೂಡಿವೆಯಾದರೂ ಕುಲಕರ್ಣಿಯವರು ಇವೆಲ್ಲದರ ಜೊತೆ ಜೊತೆಗೇ, ಇನ್ನು ಮುಂದೆ ಆಳವಾದ ಚಿಂತನೆಗೂ ದೂಡುವ ಕತೆಗಳನ್ನು ಬರೆಯಲಿ, ಹೊಸ ಹೊಸ ಪ್ರಯೋಗಗಳಿಗೆ ಒಡ್ಡಿಕೊಳ್ಳಲಿ ಎಂದು ಹಾರೈಸುತ್ತೇನೆ. ಇಂದಿನ ಕನ್ನಡ ಸಣ್ಣ ಕತೆಯ ಬೆಳವಣಿಗೆಯ ಇತಿಹಾಸದಲ್ಲಿ ಕುಲಕರ್ಣಿಯವರ ಈ ಕತೆಗಳಿಗೆ ಯಾವ ಸ್ಥಾನ ಲಭಿಸುತ್ತದೆಂಬುದು ಮಾತ್ರ ಕುತೂಹಲಕರ ಸಂಗತಿ.

**ಸುನಂದಾ ಪ್ರಕಾಶ ಕಡಮೆ**
ನಂ. ೯೦, 'ನಾಗಸುಧೆ', ಕಾಳಿದಾಸನಗರ, ವಿದ್ಯಾನಗರ ವಿಸ್ತರಣೆ
ಹುಬ್ಬಳ್ಳಿ - ೫೮೦ ೦೩೧

# ಬೆಂಗಳೂರು



ಮುಸ್ಸಂಜೆ ಹೊತ್ತಿನಲಿ
ಕುಳಿತಿದ್ದೆ ಕಬ್ಬನ್ ಪಾರ್ಕಿನಲಿ
ತೋಳಿಲ್ಲದ ರವಿಕೆಯ
ರಕ್ತಸೂಸುವ ಗಲ್ಲದ
ಧಡೂತಿ ಹೆಂಗಸರು !
ಪ್ಯಾಂಟು ಸೂಟು ಬೂಟಿನ
ಕ್ಲೀನ್ ಶೇವನ್ ಮುಖಗಳು !
ಐಸ್‌ಕ್ರೀಮು ಪಾಪ್‌ಕಾರನ್ನು
ಬೇಲ್‌ಪುರಿಯ ರುಚಿಯ
ದುರಾಸೆ ಕಂಗಳ ಮಕ್ಕಳು !
ಚಿಕ್ಕ ಹಳಿಯಲ್ಲೇ ಮತ್ತೆ ಮತ್ತೆ
ಸುತ್ತು ಹೊಡೆಯುವ
ಬಣ್ಣ ಬಣ್ಣದ ರೈಲು
ಮತ್ತೆ..............
ಹರಕು ಅಂಗಿಯ
ಬೀಡಿ ಸೇದುವ
ಕೆಲಸವಿಲ್ಲದ
ಅಡನಾಡಿ ಹುಡುಗರು !
ಹತ್ತು ಪೈಸೆಗೆ
ಹಿಂದೆ ತಿರುಗುವ
ಬೇತಾಳ ಭಿಕಾರಿ ಚಿಣ್ಣರು !

ನೋಡುತ್ತ... ನೋಡುತ್ತ
ನೋಡುತ್ತಿದ್ದೆ.

ದೂರದಿಂದೆಲ್ಲೋ ಗಾನ !
ಮಧುರ ಗಾನದಲ್ಲಿ
ತೇಲುತ್ತ ತೇಲುತ್ತ
ಒಮ್ಮಿಂದೊಮ್ಮೆಲೇ
ಉಕ್ಕಿ ಬಂದಿತ್ತು ಒಂದು
ರಭಸದುತ್ಕಟತೆಯ ಆಸೆ !

ಇಲ್ಲ, ಇದೆಲ್ಲದರ
ನಾಡಿ ಹಿಡಿಯಬೇಕು
ರಭಸದಿಂದೆದ್ದು
ಓಡಲಾರಂಭಿಸಿದೆ
ಕೆಂಪು ಹಸಿರಿನ ದೀಪ
ಕಾರು ಸ್ಕೂಟರು ಬಸ್ಸು
ಢಿಕ್ಕಿ ಹೊಡೆಯುತ್ತಾ
ಓಡೋಡಿ ನಿಂತದ್ದು
ಸ್ಲಮ್ಮುಗಳ ನಡುವೆ !

ನೋವಿನಿಂದ ನರಳುವ
ಬಡಕಲು ಹೆಂಗಸರು



ಕುಡಿದು ತೂರಾಡುವ
ಕೆಟ್ಟ ಮಾತಿನ ಗಂಡಸರು !
ದಿಕ್ಕೆಟ್ಟ ನೋಟದಲಿ
ಕತ್ತಲಲಿ ಕುಳಿತ
ಬೆತ್ತಲೆ ಮಕ್ಕಳು !
ಅಯ್ಯಪ್ಪ ಸ್ವಾಮಿಗೆ
ಆವೇಶದ ಭಜನೆ !
ಆಗಲೇ ರಂಗಿನ ಸೀರೆಯುಟ್ಟು
ರಸ್ತೆಗಿಳಿಯುತ್ತಿರುವ
ಸೆರಗು ಜಾರಿದ ಹೆಣ್ಣುಗಳು
ವಾಸನೆ ದುರ್ಗಂಧ !

ಒಂದಲ್ಲ ಎರಡಲ್ಲ
ಐನೂರಕ್ಕೂ ಹೆಚ್ಚು
ಸ್ಲಮ್ಮುಗಳನ್ನು
ಪಾಯಖಾನೆಯಂತೆ
ತನ್ನ ಹೊಟ್ಟೆಯಲ್ಲಿಟ್ಟುಕೊಂಡು
ಹೂಸುತ್ತಿರುವ ಮಹಾನಗರಿ
ಈ ಬೆಂಗಳೂರು !

ಇರಲಿ, ಇಷ್ಟೇ ಅಲ್ಲ
ಬದುಕಿಗೇನು ಬಣ್ಣವಿಲ್ಲವೇ ?
ಮತ್ತೆ ಓಡಿದೆ............
ಎಂ.ಜಿ. ರೋಡು, ಬ್ರಿಗೇಡು ರಸ್ತೆ
ರಾಜಮಹಲ್, ಇಂದಿರಾನಗರ
ಕಾಂಟೆಸ್ಸಾ ಕಾರುಗಳು
ನಳನಳಿಸುವ ತೋಟದಲ್ಲಿ
ಪುಟಿವ ಕಾರಂಜಿಗಳು
ಹ್ಯಾಂಡಲೂಂ ಟೆರ್ರಾಕೊಟ್ಟಾ
ದೇಸೀ ಅಲಂಕಾರಗಳು
ಸ್ಕೈ ಸ್ಕ್ರೇಪರುಗಳು
ಕೈಗೊಂದು ಕಂಪ್ಯೂಟರ್ !
ಮಂತ್ರಿಗಳ ಮೆತ್ತೆಯಲ್ಲಿ
ಹೊಳೆವ ಸಿಲ್ಕ್ ಕಾಟನ್ನು
ಅಧಿಕಾರಿಗಳ ಬಾರಿನಲ್ಲಿ
ಹರಿವ ಸ್ಕಾಚು ಜಿನ್ನು

ಎಲ್ಲಿದೆ ಎಲ್ಲಿದೆ
ಎಲ್ಲಿದೆ ಹೇಳಿ
ಈ ಬದುಕ ಜೀವನಾಡಿ ?

**ಎಸ್. ಮಾಲತಿ**
'ಮಹಾಲಸ ನಿಲಯ', ಜೋಗ ರಸ್ತೆ, ಸಾಗರ - ೫೭೭ ೪೦೧

# ಸೆಟ್‌ಬ್ಯಾಕ್ ನುಂಗಪ್ಪ



ನಾಗಪ್ಪ ೩೦ ಹಾಗೂ ೪೦ ಅಡಿಯ ಒಂದು ಸೈಟನ್ನು ಕೊಂಡಿದ್ದಾನೆ. ಸೈಟು ಚಿಕ್ಕದು. ಅದಕ್ಕೆ ಇಡೀ ಸೈಟಿನಲ್ಲಿ ಮನೆ ಕಟ್ಟುತ್ತೇನೆ ಎಂಬುದು ಅವನ ಬಯಕೆ. ಹಾಗಾಗುವುದಿಲ್ಲ, ಅದರಿಂದ ತೊಂದರೆಗಳು ಅನೇಕ ಎಂದರೆ ಕೇಳುವ ಸ್ಥಿತಿಯಲ್ಲಿ ಅವನಿಲ್ಲ. ಅಂತೂ ಹೇಗೋ ಅವನು ಮನೆ ಕಟ್ಟಿಬಿಟ್ಟ. ನೋಡು ನಾನು ಹೇಗೆ ಮನೆ ಕಟ್ಟಿದ್ದೇನೆ, ಚಿಕ್ಕ ಸೈಟಾದರೂ ಎಷ್ಟು ದೊಡ್ಡ ಅಳತೆಯ ರೂಮುಗಳಿವೆ ಎಂದು ಹೆಮ್ಮೆಯಿಂದ ಬೀಗುತ್ತಿದ್ದ.

ಮುಂದೆ ರಸ್ತೆಯವರೆಗೂ ಗೋಡೆಯಿದ್ದದರಿಂದ ಮನೆಯ ಕಿಟಕಿಯ ಚಜ್ಜಾ ಫುಟ್‌ಪಾತಿಗೆ ಚಾಚಿತ್ತು. ಪಕ್ಕದ ಖಾಲಿ ಸೈಟಿನವರೆಗೂ ಮನೆ ಗೋಡೆಗಳು ಬಂದಿದ್ದವು. ಪಕ್ಕದಲ್ಲಿ ಕಿಟಕಿಗಾಗಿ ಸ್ವಲ್ಪವೆ ಜಾಗ ಬಿಟ್ಟಿದ್ದ. ಒಂದೆರಡು ಕಿಟಕಿಗಳು ಪಕ್ಕದ ಸೈಟಿಗೆ ತಗುಲಿಕೊಂಡಿದ್ದವು. ಹಿಂಭಾಗದಲ್ಲಿಯೂ ಸೈಟಿನ ತುದಿಯ ತನಕ ಮನೆ ಹಬ್ಬಿತ್ತು. ಯುಟಿಲಿಟಿಗೆಂದು ಬಿಟ್ಟಿದ್ದ ಜಾಗದಿಂದಲೇ ಅವನಿಗೆ ಗಾಳಿ ಬೆಳಕು.

ಒಂದು ದಿನ ಇದ್ದಕ್ಕಿದ್ದಂತೆ ಅವನ ಪಕ್ಕದ ಮನೆಯವರು ಬಂದು, ನೀವು ನಮ್ಮ ಅನುಮತಿ ಇಲ್ಲದೇ ಸೈಟಿನ ತುದಿಯವರೆಗೂ ಗೋಡೆ ಕಟ್ಟಿದ್ದೀರಿ, ಒಡೆಸಿ ಜಾಗ ಬಿಟ್ಟು ಕಟ್ಟಿ ಎಂದು ತಕರಾರು ತೆಗೆದರು. ಇವನು ಜಗಳಕ್ಕೆ ನಿಂತಾಗ ಅವರು ಕೋರ್ಟಿಗೆ ಹೋಗುತ್ತೇವೆ ಎಂದು ಹೆದರಿಸಿದರು. ಅಂತೂ ಅವರೊಂದಿಗೆ ಜಗಳ, ಕದನವಿರಾಮ ಎಲ್ಲವೂ ಆಗಿ ಕಡೆಗೆ ಏನೋ ಒಂದಷ್ಟು ಕಾಂಪನ್ಸೇಷನ್ ಕೊಟ್ಟು ತಕರಾರಿಗೆ ವಿರಾಮ ಹೇಳಿದ. ಇಷ್ಟೆಲ್ಲಾ ಆಗುವ ಹೊತ್ತಿಗೆ ಅವನಿಗೆ ಸಾಕುಸಾಕಾಗಿ ಹೋಗಿತ್ತು. ದುಡ್ಡೂ ಕೈ ಬಿಟ್ಟಿತ್ತು.

ಇದಾದ ಕೆಲವೇ ದಿನಗಳಾದ ನಂತರ ಇನ್ನೊಂದು ಪಕ್ಕದ ಮನೆಯವರು ಬಂದು ಜಗಳಕ್ಕೆ ನಿಂತಾಗ ನಾಗಪ್ಪ ಮತ್ತೆ ಜಗಳಕ್ಕೆ ನಿಂತು ಬುಸುಗುಟ್ಟಿದ. ಅವರು ಸೋಲೊಪ್ಪದಿದ್ದಾಗ ಮತ್ತೆ ತಣ್ಣಗಾಗಿ ಕಾಂಪನ್ಸೇಷನ್‌ಗೆ ಮುಂದಾದ. ಆದರೆ ಅವರು ಜಪ್ಪಯ್ಯ ಎಂದರೂ ಒಪ್ಪಲಿಲ್ಲ. ನೀವು ಗೋಡೆ ಒಡೆಸಿ ಹಿಂದಕ್ಕೆ ಕಟ್ಟದಿದ್ದರೆ ಕೋರ್ಟೇ ಗತಿ ಎಂದರು. ಅಂತೂ ಅದು ಕೋರ್ಟಿಗೆ ಹೋಗಿ ಅಲ್ಲಿ ವರ್ಷಾನುಗಟ್ಟಲೆ ಎಳೆದಾಡಿ ನ್ಯಾಯ ಅವರ ಕಡೆಗೇ ಆದಾಗ ಇವನು ವಿಧಿಯಿಲ್ಲದೆ ಮನೆಯ ಗೋಡೆಯನ್ನು ಹಿಂದಕ್ಕೆ ಕಟ್ಟಬೇಕಾಯಿತು. ಇದರಿಂದ ಅವನ ಮನೆಯ ರೂಮಿನ ಅಳತೆಗಳೆಲ್ಲ ಏರುಪೇರಾಗಿ ನಗೆಪಾಟಲಿಗೀಡಾದವು. ಕೋರ್ಟು, ಕಛೇರಿ ಎಂದು ಅಲೆದು ಅವನಿಗೆ ಸುಸ್ತಾಗಿಹೋಗಿತ್ತು. ಮನಸ್ಸಿನ ನೆಮ್ಮದಿಯೂ ಹೋಗಿತ್ತು, ದುಡ್ಡೂ ಒಂದಷ್ಟು ಕೈಬಿಟ್ಟಿತ್ತು.

ಇದೇ ಕತೆ ಹಿಂದಿನ ಸೈಟಿನವರದು. ಅವರು ಒಮ್ಮೆಗೇ ಕಾಂಪನ್ಸೇಷನ್‌ಗೆ ಒಪ್ಪದೆ ಆಗಾಗ್ಗೆ ಅದರ ಬಗ್ಗೆ ತಕರಾರು ತೆಗೆದು ಇವನಿಂದ ದುಡ್ಡು ಹೀರುತ್ತಿದ್ದರು. ಅಂತೂ ಅದು ಅವರ ಬ್ಲಾಕ್‌ಮೇಲ್ ತಂತ್ರವಾಗಿತ್ತು. ಇವನಿಗಂತೂ ತಾನು ಏಕಾದರೂ ಹಾಗೆ ಸೈಟಿನ ತುದಿಯವರೆಗೂ ಕಟ್ಟಿದೆನೋ ಎಂದು ತನ್ನ ತಲೆಯನ್ನೇ ಚಚ್ಚಿಕೊಳ್ಳುವಂತಾಗಿತ್ತು. ಇಷ್ಟೆಲ್ಲಾ ಆಗುವ ಹೊತ್ತಿಗೆ ಹೈರಾಣಾಗಿದ್ದ. ಅವರಿಗೆ ದುಡ್ಡು ಬೇಕಾದಾಗಲೆಲ್ಲಾ ಇವನ ಬಳಿ ಜಗಳಕ್ಕಿಳಿದು ದುಡ್ಡು ಕೀಳುತ್ತಿದ್ದರು. ಅಂತೂ ಇದು ಒಮ್ಮೆಗೆ ಬಗೆಹರಿಯದ ಜಗಳವಾಗಿತ್ತು. ಆ ಮನೆಯಲ್ಲಿ ನಾಗಪ್ಪನಿಗೆ ನಿದ್ದೆಯೇ ಇಲ್ಲವಾಗಿತ್ತು. ನೆಮ್ಮದಿಯಂತೂ ಕನಸಾಗಿತ್ತು. ಮನೆಯ ಮುಂದಿನ ರಸ್ತೆ ಈಗ ದೊಡ್ಡದಾಗಿ ಬೆಳೆದು ತನ್ನ ಶಬ್ದ, ಧೂಳು ಎಲ್ಲವನ್ನು ಇವನ ಮನೆಯ ಕಿಟಕಿಯ ಮೂಲಕ ಒಳಗೆ ತಲುಪಿಸುತ್ತಿತ್ತು. ಈಗ ಆ ಕಿಟಕಿಗಳನ್ನು ಅವರು ಶಾಶ್ವತವಾಗಿ ಮುಚ್ಚುವ ಪರಿಸ್ಥಿತಿ ಬಂತು. ಇದರಿಂದಾಗಿ ಅವನ ಮನೆಗೆ ಗಾಳಿ ಬೆಳಕುಗಳದೇ ಒಂದು ತೊಂದರೆಯಾಯಿತು. ಇದರಿಂದಾದ ತೊಂದರೆಯಂತೂ ಅವನಿಗೆ ಸಾಕಷ್ಟು ಹಾನಿಯುಂಟುಮಾಡಿತು. ಇದ್ದ ಕೆಲವೇ ಕಿಟಕಿಗಳನ್ನೂ ಮುಚ್ಚಿಕೂತರೆ ಇರುವುದಾದರೂ ಹೇಗೆ ಎಂದು ಮನೆಯವರಿಂದಲೇ ತಕರಾರು ಪ್ರಾರಂಭವಾಯಿತು.

ಇಂತಹ ಕಷ್ಟದ ಪರಿಸ್ಥಿತಿಯಲ್ಲಿ ಒಂದು ದಿನ ಕಾರ್ಪೊರೇಷನ್‌ನವರು ಬಂದು ಮನೆಯ ಮುಂದಿನ ಗೋಡೆಯನ್ನು ಒಡೆಸಿ ಹಿಂದಕ್ಕೆ ಕಟ್ಟಿ ಎಂದು ನೋಟೀಸು ಕೊಟ್ಟುಹೋದರು. ಒಂದು ರೀತಿಯಲ್ಲಿ ಅದು ಒಳ್ಳೆಯದೇ ಎಂದು ಅವನಿಗೆ ಆಗ ಅನ್ನಿಸಿಬಿಟ್ಟಿತ್ತು. ಯಾವುದೇ ತಕರಾರು ಮಾಡದೆ, ಹೆಚ್ಚು ಖರ್ಚಾದರೂ ಗೋಳಾಡದೆ ಗೋಡೆಯನ್ನು ಒಡೆಸಿ ಹಿಂದಕ್ಕೆ ಕಟ್ಟಿಸಿ ತೊಂದರೆಗಳನ್ನು ನೀಗಿಸಿಕೊಂಡ. ಹಾಗೆಯೇ ಹಿಂದಿನ ಗೋಡೆಯನ್ನೂ ಒಳಕ್ಕೆ ಕಟ್ಟಿಸಿಕೊಂಡು ಅವರ ಬ್ಲಾಕ್‌ಮೇಲಿನಿಂದ ಬಚಾವಾದ.

ಇದಾದ ನಂತರ ನಾನು ನಾಗಪ್ಪನನ್ನು ಭೇಟಿಯಾದಾಗ, ಆತ ಎಲ್ಲವನ್ನೂ ಹೇಳಿಕೊಂಡು, ನಾನು ಕಟ್ಟುವಾಗಲೇ ನಿಮ್ಮ ಮಾತುಗಳನ್ನು ಕೇಳಿದ್ದರೆ ಎಲ್ಲವೂ ಸರಿಯಾಗಿರುತ್ತಿತ್ತು, ಏನೋ ಮಾಡಲು ಹೋಗಿ ಚಪ್ಪಡಿಯನ್ನು ನನ್ನ ತಲೆಯ ಮೇಲೆ ಎಳೆದುಕೊಂಡೆ. ಈಗ ಎಲ್ಲವನ್ನು ಅನುಭವಿಸಿದೆ. ಇನ್ನುಮೇಲಾದರೂ ನೆಮ್ಮದಿ ಸಿಗಬಹುದೇನೋ ಎಂದು ಅಲವತ್ತುಕೊಂಡ. ಈಗ ಅವನ ಮನೆಯಂತೂ ಏನೇನೋ ಆಗಿಹೋಗಿದೆ. ಗತ್ತಿನಿಂದ ಬೀಗುತ್ತಿದ್ದ ಅವನು ಈಗ ತಲೆ ಎತ್ತಿಕೊಂಡು ತಿರುಗಲೂ ಅಂಜುವಂತಾಗಿದೆ.

ನಿಮಗೂ ಇಡೀ ಸೈಟಿನಲ್ಲಿ ಮನೆ ಕಟ್ಟಿಸಿ ರೂಮುಗಳ ಅಳತೆಯನ್ನು ದೊಡ್ಡದಾಗಿ ಮಾಡಿ, ಸೆಟ್‌ಬ್ಯಾಕ್‌ಗಳನ್ನು ನುಂಗಬೇಕೆಂದಿದ್ದರೆ ಸ್ವಲ್ಪ ಯೋಚಿಸಿ ನೋಡಿ. ದುಡುಕಿ ನಾಗಪ್ಪನಂತಾಗಬೇಡಿ.

**ಜಗದೀಶ ಚಂದ್ರ ಬಿ. ಎಸ್.**
bsjchandra@gmail.com

# ತಂತ್ರಿ




ಕೆಲವೇ ಸೆಕೆಂಡುಗಳ ಹಿಂದೆ ತನ್ನ ಪಿ.ಎ. ಕಿವಿಯಲ್ಲಿ ಉಸುರಿದ ಸುದ್ದಿಯಿಂದ ಸಿ.ಎಂ. ಶೂಬೂರಪ್ಪನ ಮುಖ ಕಪ್ಪಿಡಲಾರಂಭಿಸಿತು. ಜೊತೆಗೆ ಮುಖದಲ್ಲಿ ಸದಾ ತುಂಬಿ ತುಳುಕಾಡುತ್ತಿದ್ದ ಸಿಡುಕು ಮತ್ತಷ್ಟು ಏರಿತು.

''ಆ ಬಡ್ಡಿ ಮಕ್ಕಳ ಬಂಡಾಯ ಹ್ಯಾಗೋ ತಣ್ಣಗೆ ಮಾಡಿದ್ದಾಯ್ತು. ಈಗ ಈ ಚುಚ್ಚಪ್ಪಾ ನಂಜ ಶುರು ಹಚ್ಕೊಂಡು ಮೀಡಿಯಾವರ್ಗೂ ಹೋಗಿದ್ದಾನಲ್ಲ, ಎಂಗಪ್ಪ ಶಿವನೇ...'' ಗೊಣಗಿಕೊಂಡ ಸಿ.ಎಂ. ಶೂಬೂರಪ್ಪ ಅಲಿಯಾಸ್ ಉರಿಯರಪ್ಪ ತಡಮಾಡಲಿಲ್ಲ. ತನ್ನ ಪಿ.ಎ. ಕರೆದು ''ನೋಡೋ, ಈಗೀಂದೀಗ್ಲೆ ನನ್ನ ಬಂಗ್ಲೆಗೆ ಹೋಗಿ ಒಂದು ''ಆಪರೇಷನ್ ಬ್ರೀಫ್ ಕೇಸ್'' ಕಲೆಕ್ಟ್ ಮಾಡ್ಕೊಂಡು ಅದನ್ನ ಚುಚ್ಚಪ್ಪಾ ನಂಜನಿಗೆ ಕೊಟ್ಟು, ನಾಡಿದ್ದು ೪೨೦ ಅಪಾರ್ಟ್‌ಮೆಂಟ್‌ನಲ್ಲಿ ಅವ್ನ ಫಾಲೋವರ್ಸ್ ಜೊತೆ ನನ್ನನ್ನ ಮೀಟ್ ಮಾಡೋಕೆ ಹೇಳು'' ಆದೇಶಿಸಿದ. ಪಿ.ಎ. ತಲೆ ಅಲ್ಲಾಡಿಸಿ ಅಲ್ಲಿಂದ ಹೊರಟ.

ಶೂಬೂರಪ್ಪನ ಹೆಸರಿಗೆ ಉರಿಯೂರಪ್ಪ ಅಂಟಿಕೊಳ್ಳಲು ಅವನೇ ಮುಖ್ಯ ಕಾರಣ. ಏಕೆಂದರೆ ಶೂಬೂರಪ್ಪನಿಗೆ ತುಂಬ ಕಷ್ಟದ ಕೆಲಸವೆಂದರೆ ನಗುವುದು. ಹೆಂಗಸಿನ ಹೆರಿಗೆ ನೋವಿನಷ್ಟೇ ಕಷ್ಟ ಅವನಿಂದ ನಗುನಗುತ್ತಾ ಇರುವುದು. ಹೀಗಾಗಿ ಅವನ ವಿರೋಧಿಗಳೆಲ್ಲಾ ಅವನನ್ನು ಮರೆಯಲ್ಲಿ ಉರಿಯೂರಪ್ಪ ಎಂದೇ ಕರೆಯುತ್ತಿದ್ದರು. ಅಷ್ಟೇ ಅಲ್ಲ, ಅವನು ನಗುವುದೇ ಇಲ್ಲವೆಂದು ಅವನ ವಿರುದ್ಧ ಅವನ ಪಕ್ಷದವರೇ ವರಿಷ್ಠರಿಗೆ ದೂರು ಸಲ್ಲಿಸಿದ್ದರು.

''ಶೂಬೂರಪ್ಪ ಕಡೇ ಪಕ್ಷ ನಂ ಪಾರ್ಟಿಯವರ ಜೊತೆನಾದ್ರೂ ನಗ್ಲಿಕ್ಕೆ ಟ್ರೈ ಮಾಡೀಪ್ಪಾ'' – ವರಿಷ್ಠರು ತಾಕೀತು ಮಾಡಿದ ನಂತರ ಸಿ.ಎಂ. ನಗಲು ಪ್ರಯತ್ನಿಸಿದ್ದ. ಆದರೆ ಫೈಲ್ಸ್ ರೋಗದವರು ಮಲಬಾಧೆ ಮಾಡುವಾಗ ಅನುಭವಿಸುವ ನೋವು ನಗುವುದರಿಂದ ಸಿ.ಎಂ.ಗೆ ಆಗುತ್ತಿತ್ತು. ಹೀಗಾಗಿ ''ಯಾರು ಏನೇ ಅನ್ನಲಿ, ನಾನ್ಮಾತ್ರ ನಗಾಕ್ಕಿಲ್ಲ'' ಅಂತ ಶಪಥ ಮಾಡಿ ಪಾರ್ಟಿಯ ಅವರಿಂದ್ಲೂ ಉರಿಯೂರಪ್ಪನಾಗಿ ಉಳಿಯಲು ತೀರ್ಮಾನಿಸಿದ.

ಚುಚ್ಚಪ್ಪಾ ನಂಜನ ಬಂಡಾಯದ ಭೂತದ ಮುಂದೆ ಸಿ.ಎಂ. ಆಗಾಗ ಮಾಧ್ಯಮದವರ ಮುಂದೆ ಬಿಡುತ್ತಿದ್ದ 'ಅಭಿವೃದ್ಧಿ' 'ರಾಜ್ಯದ ಪ್ರಗತಿ' ಇತ್ಯಾದಿ ರೈಲುಗಳು ಹಳಿ ತಪ್ಪಿದ್ದವು.

''ಈ ದೇಶದ ವಿರೋಧ ಪಕ್ಷದವರಿಗೆ ಒಂದೆರಡು ವರ್ಷ ತೆಪ್ಪಗಿರೋಕೇನು ರೋಗ ? ನನ್ನ ಅಭಿವೃದ್ಧಿ ಮಾಡ್ಕೊಂಡು ತೆಪ್ಪಗಿರ್ತಿದ್ದೆ. ನಾನ್ಮಾಡೊ ಎಲ್ಲಾ ಡೀಲಿಂಗ್‌ಗಳ್ನೂ ಡೀಟೇಲ್ ಆಗಿ ಮೀಡಿಯಾ ಮುಂದಿಟ್ಟು ನನ್ನ ನೆಮ್ಮದಿ ಕೆಡಿಸ್ತಾ ಅವ್ರೆ. ಇವರು ಹಾಳಾಗಿ ಹೋಗ್ಲಿ, ನಂ ಪಕ್ಷದವರಿಗೇನು ಬಂತು ರೋಗ ? ಮೂರ್‍ಮೂರು ದಿನಕ್ಕೆ ಬಂಡಾಯ ಅಂತಾ ಬಂಬಡಾ ಬಾರಿಸ್ತಾನೇ ಅವ್ರೆ. ಆ ಬಡ್ಡಿಮಗನ್ನ ಇವರ್ನೆಲ್ಲಾ ತೆಪ್ಪಗಿರ್ಸು ಅಂತ ಆಗಾಗ್ಗೆ ಬ್ರೀಪ್ ಕೇಸ್ ತಳ್ತಾನೇ ಇದ್ರೂ ಒಂದು ಚೂರೂ ಸುಧಾರಿಸಿಲ್ಲ.''

''ಸಾರ್'' – ಪಿ. ಎ. ಆರಾಧ್ಯನ ಕೂಗಿನಿಂದ ಶೂಬೂರಪ್ಪ ವಾಸ್ತವಕ್ಕೆ ಬಂದ.

''ಬೆಳಿಗ್ಗೆ ೯ ಗಂಟೆಗೆ ೪೨೦ ರೆಸಾರ್ಟ್‌ಗೆ ಹೋಗ್ಬೇಕು. ಆರು ಬ್ರೀಫ್ ಕೇಸು ರೆಡಿ ಇರ್‍ಲಿ. ಎಕ್ಸೈಸ್ ಕಂಟ್ರಾಕ್ಟರ್‌ಗೆ ಫೋನ್ ಮಾಡಿ ಇವತ್ತು ಅಲ್ಲಿನ ಎಲ್ಲಾ ವ್ಯವಸ್ಥೆಯನ್ನು ನೋಡ್ಕೊಳ್ಳೋಕೆ ಹೇಳು. ಊಟ, ತಿಂಡಿ, ಡ್ರಿಂಕ್ಸ್, ಒಳ್ಳೆ ಫಿಗರ್ಗುಳು ಎಲ್ಲಾ ವ್ಯವಸ್ಥೆ ಆಗ್ಲಿ. ಬೆಳಿಗ್ಗೆ ೧೦ ಗಂಟೆಗೆ ನಾನು ಅಲ್ಲಿಗೆ ಹೋದಾಗ ಅವರೆಲ್ಲಾ ಫುಲ್ ಖುಷ್ ಆಗಿರಬೇಕು, ಗೊತ್ತಾಯಿತಾ ?''

ಸಿ.ಎಂ. ಆದೇಶಕ್ಕೆ ಪಿ.ಎ. ಗೋಣು ಅಲ್ಲಾಡಿಸಿ ಹೊರಟ.

ಸಿ.ಎಂ. ಕಾರು ೪೨೦ ರೆಸಾರ್ಟ್ ಮುಂದೆ ಬಂದು ನಿಲ್ಲುತ್ತಿದ್ದಂತೆ ಅಲ್ಲಿ ತಂಗಿದ್ದ ಬಂಡಾಯಗಾರರು ಓಡಿಬಂದು ಸ್ವಾಗತಿಸಿದರು. ಅವರತ್ತ ಕಷ್ಟಪಟ್ಟು ಹಲ್ಲು ಕಿಸಿದ ಸಿ.ಎಂ. ಮುನ್ನಡೆದಂತೆ ಅವರು ಹಿಂಬಾಲಿಸಿದರು.

''ನಿನ್ನೆ ಎಲ್ಲಾ ವ್ಯವಸ್ಥೆ ಸರಿ ಇತ್ತಾ'' – ಸಿ.ಎಂ. ವಿಚಾರಿಸಿದ್ದೇ ತಡ.

''ಓಹೋ... ಎಕ್ಸಲೆಂಟ್... ನಮ್ಗೆ ತುಂಬಾ ಖುಷಿ ಆಯ್ತು'' ಅವರೆಲ್ಲಾ ಒಕ್ಕೊರಲಿನಿಂದ ತಲೆ ತೂಗಿದರು. ಕೆಲವರು ರಾತ್ರಿ ಹ್ಯಾಂಗೋವರ್‌ನಿಂದ ಪಾರಾಗದೆ ಇಡೀ ದೇಹವನ್ನೇ ತೂಗಿದರು.

''ಓಕೆ, ನೀವೆಲ್ಲಾ ಇಲ್ಲಿರಿ, ಚಿಪ್ಪಾಟು, ನೀವು ಬನ್ನಿ'' ಎಂದು ಸಿ.ಎಂ. ಅವರಿಗೆಂದು ಮೀಸಲಾಗಿದ್ದ ಕೊಠಡಿಗೆ ನಡೆದ. ಚಿಪ್ಪಾಟು ಅವರನ್ನು ಅನುಸರಿಸಿದ.

''ನೋಡು ಚಿಪ್ಪಾಟು, ನನ್ನನ್ನು ಮಂತ್ರಿ ಮಾಡ್ಬೇಕೂ ಅಂತ ಇವರ್ನೆಲ್ಲಾ ಕಟ್ಕೊಂಡು ಬಂಡಾಯ ಹೂಡಿದ್ದೀಯ, ನಂಗೆ ಸ್ವಲ್ಪ ಟೈಂ ಕೊಡು. ಪ್ರಯತ್ನಿಸ್ತೀನಿ. ಈಗ ನನ್ನ ಪಿ.ಎ. ತಂದ್ಕೊಡೋ ಒಂದು ಸಿ.ಡಿ. ನೋಡಿ ಪ್ರೆಸ್‌ನವರಿಗೆ ಏನು ಹೇಳ್ತಿಯೋ ಹೇಳು. ಇನ್ನು ೨೦ ನಿಮಿಷದಲ್ಲಿ ಪ್ರೆಸ್, ಮಿಡಿಯಾ ಇಲ್ಲಿರುತ್ತೆ ಗುಡ್‌ಲಕ್'' – ಎದುರು ನಿಂತವನ ಪ್ರತಿಕ್ರಿಯೆಗೂ ಕಾಯದೆ ಸಿ.ಎಂ. ಕಾರನ್ನೇರಿ ಹೊರಟ.

ಸಿ.ಡಿ. ನೋಡಿದ ಚಿಪ್ಪಾಟು ಮುಖ ಅಪ್ಪಚ್ಚಿಯಾಯಿತು. ಮಂತ್ರಿಗಿರಿ ಹಾಳಾಗ್ಲಿ, ಮಾನಮರ್ಯಾದೆ ಉಳಿದ್ರೆ ಸಾಕು ಅಂತ ಅನ್ನಿಸಿತು.

ಮರುದಿನ ಪತ್ರಿಕೆಗಳಲ್ಲಿ:

''ಶೂಬೂರಪ್ಪನೇ ನಮ್ಮ ನಾಯಕರು. ನಮ್ಮ ಮಧ್ಯೆ ಯಾವುದೇ ಭಿನ್ನಮತವಿಲ್ಲ. ಭಿನ್ನಮತ ಮಾಧ್ಯಮದವರ ಸೃಷ್ಟಿ...'' ಇತ್ಯಾದಿ ಇತ್ಯಾದಿ ಸುದ್ದಿ ರಾರಾಜಿಸಿದವು.

''ಈ ಸಿ.ಎಂ. ಮಹಾತಂತ್ರಿ, ಅಲ್ಲ... ಅಲ್ಲ... ಮಹಾಕಂತ್ರಿ...'' ಬಂಡಾಯಗಾರರ ನಾಯಕ ಚಿಪ್ಪಾಟು ನಂಜ ತನ್ನಷ್ಟಕ್ಕೆ ತಾನೇ ಗೊಣಗುತ್ತಿದ್ದ.

ಕಿರಣ

# ಹೊಟ್ಟೆಕಿಚ್ಚು



ರಡ್‌ಯಾರ್ಡ್ ಕಿಪ್ಲಿಂಗ್ ಆಂಗ್ಲಭಾಷೆಯ ಸುಪ್ರಸಿದ್ಧ ಕತೆಗಾರ, ಕವಿ. ಆತನ ಪ್ರತಿಭೆಯನ್ನು ಕುರಿತು ಇನ್ನೊಬ್ಬ ಇಂಗ್ಲಿಷ್ ಲೇಖಕ ಸಾಮರ್‌ಸೆಟ್ ಮಾಮ್ ಹೀಗೆ ಹೇಳಿದ್ದಾನೆ: ''ಕಿಪ್ಲಿಂಗ್ ನಮ್ಮ ಬಹಳ ದೊಡ್ಡ ಕತೆಗಾರ. ಅವನನ್ನು ಯಾರಾದರೂ ಎಂದಾದರೂ ಸರಿದೂಗುತ್ತಾರೆ ಎಂದು ನಾನು ನಂಬಲಾರೆ. ಅವನನ್ನು ಮೀರಿಸುವುದಂತೂ ಆಗದ ಮಾತು.''

ಕಿಪ್ಲಿಂಗ್‌ನ 'ಜಂಗಲ್ ಬುಕ್' ಎಂಬ ಪ್ರಾಣಿಗಳನ್ನು ಕುರಿತ ಕತೆ ಅದ್ವಿತೀಯ ಮಕ್ಕಳ ಸಾಹಿತ್ಯ. ಈ ಕತೆಗಳಲ್ಲಿ ತೋಳಗಳ ನಡುವೆ ಬೆಳೆದ ಮಾನವ ಶಿಶು 'ಮೌಗ್ಲಿ' ಎಂಬ ಪಾತ್ರವೊಂದು ಚಿತ್ರಿತವಾಗಿದೆ. ಈ ಮೌಗ್ಲಿ ಮಾನವರನ್ನು ಕುರಿತು ಆಡುವ ಮಾತೊಂದು ಯಾವಾಗಲೂ ನನ್ನನ್ನು ಕಾಡುತ್ತಲೇ ಇರುತ್ತದೆ: ''ಈ ಮನುಷ್ಯರು ಸದಾ ಇತರರಿಗೆ ಬಲೆಗಳನ್ನು ಹೆಣೆಯುತ್ತಲೇ ಇರುತ್ತಾರೆ; ಇಲ್ಲದಿದ್ದರೆ ಅವರಿಗೆ ಸಮಾಧಾನ ಆಗುವುದೇ ಇಲ್ಲ'' ಎನ್ನುವುದು ಮೌಗ್ಲಿಯ ಅಭಿಪ್ರಾಯ. ತೋಳಗಳು ಮಹಾ ಅಪಾಯಕಾರಿ ಪ್ರಾಣಿಗಳೆಂದು ನಾವು ಭಾವಿಸುತ್ತೇವೆ. ಆದರೆ ಅಂತಹ ತೋಳಗಳ ಸಹವಾಸದಲ್ಲಿ ಬೆಳೆದು ಬಂದ ಮೌಗ್ಲಿ ಮಾನವರನ್ನು ಕುರಿತು ಮಾಡುವ ಆಪಾದನೆ ತುಂಬ ಗಂಭೀರವಾದ ಹಾಗೂ ಅಷ್ಟೇ ಸತ್ಯವಾದ ಮಾತು.



ಮಾನವನ ಸ್ವಭಾವವೇ ಅಂಥದ್ದು. ಇದ್ದುದರಲ್ಲಿ ತೃಪ್ತಿ ಕಾಣದೆ ಇಲ್ಲದಿರುವುದನ್ನು ಅರಸುವುದು ಅವನ ಜಾಯಮಾನ. ಪ್ರಾಣಿಗಳ ಬದುಕಿನಲ್ಲಿ ಕಂಡುಬರುವ ಸಂತೃಪ್ತಿ ಮಾನವ ಜೀವಿಗಳಲ್ಲಿ ಕಾಣಬರುವುದಿಲ್ಲ. ಈ ಸಂತೃಪ್ತಿಯ ಹುಡುಕಾಟದಲ್ಲಿ ಸದಾ ತೊಳಲಾಡುವ ನಾವು ಇತರರನ್ನು ನಮ್ಮ ಶತ್ರುಗಳೆಂದೋ ಪ್ರತಿಸ್ಪರ್ಧಿಗಳೆಂದೋ ಪರಿಗಣಿಸುತ್ತೇವೆ. ಇದರ ಪರಿಣಾಮವಾಗಿ ಅವರನ್ನು ಅನುಮಾನದಿಂದ ನೋಡುತ್ತೇವೆ; ಅವರ ಪ್ರತಿಯೊಂದು ನಡೆಯಲ್ಲೂ ಯಾವುದೋ ಗುಮಾನಿಯನ್ನು ಕಾಣುತ್ತೇವೆ; ಅವರ ಏಳಿಗೆಯನ್ನು ಸಹಿಸಿಕೊಳ್ಳದೆ, ಅವರ ಸೋಲನ್ನು ಹಾರೈಸುತ್ತೇವೆ. ನಮ್ಮ ಈ 'ವಿಕೃತ' ಪ್ರವೃತ್ತಿಗಳು ನಮಗೆ ಯಾವುದೇ ಬಗೆಯ ಲಾಭವನ್ನೂ ತಂದುಕೊಡುವುದಿಲ್ಲ. ಹೀಗಿರುವಾಗ ನಮ್ಮ ಈ ಎಲ್ಲ ಈರ್ಷ್ಯೆ, ಗುಮಾನಿ, ದುರಾಲೋಚನೆಗಳು ಅರ್ಥವಿಲ್ಲದ ಅನಾವಶ್ಯಕ ಮಾನಸಿಕ ಲಹರಿಗಳು ಮಾತ್ರವೇ ಆಗಿ ಪರಿಣಮಿಸುತ್ತವೆ. ಇವು ನಮ್ಮಲ್ಲಿ ಅಂತರ್ಗತವಾಗಿರುವ ಹೊಟ್ಟೆಕಿಚ್ಚಿನ ಅಭಿವ್ಯಕ್ತಿಗಳು.

ಡಿ.ವಿ.ಜಿ. ಈ ವಿಚಾರವನ್ನು ಅದ್ಭುತವಾಗಿ ಪ್ರತಿಪಾದಿಸಿದ್ದಾರೆ.

*ಹೊಟ್ಟೆಯೊಂದರ ರಗಳೆ ಸಾಲದೆಂದೇನೋ ವಿಧಿ ।*
*ಹೊಟ್ಟೆಕಿಚ್ಚಿನ ಕಿಡಿಯ ನೆಟ್ಟಿಹನು ನರನೊಳ್ ॥*
*ಹೊಟ್ಟೆ ತುಂಬಿದ ತೋಳ ಮಲಗೀತು; ನೀಂ ಪೆರರ ।*
*ದಿಟ್ಟಿಸುತ ಕರಬುವೆಯೋ – ಮಂಕುತಿಮ್ಮ ॥*

'ಹೊಟ್ಟೆಕಿಚ್ಚು' ಒಂದು ಬಗೆಯ ಮಾನಸಿಕ ನಿರ್ಬಂಧ. ಅದರ ಮೂಲಕ ನಮಗೆ ಯಾವುದೇ ಭಾಗ್ಯ ಲಭಿಸುವುದಿಲ್ಲ. ವಾಸ್ತವವಾಗಿ, ಇತರರನ್ನು ಕಂಡು ಕರುಬುವ ಬದಲು, ಅವರನ್ನು ಪ್ರೋತ್ಸಾಹಿಸಿ, ಬೆಂಬಲಿಸಿ, ಅವರ ಕಾರ್ಯಸಾಧನೆಗಳಲ್ಲಿ ಭಾಗಿಯಾಗುವ ಮೂಲಕ ನಮಗೆ ಆಗುವ ಲಾಭವೇ ಹೆಚ್ಚು. ಈ ಬಗೆಯ ಸಹಕಾರದಿಂದ ನಾವು ಅವರ ಪ್ರೀತಿ, ವಿಶ್ವಾಸಗಳಿಗೆ ಪಾತ್ರರಾಗಬಹುದು. ಮಿಗಿಲಾಗಿ, ಇತರರ ಗೆಲುವಿನಲ್ಲಿ ತಾದಾತ್ಮ್ಯಕವಾಗಿ ಗುರುತಿಸಿಕೊಳ್ಳುವ ಮೂಲಕ ನಮ್ಮ ಮಾನಸಿಕ ಸ್ವಾಸ್ಥ್ಯವನ್ನು ಕಾಯ್ದುಕೊಳ್ಳಲೂಬಹುದು.

ಮಾನವನ ಎಲ್ಲ ಮಹತ್ ಸಾಧನೆಗಳ ಹಿನ್ನೆಲೆಯಲ್ಲಿ ಪರಸ್ಪರ ನಂಬಿಕೆ, ಸಹಕಾರ, ಪ್ರೋತ್ಸಾಹ, ಹೊಂದಾಣಿಕೆಗಳನ್ನು ಕಾಣಬಹುದು. ಕಟ್ಟುವ ಕೆಲಸ, ಅದು ಯಾವುದೇ ಇರಲಿ – ಅದು ಒಂದು ಸಂಸ್ಥೆಯನ್ನು ಬೆಳೆಸುವ ಕೆಲಸವಾಗಿರಬಹುದು ಅಥವಾ ದೇಶವನ್ನು ಪ್ರಗತಿಯ ಹಾದಿಯಲ್ಲಿ ಕೊಂಡೊಯ್ಯುವ ಕೆಲಸ ಆಗಿರಬಹುದು – ಅವುಗಳಿಗೆ ಪರಸ್ಪರ ನಂಬಿಕೆ ಮತ್ತು ಸಹಕಾರಗಳೇ ಆಧಾರ. ಹೊಟ್ಟೆಕಿಚ್ಚನ್ನು ಮರೆತು, ಕಟ್ಟುವ ಕೆಲಸದಲ್ಲಿ ಕೈಜೋಡಿಸುವುದು ಇಂದಿನ ಅಗತ್ಯ.

**ಡಾ॥ ಹೆಚ್. ಎಸ್. ಈಶ್ವರ**
ಹೆಚ್.ಐ.ಜಿ. ೧೧, ಕೆ.ಹೆಚ್.ಬಿ. ಕಾಲೋನಿ, ಮೊದಲನೇ ಹಂತ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯




**೯-೫-೨೦೧೦ರಂದು ನವಕರ್ನಾಟಕದ ಎಂಟು ಪುಸ್ತಕಗಳ ಲೋಕಾರ್ಪಣೆ ಜರುಗಿತು. ಡಾ॥ ಎಚ್. ಆರ್. ಕೃಷ್ಣಮೂರ್ತಿ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಜಿ.ವಿ.ಗಣೇಶಯ್ಯ (ಲೇ. ವಿಚಿತ್ರ ಸತ್ಯಗಳು ಕುತೂಹಲಕರ ಕತೆಗಳು), ಡಾ॥ ಕೆ. ವೆಂಕಟರಂಗ ನಾಯಕ ಮತ್ತು ಡಾ॥ ಬಿ. ಎಸ್. ಸಿದ್ಧರಾಮಯ್ಯ (ಲೇ. ಶಕ್ತಿಯ ಬಳಕೆಯಲ್ಲಿ ಯುಕ್ತಿ), ಟಿ. ಆರ್. ಅನಂತರಾಮು (ಲೇ. ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯ - ಸಾಧಕನ ಹಜ್ಜೆಗಳು), ಡಾ॥ ಎಚ್. ಆರ್. ಕೃಷ್ಣಮೂರ್ತಿ, ಡಾ॥ ಮಹಾಬಲೇಶ್ವರ ರಾವ್ (ಲೇ. ಮೆಕಾಲೆಯ ಮಕ್ಕಳು ಮತ್ತು ಮನದ ಮಾಮರದ ಕೋಗಿಲೆ), ಪ್ರೊ॥ ಕೆ. ಸುಧಾರಾವ್ (ಸ್ತ್ರೀ ಮಾರಕ ವ್ಯಾಧಿ ಸ್ತನ ಕ್ಯಾನ್ಸರ್ ಕೃತಿಯ ಲೇಖಕ ಪ್ರೊ॥ ಎ. ರಮೇಶ್ ರಾವ್ ಅವರ ಪತ್ನಿ) ಡಾ॥ ಶ್ರೀನಿವಾಸ ಕಕ್ಕಿಲ್ಲಾಯ (ಲೇ. ಫ್ಲೂ ಎಂದು ಹೆದರುವಿರೇಕೆ ?) ಮತ್ತು ಶ್ರೀ ಆರ್. ಎಸ್. ರಾಜಾರಾಮ್.**

# ನವಕರ್ನಾಟಕ ೫೦ರ ಸಂಭ್ರಮದಲ್ಲಿ

## ಚಿನ್ನದ ಹಬ್ಬಕ್ಕೆ ಚಂದದ ಕೊಡುಗೆ

ಆಗಸ್ಟ್ 2010ರಲ್ಲಿ ಲೋಕಾರ್ಪಣೆ * ಇಂದೇ ಕಾದಿರಿಸಿ * ರೂ. 1000 ಉಳಿಸಿ




1200 ಪುಟಗಳು. ಆಕಾರ : ಡೆಮಿ ¼ (22 x 28 ಸೆಂಮೀ). ಎರಡು ಸಂಪುಟಗಳು. ರಟ್ಟಿನ ಪೆಟ್ಟಿಗೆಯಲ್ಲಿ.

*ಸಂಪಾದಕರು : ಪ್ರೊ॥ ಎಂ. ಎಚ್. ಕೃಷ್ಣಯ್ಯ, ಡಾ॥ ವಿಜಯಾ ಮತ್ತು ಶ್ರೀ ಸಿ. ಆರ್. ಕೃಷ್ಣರಾವ್*

ಆರ್ಟ್ ಕಾಗದದ ಮೇಲೆ ಬಹುವರ್ಣದಲ್ಲಿ ಮುದ್ರಣವಾಗುವ ಮಹತ್ವದ ಕೃತಿ. ಕರ್ನಾಟಕ ಕಲಾ ಪರಂಪರೆಯನ್ನು ಅನಾವರಣಗೊಳಿಸುವ ಮಹಾಪ್ರಯತ್ನ. ಸುಮಾರು 4500ಕ್ಕೂ ಹೆಚ್ಚು ಅಪೂರ್ವ ವರ್ಣ ಹಾಗೂ ಕಪ್ಪುಬಿಳುಪು ಚಿತ್ರಗಳು. 9 ಅಧ್ಯಾಯಗಳು, 55 ಪರಿಣತರ 50 ಲೇಖನಗಳ ಬೃಹತ್ ಗ್ರಂಥ.

**ನವಕರ್ನಾಟಕದ ಈ ವಿಶಿಷ್ಟ ಯೋಜನೆ ಸಾಂಸ್ಕೃತಿಕ ರಂಗಕ್ಕೆ ಮಹಾನ್ ಕೊಡುಗೆ. ನಾಡು ನುಡಿಗೆ ವಿಶೇಷ ಕಾಣಿಕೆ**

ಮೊದಲೇ ಕಾದಿರಿಸುವವರಿಗೆ ಕೃತಿಯ ಸಿಡಿ/ಡಿವಿಡಿ ಉಚಿತ. ತ್ವರೆ ಮಾಡಿ ! ರಿಯಾಯಿತಿ ಪಡೆಯಲು ಮುಂಗಡ 500 ರೂಪಾಯಿಗಳನ್ನು ಇಂದೇ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್ ವಿಳಾಸಕ್ಕೆ ಕಳಿಸಿ ನಿಮ್ಮ ಹೆಸರನ್ನು ನೋಂದಣಿ ಮಾಡಿಕೊಳ್ಳಿ, ಹಣವನ್ನು ಬ್ಯಾಂಕ್ ಡ್ರಾಫ್ಟ್ ಅಥವಾ ಮನಿ ಆರ್ಡರ್ ಮೂಲಕ ಕಳಿಸಿ. ಉಳಿದ ಹಣವನ್ನು (ರೂ. 1500) ಒಟ್ಟಿಗೆ ಅಥವಾ ಕಂತುಗಳಲ್ಲಿ ಆಗಸ್ಟ್ ತಿಂಗಳೊಳಗೆ ಪಾವತಿಸಲು ಅವಕಾಶವಿರುತ್ತದೆ. ಕೋರ್‌ಬ್ಯಾಂಕಿಂಗ್ ಸೌಲಭ್ಯ ಇರುವ ಯಾವುದೇ ಬ್ಯಾಂಕ್‌ನಿಂದ ನಮ್ಮ ಬ್ಯಾಂಕ್ ಅಕೌಂಟ್‌ಗೆ ನಗದು ಅಥವಾ ಚೆಕ್ ಮೂಲಕ ಹಣವನ್ನು ಜಮಾ ಮಾಡಬಹುದು. (Current A/c No. 0788201010612; IFSC Code CNRB0000788; Canara Bank, Madhavnagar Branch. ಹೀಗೆ ಜಮಾ ಮಾಡುವವರು ಬ್ಯಾಂಕ್ ಚಲನ್‌ನ ಜೆರಾಕ್ಸ್ ಪ್ರತಿ ಹಾಗೂ ತಮ್ಮ ಹೆಸರು, ವಿಳಾಸವನ್ನು ಕೆಳಕಂಡ ನಮ್ಮ ಪ್ರಧಾನ ಕಛೇರಿಗೆ ಕಳಿಸಬೇಕು).

***(ಹಣವನ್ನು ನವಕರ್ನಾಟಕದ ಶಾಖೆಗಳಲ್ಲಿ, ಮಳಿಗೆಗಳಲ್ಲಿ ಅಥವಾ ಪುಸ್ತಕ ಪ್ರದರ್ಶನಗಳಲ್ಲಿ ಕೂಡ ಪಾವತಿಸಬಹುದು)***

ಕೃತಿಯ ಮುಖ ಬೆಲೆ
**ರೂ. 3000**
ಪ್ರಕಟಣಪೂರ್ವ ಬೆಲೆ
**ರೂ. 2000**
ಭಾರಿ ಉಳಿತಾಯ
**ರೂ. 1000**

*ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

**ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001.**

**ದೂರವಾಣಿ : 30578022, 22203580. ಫ್ಯಾಕ್ಸ್ : 30578023.**

e-mail : navakarnataka@gmail.com. URL : www.navakarnataka.com blog : http://navakarnataka.blogspot.com

ಕರ್ನಾಟಕ ಕಲಾದರ್ಶನದ ಮಾದರಿ ಪುಟಗಳಿಗೆ ನೋಡಿ : http://navakarnataka.blogspot.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

